# ಅಭಿವಂದನ

[1969ನೆಯ ನವಂಬರ 5-6ರಂದು ನಡೆದ
ಶಿವರಾಮ ಕಾರಂತ ಅಭಿನಂದನ ಉತ್ಸವದ ಸ್ಮೃತಿಸಂಚಯ]

ಸಂಪಾದಕರು:

ಕು. ಶಿ. ಹರಿದಾಸ ಭಟ್ಟ

ಎನ್. ತಿರುಮಲೇಶ್ವರ ಭಟ್ಟ





ಮಹಾತ್ಮಾ ಗಾಂಧೀ
ಮೆಮೋರಿಯಲ್ ಕಾಲೇಜು, ಉಡುಪಿ-೨.

ನವಂಬರ 5–6, 1969ರಂದು ಉಡುಪಿಯಲ್ಲಿ ನಡೆದ ಕಾರಂತ ಅಭಿನಂದನೋತ್ಸವದ ಸಮಯದಲ್ಲಿ ಮಾಡಲಾದ ಅಧ್ಯಕ್ಷ ಭಾಷಣವೇ ಮೊದಲಾದ ಭಾಷಣಗಳೂ, ಓದಲಾದ ಪ್ರಬಂಧಗಳೂ ಈ ಪುಸ್ತಕದಲ್ಲಿ ಅಡಕವಾಗಿವೆ. ವಿವಿಧ ಗೋಷ್ಠಿಗಳಲ್ಲಿ ನಡೆದ ಚರ್ಚೆಯೂ ಸಂಗ್ರಹವಾಗಿ ಬಂದಿದೆ. ಅಲ್ಲದೆ ಇಲ್ಲಿ ಮುದ್ರಿಸಿದ ಪತ್ರಿಕಾ ಪ್ರಪಂಚದ ಅಭಿಪ್ರಾಯಗಳು, ಉತ್ಸವಕ್ಕೆ ಆಗಮಿಸಿದ, ಆಗಮಿಸದ ಮಹನೀಯರು ಬರೆದ ಓಲೆಗಳು ಉತ್ಸವದ ಯಶಸ್ಸಿಗೆ ಸಾಕ್ಷಿ. ಇವಕ್ಕೆಲ್ಲ ಕಳಸವಿಟ್ಟಂತೆ ಸಂಘಟಕರಾದ ಕು. ಶಿ. ಹರಿದಾಸ ಭಟ್ಟರು ಉಡುಪಿಯ ಸಾಹಿತ್ಯೋತ್ಸವಗಳ ಕರ್ಮಕಥೆಯನ್ನು ನಿವೇದನೆಯ ರೂಪದಲ್ಲಿ ಹೇಳಿದ್ದಾರೆ. 'ಅಭಿವಂದನ' ಅಂದಿನ ಅಭ್ಯಾಗತರಿಗೂ ಇಂದಿನ ಓದುಗರಿಗೂ ನಿಜವಾದ ಒಂದು ಸ್ಮರಣ ಸಂಪುಟವಾಗುವುದು ನಿಸ್ಸಂಶಯ.

ಬೆಲೆ: ಸಾದಾ ಪ್ರತಿ ರೂ. ೫
ಉತ್ತಮ ಪ್ರತಿ ರೂ. ೧೫



# ಅಭಿವಂದನ

[1969ನೆಯ ನವಂಬರ 5-6ರಂದು ನಡೆದ
ಶಿವರಾಮ ಕಾರಂತ ಅಭಿನಂದನ ಉತ್ಸವದ ಸ್ಮೃತಿಸಂಚಯ]



ಮಹಾತ್ಮಾ ಗಾಂಧೀ
ಮೆಮೋರಿಯಲ್ ಕಾಲೇಜು, ಉಡುಪಿ-೨.



# ಮೊದಲ ಮಾತು

ಕಾರಂತ ಅಭಿನಂದನ ಉತ್ಸವಕ್ಕೆ ಪೂರ್ಣವಿರಾಮ ಒಂದು ವರ್ಷದ ತರುವಾಯ 'ಅಭಿವಂದನ'ದ ಪ್ರಕಟನೆಯ ರೂಪದಲ್ಲಿ ಬೀಳುತ್ತಿದೆ. ಉತ್ಸವ ಕಾಲದಲ್ಲಿ ಎರಡು ಮೂರು ಧ್ವನಿಮುದ್ರಣ ಯಂತ್ರಗಳನ್ನು ಸಿದ್ಧಗೊಳಿಸಿದ್ದರೂ, ಅವು ಸಕಾಲದಲ್ಲಿ ಕೆಟ್ಟು ಗೆಳೆಯ ವಿ. ಎಂ. ಇನಾಂದಾರರು ಪ್ರೀತಿಯಿಂದ ಮುದ್ರಿಸಿಕೊಂಡ ಟೇಪಿನ ಮುದ್ರಿಕೆಯನ್ನೇ ಇಲ್ಲಿ ಬಳಸಲಾಗಿದೆ. ಈ ಮುದ್ರಿಕೆಯನ್ನು ಬರಹವಾಗಿ ಮೂಡಿಸುವ ಶ್ರಮದಾಯಕ ಕೆಲಸವನ್ನು ಗೆಳೆಯ ಮಲ್ಲಿಕಾರ್ಜುನಯ್ಯ ಮತ್ತು ಸಂಗಡಿಗರು ಮಾಡಿಕೊಟ್ಟರು. ಇವರಿಬ್ಬರ ಸಹಕಾರವಲ್ಲದೆ ಹೋದರೆ ಕಾರಂತರ ಅಂದಿನ ಉತ್ತಮ ಉಪನ್ಯಾಸ 'ಪಂಚಭೂತ'ಗಳ ಪಾಲಾಗುತ್ತಿತ್ತು. 'ಅಭಿವಂದನ'ದ ಸಂಪಾದನಾ ಕಾರ್ಯದಲ್ಲಿ ನನ್ನ ಸಹೋದ್ಯೋಗಿ ಮಿತ್ರರಾದ ನೀರ್ಕಜೆ ತಿರುಮಲೇಶ್ವರ ಭಟ್ಟರು ದುಡಿದಿದ್ದಾರೆ. ಮಣಿಪಾಲ ಪವರ್ ಪ್ರೆಸ್ಸಿನವರು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ; ಗ್ರಾಮಸೇವಾ ಪ್ರತಿಷ್ಠಾನದವರು ಆರ್ಥಿಕ ಸಹಾಯ ಒದಗಿಸಿದ್ದಾರೆ; ಅಭಿನಂದನ ಉತ್ಸವ ಸಮಿತಿಯ ಅಲ್ಪ ಉಳಿತಾಯವನ್ನು ಇದರಲ್ಲೇ ಹೂಡಲಾಗಿದೆ. ಪ್ರಬಂಧಗಳು, ಚರ್ಚೆಗಳು, ಓಲೆಗಳು, ಪತ್ರಿಕಾಪ್ರಪಂಚದ ಅಭಿಪ್ರಾಯಗಳು ಇವುಗಳ ಜತೆಗೆ ಸಂಘಟಕನಾದ ನನ್ನ ಆತ್ಮ ನಿವೇದನೆಯನ್ನೂ ಸೇರಿಸಿ 'ಅಭಿವಂದನ' ಅಂದಿನ ಅಭ್ಯಾಗತರಿಗೂ ಮತ್ತು ಇಂದಿನ ಓದುಗರಿಗೂ ನಿಜವಾದ ಒಂದು ಸ್ಮರಣ ಸಂಪುಟ ಆದೀತು ಎಂಬ ಬಯಕೆ ಇಲ್ಲಿ ಕೈಗೂಡಿದೆ. ಇದನ್ನು ಆಗಮಾಡಿದ ಪ್ರಬಂಧಕಾರರಿಗೂ, ಚರ್ಚಾಳುಗಳಿಗೂ, ಪತ್ರಿಕೋದ್ಯಮಿಗಳಿಗೂ – ಎಲ್ಲರಿಗೂ ವಂದನೆ.

ನವಂಬರ 20, 1970
ಉಡುಪಿ – 2

ಕು. ಶಿ. ಹರಿದಾಸ ಭಟ್ಟ

# ಪರಿವಿಡಿ



**ಸಿದ್ಧಿಯ ಒಂದು ಮುಖ**

ಕಾರಂತ ನಿರ್ದೇಶಿತ ಯಕ್ಷಗಾನ ಅಪೆರಾದಲ್ಲಿ ರಾಕ್ಷಸ ಪ್ರವೇಶ
(ಪಾತ್ರಧಾರಿ: ಸಕ್ಕಟ್ಟು ಲಕ್ಷ್ಮೀನಾರಾಯಣ)



"ಶ್ರೀ ಶಿವರಾಮ ಕಾರಂತೋ ವಿಜಯತಾಂ"
ಡಾ। ಚಟರ್ಜಿಯವರಿಂದ ಹರಕೆ

ಕರ್ನಾಟ ಹಾಗೂ ಭಾರತದ ವರಪುತ್ರನೊಬ್ಬನಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸಬೇಕಾಗಿ ನಾವು ಈ ಸಮಾರಂಭದಲ್ಲಿ ಸೇರಿದ್ದೇವೆ. ಶ್ರೀಮಾನ್ ಕೋಟ ಶಿವರಾಮ ಕಾರಂತರು ಹಿರಿಯ ಲೇಖಕರು, ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ. ಸಾಹಿತ್ಯ, ವಿಜ್ಞಾನ, ಕಲೆಗಳ ಕ್ಷೇತ್ರದಲ್ಲಿ ನಿರಂತರ ಪರಿಶ್ರಮದಿಂದ ನಾಡ-ನುಡಿಯ ಸೇವೆ ಗೈದ ಈ ವ್ಯಕ್ತಿ ಇದೀಗ ತನ್ನ ಬಾಳ್ವೆಯ ಅರುವತ್ತೆಂಟನೇ ವಯಸ್ಸಿಗೆ ಬಂದು ಮುಟ್ಟಿದ್ದಾರೆ. ಅವರನ್ನು ಅಭಿನಂದಿಸುವ ಈ ಸಮಾರಂಭದ ಅಧ್ಯಕ್ಷತೆ ವಹಿಸಲು ನನಗೆ ಆಹ್ವಾನವನ್ನಿತ್ತ ಅಖಿಲ ಕರ್ನಾಟಕ ಶಿವರಾಮ ಕಾರಂತ ಅಭಿವಂದನ ಸಮಿತಿಯ ವ್ಯವಸ್ಥಾಪಕರಿಗೆ ಮೊತ್ತಮೊದಲಾಗಿ ನನ್ನ ಕೃತಜ್ಞತೆಗಳನ್ನು ಹೇಳಬೇಕಾಗಿದೆ.

ಕಾರಂತರಂಥ ಧೀಮಂತ ಕಲಾವಿದರನ್ನು ಗೌರವಿಸುವ ಮೂಲಕ ನಾವು ನಮ್ಮ ಋಷಿಋಣವನ್ನು ತೀರಿಸಿದಂತಾಗುತ್ತದೆ. ಕಾರಂತರು ನಮ್ಮ ತಲೆಮಾರಿನ ಋಷಿತುಲ್ಯ ವ್ಯಕ್ತಿ. ಇವರ ಋಣಾನುಬಂಧ ದೂರದ ಬಂಗಾಳದಲ್ಲಿರುವ ನನ್ನನ್ನು ಪಶ್ಚಿಮ ಘಟ್ಟದ, ಅರಬೀ ಸಮುದ್ರದ ಈ ಕರೆನಾಡಿನ ಸೀಮೆಗೆ ಕರೆತಂದಿದೆ. ನಾನು ಈ ಸೀಮೆಗೆ ಯಾತ್ರಿಕನ ಭಾವ ಹೊತ್ತು ಬಂದಿದ್ದೇನೆ. ಹೆಸರಾಂತ ಕರ್ನಾಟ-ಮಹಾರಾಷ್ಟ್ರಗಳ ಪಡುವಣ ಕಡಲಂಚಿಗೆ ಬೆಸೆದುಕೊಂಡ ಕೊಂಕಣಸೀಮೆ ಇದು. ಕೇರಳ ಮತ್ತು ತಮಿಳುನಾಡಿನ ಪ್ರದೇಶವನ್ನು ಉತ್ತರದ ಆರ್ಯಾವರ್ತ ಹಾಗೂ ದಕ್ಕಣದ ಪೀಠಭೂಮಿಯೊಡನೆ ಸೇರ್ಪಡೆಗೊಳಿಸುವ ಸಂಗಮಭೂಮಿ ಇದು. ಕಾಶ್ಮೀರ-ಪಂಜಾಬ, ಸಿಂಧ-ರಾಜಸ್ತಾನ, ಉತ್ತರಪ್ರದೇಶ, ಬಿಹಾರ, ನೇಪಾಳ, ಬಂಗಾಳ, ಅಸ್ಸಾಮ್, ಒರಿಸ್ಸಾ, ಆಂಧ್ರ, ತಮಿಳ್ನಾಡು ಮೊದಲಾದ ಭಾರತದ ಇತರ ಪ್ರದೇಶಗಳಂತೆ ಕರ್ನಾಟ-ಮಹಾರಾಷ್ಟ್ರಗಳ ನೆಲಕ್ಕೆ ಸೇರಿರುವ ಪಶ್ಚಿಮಘಟ್ಟ-ಪಶ್ಚಿಮ ಸಮುದ್ರಗಳ ಮಧ್ಯದ ಈ ಸೀಮೆಗೂ ತನ್ನದೇ ಆದ ವಿಶಿಷ್ಟ ಗುಣಗಳಿವೆ. ಇಲ್ಲಿನ ನೆಲ, ಬೆಳೆ, ರೀತಿ-ನೀತಿ ಎಲ್ಲದರಲ್ಲೂ ವಿಲಕ್ಷಣತೆ ಇದೆ. ಕಡಲು-ಬೆಟ್ಟ, ಕಾಡು-ಹೊಲ, ತೋಟ-ಗದ್ದೆ ಜತೆಯಾಗಿ ಕಂಗೊಳಿಸುವ ವಿಲಕ್ಷಣ ನಿಸರ್ಗಸೌಂದರ್ಯದ ತಾಣ ಇದು. ಈ ನಿಸರ್ಗಸಂಪತ್ತಿನಿಂದ ಆಕರ್ಷಿತರಾಗಿ ಕಡಲಾಚೆಗಿನ ಅರಬ್, ಇಥಿಯೋಪಿಯಾ, ಗ್ರೀಸ್, ರೋಮ್, ಇಜಿಪ್ಟ್ ಮೊದಲಾದ ದೇಶಗಳ ಜನ ವ್ಯಾಪಾರಕ್ಕಾಗಿ ಇಲ್ಲಿಗೆ ಬರುತ್ತಿದ್ದರು. ಕೊಂಕಣಸೀಮೆಯ ತೆಂಕಣ ದಿಕ್ಕಿನ ಕೇರಳದ ಕಡಲ ದಂಡೆಯನ್ನೂ ಬಂದರುಗಳನ್ನೂ ಎರಡು ಸಾವಿರ ವರ್ಷಗಳಷ್ಟು ಹಿಂದಿನ ಪ್ರಾಚೀನ ಸಂಗಮ್ ಯುಗದ ತಮಿಳುಭಾಷೆಯ ಕವಿಗಳು ಬಣ್ಣಿಸಿದ್ದಾರೆ. ಈ ವಲಯಕ್ಕೆ ಆ ಬಣ್ಣನೆ ಈಗಲೂ ಒಪ್ಪುವಂತಿದೆ:

"ಸಮೃದ್ಧವಾದ 'ಮುಚಿರಿ' ನಗರಕ್ಕೆ ಯವನರ (ಗ್ರೀಕರ) ಬೃಹತ್ ನೌಕೆಗಳು ಬಂಗಾರವನ್ನು ತುಂಬಿಸಿಕೊಂಡು ಬರುತ್ತವೆ. ಈ ನೌಕೆಗಳು ಕೇರಳದ 'ಪೆರಿಯಾರ್' ನದಿಯ ಬಿಳಿನೊರೆಯೊಡನೆ ಚೆಲ್ಲಾಟವಾಡಿ, ಇಲ್ಲಿನ ಒಳ್ಳೆಮೆಣಸನ್ನು ತುಂಬಿಸಿಕೊಂಡು ಹಿಂತಿರುಗುತ್ತವೆ. ಯವನ ವ್ಯಾಪಾರಿಗಳು ಈ ಬಂದರಿನಲ್ಲಿ ಬಂಗಾರ ಮಾರಿ ಒಳ್ಳೆ

ಮೆಣಸನ್ನು ಪಡೆಯುತ್ತಾರೆ; ಮೀನು ಮಾರಿ ಭತ್ತವನ್ನು ಪಡೆಯುತ್ತಾರೆ. ಈ ವ್ಯಾಪಾರಕ್ಕೆ ಹಿಮ್ಮೇಳವೆಂಬಂತೆ ಕಡಲ ತೆರೆಗಳ ಸ್ವರ ಕೇಳುತ್ತದೆ. 'ತೊಂಡಿ' ಎಂಬುದು ಕೇರಳದ ಇನ್ನೊಂದು ಬಂದರು. ಇದರ ಸುತ್ತಲೂ ತೆಂಗಿನ ಮರಗಳು, ವಿಶಾಲವಾದ ಭತ್ತದ ಬಯಲುಗಳು, ಮಳಲದಂಡೆ, ಉಪ್ಪುನೀರಿನ ಹೊಳೆ." ಕೇರಳದಂತೆ ಕೊಂಕಣ ಸೀಮೆಯೂ ವ್ಯಾಪಾರಕ್ಕೆ ಹೆಸರಾಂತ ಪ್ರದೇಶ. ಇಲ್ಲಿನ ಬಣ್ಣನೆ ಆ ಪ್ರದೇಶಕ್ಕೂ ಅನ್ವಯಿಸುತ್ತದೆ.

ಈ ಪಶ್ಚಿಮ ಕರಾವಳಿಯ ಪಟ್ಟಣಗಳ ಮೂಲಕ ಭಾರತದೇಶಕ್ಕೂ ಇತರ ದೇಶಗಳಿಗೂ ಸಂಪರ್ಕ ಬೆಳೆಯಿತು. ಈ ಸಂಪರ್ಕ ಸರಕುಗಳ ವ್ಯಾಪಾರಕ್ಕಷ್ಟೇ ಸೀಮಿತ ವಾಗಿರಲಿಲ್ಲ. ಸಾಂಸ್ಕೃತಿಕ ಮೌಲ್ಯಗಳಲ್ಲೂ, ಆಧ್ಯಾತ್ಮಿಕ ಹಾಗೂ ತಾತ್ವಿಕ ವಿಚಾರಗಳಲ್ಲೂ ಔದ್ಯಮಿಕ ಕೌಶಲಗಳಲ್ಲೂ ಕೊಡುಕೊಳೆ ಸಾಗಿತ್ತು. ಈ ಪಟ್ಟಣಗಳಲ್ಲಿ ಕೆಲವು ಕೊಂಕಣ ಸೀಮೆಗೆ ಉತ್ತರ ದಿಕ್ಕಿನಲ್ಲಿರುವ ಮುಂಬಯಿ ಹಾಗೂ ಗುಜರಾಥ್ ಪ್ರದೇಶಕ್ಕೆ ಸೇರಿದ ಓಖಾ, ದ್ವಾರಕಾ, ಪೋರ್‌ಬಂದರ್, ಮಂಗ್ರೋಲ್, ವೆರವಲ್, ಸೋಮನಾಥ್, ಡಿಯು, ಸಿಹಾರ್, ಗೋಘಾ, ಭಾವನಗರ, ಕೆಂಬೇ, ಬ್ರೋಚ್, ಸೂರತ್, ಸೊಪಾರಾ, ದಾಮನ್ ಮುಂತಾದ ಸ್ಥಳಗಳು. ಇನ್ನುಳಿದವು ಕೊಂಕಣಸೀಮೆಗೂ ಕೇರಳಕ್ಕೂ ಸೇರಿದ ಆಲಿಬಾಗ್, ಜಂಜಿರ, ರತ್ನಗಿರಿ, ವಿಜಯದುರ್ಗ, ಮಾಲ್ವನ್, ವೆಂಗುರ್ಲ, ಪಾಂಜಿಮ್ (ಗೋವಾ), ಕಾರವಾರ, ಕುಮಟಾ, ಹೊನ್ನಾವರ, ಕುಂದಾಪುರ, ಉಡುಪಿ (ಮತ್ತು ಮಣಿಪಾಲ), ಮಂಗಳೂರು, ಕಾಸರಗೋಡು, ಕನ್ನಾನೂರು, ಪೊನ್ನಾನಿ, ಕ್ರಾಂಗನೂರು, ಕೊಚ್ಚಿ, ಮಟ್ಟಂಚೇರಿ, ಆಲಪ್ಪೆ, ಕೊಲ್ಲಂ ಮೊದಲಾದ ಸ್ಥಳಗಳು.

ದಕ್ಷಿಣ ಭಾರತದ ಪ್ರಾಣದಂತಿರುವ ಮೂರು ದೊಡ್ಡ ನದಿಗಳು: ಗೋದಾವರಿ, ಕೃಷ್ಣಾ ಮತ್ತು ಕಾವೇರಿ. ಕೃಷ್ಣಾನದಿಯ ಉಪನದಿಗಳು: ಸೀನಾ, ಭೀಮಾ ಮತ್ತು ತುಂಗಭದ್ರಾ. ಇಷ್ಟೂ ನದಿಗಳು ಹುಟ್ಟಿದ್ದು ಪಶ್ಚಿಮ ಘಟ್ಟಗಳಲ್ಲಿ.

ಪುರಾತನ ಕಾಲದಿಂದಲೂ ಉತ್ತರ ಭಾರತದ ಜನ ಪಶ್ಚಿಮ ಕರಾವಳಿಯ ಮಾರ್ಗ ವಾಗಿ ದಕ್ಷಿಣ ಭಾರತಕ್ಕೆ ವಲಸೆ ಹೋಗುತ್ತಿದ್ದರೆಂದು ಕಾಣುತ್ತದೆ. ನಮ್ಮ ಪುರಾಣಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಶ್ರೀರಾಮನ ಹುಟ್ಟೂರು ಉತ್ತರ ಭಾರತದ ಅಯೋಧ್ಯೆ. ವನವಾಸಕ್ಕಾಗಿ ರಾಮನು ಸೀತಾಲಕ್ಷ್ಮಣರೊಡನೆ ದಕ್ಷಿಣಕ್ಕೆ ಬಂದಾಗ, 'ರಾಮಟೇಕ್', 'ಪಂಚವಟಿ, 'ಪಂಪಾ', 'ಕಿಷ್ಕಿಂಧಾ', 'ಮಾಲ್ಯಪರ್ವತ' ಮೊದಲಾದ ಸ್ಥಳಗಳನ್ನು ಹಾದು ಬರಬೇಕಾಯಿತು. ರಾಮಟೇಕ್ ನಾಗಪುರದ ಹತ್ತಿರವಿರುವ ಊರು. ಪಂಚವಟಿ ನಾಸಿಕದ ಹತ್ತಿರ ಗೋದಾವರಿಯ ತೀರದಲ್ಲಿದೆ. ಪಂಪಾ ಎಂದರೆ ಈಗಿನ ಹಂಪಿ. ನೀಲಗಿರಿ ಬೆಟ್ಟಕ್ಕೆ 'ಮಾಲ್ಯಪರ್ವತ'ವೆಂಬ ಹೆಸರು. ಉತ್ತರದ ಪರಶುರಾಮನಿಗೆ ಕೊಂಕಣ-ಕೇರಳ ಸೀಮೆಗಳೊಡನೆ ನಿಕಟ ಸಂಬಂಧ ಇತ್ತು. ಮಹಾರಾಷ್ಟ್ರದ 'ಚಿತ್ಪಾವನ' ಬ್ರಾಹ್ಮಣರು ಮತ್ತು ಕೇರಳದ ನಂಬೂದರಿ ಬ್ರಾಹ್ಮಣರು ಈ ಪ್ರದೇಶಕ್ಕೆ ಬಂದು ಪ್ರತಿಷ್ಠೆಗೊಂಡದ್ದು ಪರಶುರಾಮನ ಮೂಲಕ. ಉತ್ತರದ ಅಗಸ್ತ್ಯಋಷಿಯು ವಿಂಧ್ಯ ಪರ್ವತವನ್ನು ದಾಟಿ ದಕ್ಷಿಣದ ಕುಟಕ (ಕೊಡಗು) ವೆಂಬಲ್ಲಿಗೆ ಬಂದು, ತುಲಾಕಾವೇರಿ (ಕಾವೇರಿನದಿಯ ಉಗಮ)ಯಲ್ಲಿ ಸ್ವಲ್ಪಕಾಲ ನೆಲಸಿದ್ದನು. ಅಗ್ತಸ್ಯನಿಗೆ 'ವಾತಾಪಿ' ನಗರ

ದೊಡನೆ ಸಂಬಂಧವಿತ್ತು ಎಂದು ಪುರಾಣಗಳಲ್ಲಿ ಉಲ್ಲೇಖವಿದೆ. 'ವಾತಾಪಿ' ನಗರಕ್ಕೆ ಮತ್ತೆ 'ಬಾದಾಮಿ' ಎಂಬ ಹೆಸರು ಬಂತು. ಕ್ರಿಸ್ತಶಕ ೬ನೆಯ ಶತಮಾನದಲ್ಲಿ ಇದು ಚಾಲುಕ್ಯರ ರಾಜಧಾನಿಯಾಯಿತು. ಅರಬಿಸಮುದ್ರದ ಕರಾವಳಿಯುದ್ದಕ್ಕೂ ನೆಲಸಿರುವ 'ಕೊಂಕಣ ಸಾರಸ್ವತ ಬ್ರಾಹ್ಮಣ'ರೂ ಉತ್ತರದಿಂದಲೇ ಬಂದವರು. ಉತ್ತರದಿಂದ ವಲಸೆ ಬಂದ ಈ ಬ್ರಾಹ್ಮಣರು ಕೊಂಕಣ ಕರಾವಳಿಯ ದಕ್ಷಿಣ ತುದಿಯಲ್ಲೂ, ಕನ್ನಡ, ತುಳು, ಕೊಡಗು, ಮಲೆಯಾಳ ಮೊದಲಾದ ದ್ರಾವಿಡಭಾಷೆಗಳನ್ನಾಡುವ ಜನರ ಜತೆಯಲ್ಲೂ ನೆಲೆಗೊಂಡರು.

ಈ ರೀತಿ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸಿ, ದ್ರಾವಿಡ-ಕೋಲ (ಮುಂಡ) ಮೊದಲಾದ ದಕ್ಷಿಣದ ಭಾಷೆಗಳೊಡನೆ ಉತ್ತರದ ಆರ್ಯಭಾಷೆಗಳು ಸಂಬಂಧ ಪಡೆದುದರ ದಾಖಲೆಗಳು ಪೂರ್ವಕರಾವಳಿಯಲ್ಲಿ ಅಷ್ಟಾಗಿ ದೊರೆಯುವುದಿಲ್ಲ.

ಆರ್ಯ ಮತ್ತು ದ್ರಾವಿಡ ಎಂಬ ಹೆಸರಿನ ಎರಡು ಭಾಷಾ ಸಂಸ್ಕೃತಿಗಳ ಸಜ್ಜನರು ಪರಸ್ಪರ ಮೈತ್ರಿ ಹಾಗೂ ಸಾಮರಸ್ಯದಿಂದ ಬಾಳಬೇಕಾದರೆ ನಮಗೆ ಮೇಲೆ ಹೇಳಿದ ಇತಿಹಾಸದ ಪರಿವೆ ಬೇಕು. ಪಶ್ಚಿಮ ಕರಾವಳಿ ಮತ್ತು ಪಶ್ಚಿಮಘಟ್ಟಗಳ ಮಾರ್ಗವಾಗಿ ಉತ್ತರದಿಂದ ದಕ್ಷಿಣದೇಶಕ್ಕೆ ವಲಸೆ ಬರುವ ಸಂಪ್ರದಾಯವು ಇತಿಹಾಸಪೂರ್ವಕಾಲದಲ್ಲೇ ಆರಂಭವಾಗಿತ್ತು. ಸುಮಾರು ಕ್ರಿಸ್ತಪೂರ್ವ ಐದನೆಯ ಶತಮಾನದ ಸಂದಿನಲ್ಲಿ ಆರ್ಯರು ಉತ್ತರ ಭಾರತದಲ್ಲಿ ಭದ್ರವಾಗಿ ನೆಲೆಗೊಂಡರು. ಅಂದಿನಿಂದ ಕ್ರಿಸ್ತ ಶಕ ಹತ್ತನೆಯ ಶತಮಾನದ ವರೆಗೂ ಆರ್ಯ-ದ್ರಾವಿಡರೊಳಗಿನ ಹೊಕ್ಕುಬಳಕೆ ತೀವ್ರಗತಿಯಲ್ಲಿ ಸಾಗಿತ್ತು. ಅಲ್ಲಿನ ಮಂದಿಯೊಡನೆ ಅಲ್ಲಿನ ಮತಧರ್ಮಗಳೂ ತಾತ್ವಿಕ ವಿಚಾರಗಳೂ ಈ ಕಡೆ ಸಾಗಿಬಂದವು. ಈ ವಲಸೆಯ ಪರಿಣಾಮವಾಗಿ ಪಂಜಾಬ್ ಹಾಗೂ ಗಂಗಾನದಿಯ ಬಯಲುಸೀಮೆಯಲ್ಲಿ ಬೇರೂರಿದ್ದ ಬ್ರಾಹ್ಮಣ ಹಿಂದೂಧರ್ಮವು ಭಾರತದ ದಕ್ಷಿಣ ಬದಿಗೂ ಪೂರ್ವ ಬದಿಗೂ ಪಸರಿಸಿತು. ಈ ರೀತಿಯ ಹೊಕ್ಕು ಬಳಕೆಯಿಂದ ಹೆಚ್ಚಿನ ಪ್ರಯೋಜನವನ್ನು ಪಡೆದ ಸಂಚಾರದ ನೆಲ ಈ ಪಶ್ಚಿಮಘಟ್ಟ-ಪಶ್ಚಿಮ ಸಮುದ್ರಗಳ ಸೀಮೆ. ಈ ಸೀಮೆಯಲ್ಲಿ ಕಳೆದ ೨೫೦೦ ವರ್ಷಗಳ ಉದ್ದಕ್ಕೂ ನಿರಂತರವಾಗಿ ಸಮೃದ್ಧವಾದ ಸಂಘಟಿತವಾದ ಧರ್ಮನಿಷ್ಠ ಹಿಂದೂ ರಾಜಮನೆತನಗಳು ರಾಷ್ಟ್ರಧರ್ಮವನ್ನು ರಕ್ಷಿಸಿಕೊಂಡು ಬಂದವು. ಒರಿಸ್ಸಾ ರಾಜ್ಯ ಹಾಗೂ ಇಕ್ಷ್ವಾಕುವಂಶದವರು ಕಟ್ಟಿದ ಆಂಧ್ರ ರಾಜ್ಯವನ್ನು ಬಿಟ್ಟರೆ ಪೂರ್ವ ಭಾರತವು ಇಂಥ ಪ್ರಗತಿಯನ್ನು ಸಾಧಿಸಲಿಲ್ಲ.

ಆರ್ಯರೂ ಬ್ರಾಹ್ಮಣರೂ ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದುದರ ಫಲವಾಗಿ ಸಂಸ್ಕೃತಭಾಷೆಯ ಸಂಸ್ಕೃತಿ ಭಾರತದುದ್ದಕ್ಕೂ ಹರಡಿತು. ಹಿಂದೂ ಸಂಸ್ಕೃತಿಯನ್ನು ಒಮ್ಮುಖಗೊಳಿಸುವ ಕಾರ್ಯದಲ್ಲಿ ಸಂಸ್ಕೃತಭಾಷೆ ಗಣ್ಯ ಪಾತ್ರ ವಹಿಸಿತ್ತು. ವೈದಿಕ ಯುಗದ ನಂತರ ಅಂದರೆ ಕ್ರಿಸ್ತಪೂರ್ವ ಸುಮಾರು ಹತ್ತನೆಯ ಶತಮಾನದಿಂದೀಚೆಗೆ ಸಂಸ್ಕೃತಭಾಷೆಯಲ್ಲಿ ಹಲವಾರು 'ದ್ರಾವಿಡ' ಯಾ 'ಕೋಲ್ (ಮುಂಡ ಅಥವಾ ಆಸ್ಟ್ರಿಕ್) ಭಾಷೆಗಳ ಶಬ್ದಗಳೂ ಧಾತುಗಳೂ ಸೇರ್ಪಡೆಯಾಗಿ, ಆ ಭಾಷೆಗಳ ವಾಕ್ಯರಚನೆ, ಶೈಲಿ, ನುಡಿಗಟ್ಟುಗಳೂ ಸಂಸ್ಕೃತಭಾಷೆಯಲ್ಲಿ ಹಾಸುಹೊಕ್ಕಾಗಿ ಬೆರೆತುವು. ಕ್ರಮೇಣ ಸಂಸ್ಕೃತ

ಭಾಷೆ ವೈದಿಕಭಾಷೆಯಿಂದ ಬಹಳ ದೂರ ಸರಿದುದಲ್ಲದೆ ತನ್ನ ಪ್ರಾರಂಭಿಕ ಆರ್ಯ (ಇಂಡೋ-ಯುರೋಪಿಯನ್) ಕಾಲದ ಎಷ್ಟೋ ರೂಢಿಗಳನ್ನು ಕಳೆದುಕೊಂಡಿತು. ಆರ್ಯರಲ್ಲದ ಇತರ (ದ್ರಾವಿಡ) ಜನಾಂಗಗಳೂ ಈ ಭಾಷೆಯನ್ನು ಸ್ವೀಕರಿಸಿದುವು. ಇವರೆಲ್ಲರಿಗೂ ಒಪ್ಪುವಂಥ ಸತ್ವಪೂರ್ಣ, ವಿಷಯಸಮೃದ್ಧ ಸಾಹಿತ್ಯಸೃಷ್ಟಿಗೆ ಸಂಸ್ಕೃತ ಭಾಷೆ ಮಾಧ್ಯಮವಾಯಿತು. ಈ ಏಕೀಕರಣ ನಡೆದದ್ದು ಕ್ರಿಸ್ತಾನಂತರದ ಶತಕಗಳಲ್ಲಿ; ಪಶ್ಚಿಮ ಭಾರತದಲ್ಲಿ ಆಳುತ್ತಿದ್ದ ಬಲಿಷ್ಠ ರಾಜಮನೆತನಗಳ ಆಶ್ರಯದಲ್ಲಿ. ಈ ಪುಣ್ಯ ಕಾರ್ಯವನ್ನೆಸಗಿದ ರಾಜವಂಶಗಳು: ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರ ಕೂಟರು, ಹೊಯ್ಸಳರು, ವಿಜಯನಗರದ ಸಾಮ್ರಾಟರು, ಮೈಸೂರಿನ ಒಡೆಯರ್ ರಾಜಮನೆತನ ಮತ್ತು ಮಹಾರಾಷ್ಟ್ರದ ಪೇಶ್ವೆ ಮನೆತನ.

ನಮ್ಮ ದೇಶದಲ್ಲಿ ಭಾಷೆಗಳ ಬಿಕ್ಕಟ್ಟು ಮೂಡಿದುದು ಇತ್ತೀಚಿನ ಇಪ್ಪತ್ತು ವರ್ಷ ಗಳಲ್ಲಿ. ಈ ಬಿಕ್ಕಟ್ಟಿನ ಕಾರಣಪುರುಷರು ನಮ್ಮ ರಾಜಕಾರಣಿಗಳು. ಭಾಷಾಸಂಸ್ಕೃತಿ ಯನ್ನು ರಾಷ್ಟ್ರಸಂಸ್ಕೃತಿಯಿಂದ ಬೇರ್ಪಡಿಸಿ ಬೆಳೆಸುವ ತಂತ್ರಯುಕ್ತಿಯಿಂದಾಗಿ ನಮ್ಮ ಜನ ಕಂಗಾಲಾಗಿದ್ದಾರೆ, ನಮ್ಮ ರಾಜಕಾರಣಿಗಳಿಗೆ ಕೆಟ್ಟ ಹೆಸರು ಬಂದಿದೆ. ಭಿನ್ನ ಜನಾಂಗ ಗಳ, ಸಂಸ್ಕೃತಿಗಳ, ಭಾಷೆಗಳ ಪರಸ್ಪರ ಸಂಪರ್ಕದಿಂದ ಇಂದು ನಾವು ಒಂದೇ ಕುಲದವ ರಾಗಿದ್ದರೂ ಒಂದೇ ಆದರ್ಶವನ್ನು ಹೊತ್ತಿದ್ದರೂ, ಅವನ್ನು ಮರೆತಿದ್ದೇವೆ. ಆರ್ಯ-ದ್ರಾವಿಡ, ಆಸ್ಟ್ರಿಕ್-ಮೊಂಗ್ಲೋಯಿಡ್ ಮುಂತಾದ ಭಾಷಾಭೇದಗಳು ಎಷ್ಟಿದ್ದರೂ, ಇಂದು ಎಲ್ಲ ಭಾಷೆಗಳೂ ಒಂದೇ ಸಂಸ್ಕೃತಿಯನ್ನು ಪ್ರಕಟಿಸುತ್ತಿವೆ. ಈ ತಲೆಮಾರಿನ ರಾಜಕಾರಣಿಗಳು ಉದಯಿಸುವ ಮುನ್ನ ನಮ್ಮ ದೇಶದಲ್ಲಿ ಭಾಷೆಗಳ ಸಂಬಂಧದ ಒಂದು ಸಮಸ್ಯೆ ತಲೆ ಎತ್ತಿದ್ದೇ ಇಲ್ಲ. ಹನ್ನೆರಡನೆಯ ಶತಮಾನ (೧೧೨೫ A.D.)ದಲ್ಲಿ ಬಾಳಿದ ನಾಗವರ್ಮ II ಎಂಬ ಕನ್ನಡ ವಿದ್ವಾಂಸನು "ಕರ್ನಾಟಕಭಾಷಾಭೂಷಣ" ಎಂಬ ಕನ್ನಡ ವ್ಯಾಕರಣ ಗ್ರಂಥವನ್ನು ಬರೆದನು. ಈ ಗ್ರಂಥದಲ್ಲಿ ಕನ್ನಡ ವ್ಯಾಕರಣದ ಬಗ್ಗೆ ೨೮೯ ಸಂಸ್ಕೃತ ಸೂತ್ರಗಳಿವೆ. ಈ ರೀತಿ ದೇವಭಾಷೆಯ ಮೂಲಕ ದ್ರಾವಿಡಭಾಷೆಗಳನ್ನು ಗೌರವಿಸುವ ಸಂಪ್ರದಾಯ ತೆಲುಗು, ಮಲಯಾಳ, ತಮಿಳು ಭಾಷೆಗಳಲ್ಲೂ ಇತ್ತು. ವಿಷಯವನ್ನರಿಯದ ಕೆಲವು ತಮಿಳರು ಇಂದು ಸಂಸ್ಕೃತದ ಬಗ್ಗೆ ಅಪಪ್ರಚಾರ ಗೈಯು ತ್ತಿರುವುದು ಒಂದು ದುರ್ವಿಪಾಕ. ನಾಗವರ್ಮನು ತಾನು ಬರೆದ ವ್ಯಾಕರಣ ಗ್ರಂಥದ ಆರಂಭದ ಸಂಸ್ಕೃತ ಶ್ಲೋಕದಲ್ಲಿ ದೇವರಿಗೆ ನಮಸ್ಕರಿಸಿ ಪರಮಾತ್ಮನ ದೃಷ್ಟಿಯಲ್ಲಿ ಎಲ್ಲ ಭಾಷೆಗಳೂ ಸರಿಸಮಾನ ಎಂದು ಸಾರಿದ್ದಾನೆ:

> ಸರ್ವಜ್ಞಂ ತದಹಂ ವಂದೇ ಪರಂಜ್ಯೋತಿಸ್ತಮೋಽಪಹಂ ।
> ಪ್ರವೃತ್ತಾ ಯನ್ಮುಖಾತ್ ಸರ್ವಭಾಷಾಸರಸ್ವತೀ ॥

"ಯಾವ ಪರತತ್ವದ ಮುಖದಿಂದ ಸರ್ವಭಾಷಾವಾಹಿನಿಯಾದ ಸರಸ್ವತೀದೇವಿಯು ಉದಿಸಿದಳೋ, ಕತ್ತಲೆಯನ್ನು ಕಳೆಯುವ ಆ ಸರ್ವಜ್ಞ ಪರಂಜ್ಯೋತಿಗೆ ವಂದಿ ಸುತ್ತೇನೆ."

ಎಲ್ಲ ಭಾಷೆಗಳೂ ಭಗವಂತನಿಂದ ಬಂದಿವೆಯಾದುದರಿಂದ ಪವಿತ್ರವೆಂದು ತಿಳಿಯ ಬೇಕು. ಯಾವ ಭಾಷೆಯನ್ನೂ ಕಡೆಗಣಿಸಬಾರದು. ಭಾರತರಾಷ್ಟ್ರದಲ್ಲಿ ಭಾಷೈಕ್ಯ ಸಿದ್ಧಿಸ

ಬೇಕಾದರೆ ಭಾಷೆಗಳ ಬಗೆಗೆ ನಾವು ಈ ರೀತಿಯ ಉದಾತ್ತ ದೃಷ್ಟಿಯನ್ನು ಅಳವಡಿಸಿ ಕೊಳ್ಳಬೇಕು. ಈ ದೃಷ್ಟಿ ನಮ್ಮಲ್ಲಿ ಹಿಂದೆ ಇತ್ತು. ಇತ್ತೀಚೆಗೆ ಒಂದೇ ಭಾಷೆಯನ್ನು ಮೆರೆ ಸುವ ಧೋರಣೆಯಿಂದಾಗಿ ಆ ಉದಾತ್ತ ಪರಂಪರೆಯನ್ನು ಅಳಿಸುವ ಪ್ರಯತ್ನ ನಡೆದಿದೆ.

ವೈದಿಕಕಾಲದ ನಂತರದ ಸಂಸ್ಕೃತದ ಬೆಳವಣಿಗೆಗೆ ಆರ್ಯರೂ ದ್ರಾವಿಡರೂ ಕೂಡಿಯೇ ಕಾರಣರಾದರು. ಅಂತಲೇ ಭಾರತದ ಎಲ್ಲ ಭಾಷೆಗಳ ಸಾಹಿತ್ಯದಲ್ಲೂ ಎಲ್ಲ ಕಾಲಗಳಲ್ಲೂ ಸಂಸ್ಕೃತವು ಸಾಕುತಾಯಿಯಂತೆ ಪೋಷಣೆ ನೀಡಿತ್ತು. ತಮಿಳುಭಾಷೆಗೂ ಸಾಕಷ್ಟು ಸಂಸ್ಕೃತದ ಋಣ ಇದೆ. ಉರ್ದುಮಿಶ್ರಿತ ಹಿಂದೀ (ಹಿಂದುಸ್ತಾನಿ) ಹಾಗೂ ಸಿಂಧಿ ಭಾಷೆಗಳನ್ನುಳಿದು ಇತರ ಎಲ್ಲ ಭಾರತೀಯ ಭಾಷೆಗಳಲ್ಲೂ ಸಂಸ್ಕೃತದ ಪ್ರಭಾವ ಇದೆ. ಸಂಸ್ಕೃತದ ಸಂಬಂಧ ಪಡೆದ ಭಾರತೀಯ ಭಾಷೆಗಳು ಒಂದಕ್ಕೊಂದು ವಿರೋಧ ವಿಲ್ಲದಂತೆ ಹೆಣೆದುಕೊಂಡಿವೆ. ಭಾರತದ ಪ್ರಾದೇಶಿಕ ಭಾಷೆಗಳಲ್ಲಿ ಬರೆಯುವ ಲೇಖಕರು ಎಷ್ಟೋ ಸಂದರ್ಭಗಳಲ್ಲಿ ತಮ್ಮ ಹುಟ್ಟುನುಡಿಯ ಬದಲು ಸಂಸ್ಕೃತವನ್ನೇ ಬಳಸಬೇಕಾ ಗುತ್ತದೆ. ಉದಾಹರಣೆಗೆ, ಈ ತುಳುನಾಡಿನ ಗ್ರಂಥಕರ್ತರನ್ನೇ ತೆಗೆದುಕೊಳ್ಳೋಣ. ತುಳು ಒಂದು ಪ್ರಾಚೀನ ದ್ರಾವಿಡ ಭಾಷೆ. ಈ ಭಾಷೆಯನ್ನು ಆಡುವ ಜನರ ಸಂಖ್ಯೆ ಒಂದು ಮಿಲಿಯಕ್ಕಿಂತ ಜಾಸ್ತಿ ಇಲ್ಲ. ತುಳುವಿಗೂ ತಮಿಳು, ಕನ್ನಡ, ಕೊಡಗು, ಕೋಳಮಿ ಭಾಷೆಗಳಿಗೂ ನಿಕಟಸಂಬಂಧ ಇದೆ. ಶಂಕರ-ರಾಮಾನುಜರ ಪಂಕ್ತಿಯಲ್ಲಿ ಭಾರತದ ಮತಪ್ರವರ್ತಕ ಆಚಾರ್ಯವರ್ಗದಲ್ಲಿ ಸೇರಿಕೊಂಡ ಆನಂದತೀರ್ಥ ಮಧ್ವಾಚಾರ್ಯರು ಭಾರತದ ಭಾಗ್ಯೋದಯಕ್ಕಾಗಿ ತುಳು ಮಾತನ್ನಾಡುವ ಬ್ರಾಹ್ಮಣರಿಂದ ಬಂದ ಒಸಗೆ. ಮಧ್ವಾಚಾರ್ಯರ ಬೋಧನೆಗಳಿಗೂ ಸಾಧನೆಗಳಿಗೂ ಉಡುಪಿಯೇ ಕೇಂದ್ರವಾಯಿತು. ಮಧ್ವಾಚಾರ್ಯರಿಂದ ಮತ್ತು ಅವರ ಶಿಷ್ಯಪರಂಪರೆಯಿಂದ ಪ್ರಸಾರಗೊಂಡ ದ್ವೈತ ವಾದವು ಭಾರತದ ಎಲ್ಲೆಡೆಗಳಲ್ಲೂ ಮನ್ನಣೆ ಪಡೆಯಿತು; ಶಂಕರಾಚಾರ್ಯರ ಅದ್ವೈತ ವಾದಕ್ಕೆ ಮತ್ತು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವಾದಕ್ಕೆ ಬಲಿಷ್ಠ ಪ್ರತಿಸ್ಪರ್ಧಿ ಎನಿಸಿಕೊಂಡ ವಾದವಾಯಿತು. ಶಂಕರಾಚಾರ್ಯರ ಹುಟ್ಟುಭಾಷೆ ಪ್ರಾಚೀನ ತಮಿಳಿನದೇ ರೂಪಾಂತರವಾದ ಪ್ರಾಚೀನ ಮಲೆಯಾಳ. ರಾಮಾನುಜರು ಮಾತನಾಡಿದ ಭಾಷೆ ನಡುಗಾಲದ ತಮಿಳು. ಭಾರತದ ಮಹಾವಿದ್ವಾಂಸರ ಸಾಲಿಗೆ ಸೇರಿದ ಈ ಮಹನೀಯರು ಸಂಸ್ಕೃತದಲ್ಲೇ ಗ್ರಂಥಗಳನ್ನು ಬರೆದರು; ತಮ್ಮ ಹುಟ್ಟು ದ್ರಾವಿಡಭಾಷೆಯಲ್ಲಿ ಬರೆಯ ಲಿಲ್ಲ. ಸುಮಾರು ೧೫೦೦–೨೦೦೦ ವರ್ಷಗಳಷ್ಟು ಹಿಂದಿನಿಂದಲೂ ಕನ್ನಡಿಗ–ತಮಿಳು– ತೆಲುಗು ಜನರಲ್ಲಿ ಸಂಸ್ಕೃತದ ಜತೆಗೆ ತಮ್ಮ ಮಾತೃಭಾಷೆಯ ವಿಚಾರದಲ್ಲೂ ಬಹಳ ಗೌರವವಿತ್ತು. ಹೀಗಾಗಿ ಕ್ರಿಸ್ತಶಕದ ಆರಂಭದಲ್ಲೇ ತಮಿಳಿನಲ್ಲಿ ಮೇಲ್ಮಟ್ಟದ ಸಾಹಿತ್ಯ ಸೃಷ್ಟಿ ಆರಂಭವಾಗಿತ್ತು. ಅನಂತರ ೫೦೦ ವರ್ಷಗಳ ಮೇಲೆ ತೆಲುಗು-ಕನ್ನಡಗಳಲ್ಲೂ ಆರಂಭವಾಯಿತು. ತುಳುಭಾಷೆಯನ್ನಾಡುವ ಜನರ ಸಂಖ್ಯೆ ಸಣ್ಣ ಪ್ರಮಾಣದಲ್ಲಿತ್ತು. ಆದ್ದರಿಂದ ತುಳುವಿನಲ್ಲಿ ಸಾಹಿತ್ಯ ವ್ಯವಸಾಯಕ್ಕೆ ಯಾರೂ ತೊಡಗಲಿಲ್ಲ; ಆ ಭಾಷೆಗೆ ಒಂದು ಸ್ವತಂತ್ರ ಲಿಪಿಯನ್ನೂ ಬಳಸಿಕೊಂಡವರಿಲ್ಲ. ಈಗ ತುಳುಭಾಷೆಯನ್ನು ಮಲೆ ಯಾಳ, ಕನ್ನಡ, ನಾಗರಿ, ರೋಮನ್ ಮೊದಲಾದ ಬೇರೆ ಬೇರೆ ಲಿಪಿಗಳಲ್ಲಿ ಬರೆಯು ತ್ತಾರೆ. ಬ್ರಾಹ್ಮಣರ ಭಾಷಾವ್ಯವಸಾಯ ಸಂಸ್ಕೃತಕ್ಕೇ ಸೀಮಿತವಾಗಿತ್ತು. ಸಾಮಾನ್ಯ

ಮಂದಿಯ ಕೈಯಲ್ಲಿ ಅಲ್ಲೊಂದು ಇಲ್ಲೊಂದು ತುಳು ಹಾಡು ತುಳು-ಪಾಡ್ದನದ ರಚನೆಯಾಯಿತು. ರಾಮಾಯಣ, ಮಹಾಭಾರತ ಪುರಾಣಗಳ ಕತೆಗಳನ್ನು ಕತೆ-ಸಂಭಾಷಣೆಗಳ ರೂಪದಲ್ಲಿ ಹೇಳುವ ಮಟ್ಟಿಗೆ ಮಾತ್ರ ಅವರ ಸಾಹಿತ್ಯ ಕುತೂಹಲ ಬೆಳೆದಿತ್ತು. ಸಂಸ್ಕೃತಕ್ಕಿಂತ ಬೇರೆಯಾದ ಭಾಷೆಗಳಲ್ಲಿ ಬರೆಯುವ ಹಂಬಲ ಉಳ್ಳ ತುಳುವರು ನೆರೆಭಾಷೆಯಾದ ಕನ್ನಡವನ್ನು ಬಳಸಿಕೊಂಡರು. ಇತ್ತೀಚೆಗೆ ಪ್ರಾದೇಶಿಕ ಭಾಷಾಸಂಸ್ಕೃತಿಗಳಿಗೆ ಪ್ರತ್ಯೇಕವಾದ ಅಸ್ತಿತ್ವವನ್ನು ಒಪ್ಪುವ ಹೊಸ ವಾತಾವರಣ ಸೃಷ್ಟಿಯಾಗಿದೆ. ಇತರ ಪ್ರದೇಶಗಳ ಜನರಂತೆ ತುಳುವರೂ ತಮ್ಮಿಂದ ರಾಷ್ಟ್ರದ ಸಂಸ್ಕೃತಿಗೆ ದೊರೆತ ಉಪಕಾರಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದಾರೆ. ತಮ್ಮ ಭಾಷೆಯ ಪುನರುಜ್ಜೀವನಕ್ಕೆ ಬೇಕಾದ ಸೌಕರ್ಯಗಳನ್ನೂ ಗೌರವಗಳನ್ನೂ ಇತರರಿಂದ ಕೇಳಿ ಪಡೆಯುವ ಉತ್ಸಾಹ ತಾಳಿದ್ದಾರೆ. ಇದಕ್ಕೆ ಬೇಕಾದ ಸಹಾನುಭೂತಿ-ಸಹಕಾರಗಳನ್ನು ಇತರರು ನೀಡಬೇಕಾಗಿದೆ. ಆದರೆ ಇತರ ಪರಿಷ್ಕೃತ ಭಾಷೆಗಳ ನಡುವೆ ತುಳುವಿಗೂ ತಕ್ಕಮಟ್ಟಿನ ಸ್ಥಾನಮಾನಗಳನ್ನು ದೊರಕಿಸಿಕೊಳ್ಳಲು ಬೇಕಾದ ಅರ್ಹತೆಯನ್ನು ಸಾಧಿಸುವ ಕಾರ್ಯ ತುಳುವರನ್ನೇ ಅವಲಂಬಿಸಿದೆ.

ಕರ್ಣಾಟಕ (ಮೈಸೂರು) ಪ್ರದೇಶವು ಭಾಷಾಸಂಬಂಧದ ದ್ವೇಷ-ಅಸಹನೆಗಳಿಗೆ ಏಕಮಾತ್ರ ಅಪವಾದವೋ ಎಂಬಂತೆ ಭಾಷಾಮೈತ್ರಿಯನ್ನು ಸಾಧಿಸಿರುವ ಸೀಮೆ. ಹೀಗಾಗಿ ಈ ಸೀಮೆಯಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಜನರು ಬಂದು ನೆಲೆಸಿದ್ದಾರೆ; ಕನ್ನಡ ನುಡಿಯ ಕೃಷಿ ಮಾಡಿ ಮೇಲ್ಮಟ್ಟದ ಲೇಖಕರಾಗಿದ್ದಾರೆ. ಉದಾಹರಣೆಗೆ ಕನ್ನಡದ ಶ್ರೇಷ್ಠ ಕಾದಂಬರಿಕಾರ ಹಾಗೂ ಗದ್ಯಸಾಹಿತಿ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರ ಮನೆಮಾತು ತಮಿಳು. "ಅಂಬಿಕಾತನಯ" ಎಂಬ ಕಾವ್ಯನಾಮದ ಶ್ರೀ ದ. ರಾ. ಬೇಂದ್ರೆಯವರು ಕನ್ನಡದಲ್ಲಿ ಹೇಗೋ ಹಾಗೆ ಮರಾಠಿಯಲ್ಲೂ ಬರೆಯಬಲ್ಲರು. ಇಂಥ ಕನ್ನಡ ಲೇಖಕರು ಇನ್ನೂ ಹಲವರಿದ್ದಾರೆ.

ಇಂಥವರಲ್ಲಿ ಕೊಂಕಣ ಕರಾವಳಿಯಲ್ಲಿರುವ ಸಾರಸ್ವತ ಬ್ರಾಹ್ಮಣರೂ ಸೇರುತ್ತಾರೆ. ಇವರ ಮನೆಮಾತಾಗಿರುವ 'ಕೊಂಕಣಿ' ಆರ್ಯಭಾಷೆಗಳ ಗುಂಪಿಗೆ ಸೇರಿದ್ದರೂ, ಕನ್ನಡ ಸಾಹಿತ್ಯದ ಬಗೆಗೆ ಈ ಜನ ಸಾಕಷ್ಟು ಅಭಿರುಚಿ, ಸದಭಿಮಾನಗಳನ್ನು ಬೆಳೆಸಿಕೊಂಡಿದ್ದಾರೆ. ಈ ಅಭಿಮಾನ ಕಾರಂತರಂಥ ಪ್ರಸಿದ್ಧ ಕನ್ನಡ ಬರೆಹಗಾರರನ್ನು ಗೌರವಿಸುವ ಈ ಸಮಾರಂಭದಲ್ಲಿ ಗಣ್ಯ ಪಾತ್ರ ವಹಿಸಿರುವ ಸಂಗತಿಯನ್ನು ನಾನು ಕೇಳಿಬಲ್ಲೆ.

ಅಂತೂ ಶ್ರೀ ಕಾರಂತರ ದೆಸೆಯಿಂದಾಗಿ ನನಗೆ ಈ ಕೊಂಕಣಸೀಮೆಯ ತೆಂಕಣ ವಲಯಕ್ಕೆ ಬರುವುದು ಸಾಧ್ಯವಾಯಿತು. ಇತಿಹಾಸದಲ್ಲಿ ಹೇಗೋ ಹಾಗೆ ಆಧ್ಯಾತ್ಮಿಕ ಸಂಬಂಧಗಳಲ್ಲೂ ಈ ಸೀಮೆಗೆ ಪಾವನ ಪರಂಪರೆ ಇದೆ. ಆನಂದತೀರ್ಥರೆಂಬ ಅನ್ವರ್ಥಕ ಪ್ರಶಸ್ತಿಯನ್ನು ಪಡೆದ ಶ್ರೀ ಮಧ್ವಾಚಾರ್ಯರು ಈ ಸೀಮೆಯಲ್ಲೇ ಹುಟ್ಟಿ, ಉಡುಪಿಯಲ್ಲಿ ನಿತ್ಯಸನ್ನಿಹಿತರಾಗಿದ್ದಾರೆ. ಮೂಡುಬಿದಿರೆಯಲ್ಲಿ ಜೈನತೀರ್ಥಂಕರರ ಪವಿತ್ರ ಬಸದಿಗಳಿವೆ. ಕಾರ್ಕಳದಲ್ಲಿ ಗೋಮಟೇಶ್ವರ ಮಹಾಮೂರ್ತಿ ಇದ್ದರೆ, ಧರ್ಮಸ್ಥಳಕ್ಕೆ ಆ ಮೂರ್ತಿಯನ್ನೇ ಹೋಲುವ ಕೀರ್ತಿ ಇದೆ. ಈ ಜಿಲ್ಲೆಯ ಪಕ್ಕದಲ್ಲಿರುವ ಚಿಕ್ಕಮಗಳೂರು ಜಿಲ್ಲೆಯಲ್ಲಿ ಆದಿಶಂಕರಾಚಾರ್ಯರಿಂದಲೇ ಸ್ಥಾಪಿಸಲ್ಪಟ್ಟ ಶೃಂಗೇರಿಯ ಅದ್ವೈತ ಪೀಠ ಇದೆ. ಜಿಲ್ಲೆಯ ಆಗ್ನೇಯ ದಿಕ್ಕಿನಲ್ಲಿರುವ ಕೊಡಗು ಜಿಲ್ಲೆ ಹಿಂದೆ ಪ್ರತ್ಯೇಕ ಪ್ರಾಂತ್ಯವಾಗಿತ್ತು.

ಕೊಡಗಿನ ರಾಜಧಾನಿ ಮಡಿಕೇರಿಯಿಂದ ೨೬ ಮೈಲು ದಕ್ಷಿಣದಲ್ಲಿರುವ ತಲಕಾವೇರಿ ಕಾವೇರಿನದಿಯ ಉಗಮಸ್ಥಾನ. ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದ ಬ್ರಾಹ್ಮಣಋಷಿ ಅಗಸ್ತ್ಯರು ತಲಕಾವೇರಿಯಲ್ಲಿ ನೆಲೆಗೊಂಡು, ಅಲ್ಲಿನ ದ್ರಾವಿಡ ಅರಸು ಕವೇರನ ಮಗ ಳಾಗಿದ್ದ ಕಾವೇರಿ ಎಂಬವಳನ್ನು ಮದುವೆಯಾದರು. ಆ ಕಾವೇರಿ ತನ್ನ ಊರಿನಲ್ಲಿ ಹುಟ್ಟಿ ಮೂಡುದಿಕ್ಕಿಗೆ ಹರಿಯುತ್ತಿದ್ದ ನದಿಗೆ ತನ್ನ ಹೆಸರನ್ನೇ ಇಟ್ಟಳು. ಹೀಗಾಗಿ ಈ ಸೀಮೆಯ ಇತಿಹಾಸದಲ್ಲಿ ಶಂಕರಾಚಾರ್ಯ, ಮಧ್ವಾಚಾರ್ಯರು ಹೇಗೋ ಹಾಗೇ ಅಗಸ್ತ್ಯರೂ ಸೇರಿಕೊಂಡಿದ್ದಾರೆ. ಅಗಸ್ತ್ಯರು ತಮಿಳುಸಾಹಿತ್ಯದ ಮೂಲ ಪ್ರವರ್ತಕರು; ತಮಿಳು ಭಾಷೆಯ ಮೊಟ್ಟಮೊದಲಿನ ವ್ಯಾಕರಣಗ್ರಂಥವನ್ನು ಬರೆದವರು.

ಕೊಂಕಣಿ ಸಾರಸ್ವತ ಬ್ರಾಹ್ಮಣರು, ಚಿತ್ತಪಾವನ ಬ್ರಾಹ್ಮಣರು, ನಂಬೂದಿರಿ ಬ್ರಾಹ್ಮಣರು ಜತೆಜತೆಯಾಗಿ ಈ ಪ್ರದೇಶದಲ್ಲಿ ಬಾಳಿದರು. ಕನ್ನಡ ತುಳು, ಕೊಡಗು, ಮಲೆಯಾಳ ಭಾಷೆಗಳನ್ನಾಡುವ ಜನರ ಅಕ್ಕಪಕ್ಕದಲ್ಲೇ ಕೊಂಕಣಿ, ಮರಾಠಿ ಭಾಷೆಗಳ ನ್ನಾಡುವ ಮಂದಿ ನೆಲೆಗೊಂಡರು. ಇಲ್ಲಿನ ಸಾರಸ್ವತ ಬ್ರಾಹ್ಮಣರ ವ್ಯವಹಾರದಕ್ಷತೆ ಸಮಸ್ತ ಭಾರತದ ಔದ್ಯಮಿಕ ಪ್ರಗತಿಕಾರ್ಯಗಳಿಗೆ ಹೊಸ ಜೀವಕಳೆ ಹುಟ್ಟಿಸುವಂಥ ನೂತನ ಪ್ರಯೋಗಗಳ ಸಂಚಾಲಕಶಕ್ತಿಯಾಗಿ ಪ್ರಸಿದ್ಧಿ ಪಡೆದಿದೆ. ಉಡುಪಿಯ ಮಗ್ಗು ಲಲ್ಲಿರುವ ಮಣಿಪಾಲದ ವಿದ್ಯಾಸಂಸ್ಥೆಗಳ ಅಪೂರ್ವ ಸಾಧನೆ, ಅಲ್ಲಿನ ಆಸ್ಪತ್ರೆ ಹಾಗೂ ಆರೋಗ್ಯ ಕೇಂದ್ರ, ಮಣಿಪಾಲದಿಂಲೇ ಮೊದಲಾಗಿ ದೇಶದ ಉದ್ದಗಲಕ್ಕೂ ಪಸರಿ ಸಿರುವ ಸಿಂಡಿಕೇಟ್ ಬ್ಯಾಂಕು – ಇವು ಇಂದಿನ ಭಾರತದ ಭಾಗ್ಯಸಾಧನೆಯಲ್ಲಿ ಬೊಟ್ಟಿಟ್ಟು ಗುರುತಿಸಿಕೊಳ್ಳಬೇಕಾದ ಅಂಶಗಳು.

೧೫೦೦ ವರ್ಷಗಳಷ್ಟು ಪುರಾತನದ ಭವ್ಯ ಪರಂಪರೆಯನ್ನೊಳಗೊಂಡ ಕನ್ನಡ ಭಾಷೆ ಮತ್ತು ಸಾಹಿತ್ಯ ಈ ವಲಯದಲ್ಲಿ ಸರ್ವದಾ ಓಜಸ್ವಿಯಾಗಿ ಮೆರೆದಿದೆ.

ಕ್ರಿಸ್ತಶಕ ೫ನೇ ಶತಮಾನದಷ್ಟು ಹಿಂದಿನ ಕನ್ನಡ ಶಾಸನಗಳನ್ನು ಬರೆದ ಅಕ್ಕರಿಗ ರನ್ನೂ ಸುಮಾರು ಅದೇ ಕಾಲದವರೆಂದು ಕೇಳಿಬರುವ ಇನ್ನೆಷ್ಟೋ ಮಂದಿ ಬರೆಹ ಗಾರರನ್ನೂ ಬಿಟ್ಟರೆ, 'ಕವಿರಾಜಮಾರ್ಗ, ಎಂಬ ಗ್ರಂಥವನ್ನು ಬರೆದ ಶ್ರೀವಿಜಯ (ಸುಮಾರು ಕ್ರಿ. ಶ. ೮೨೫)ನು ಕನ್ನಡದ ಆದಿಕವಿ ಎನ್ನಿಸಿಕೊಳ್ಳುತ್ತಾನೆ. ಅನಂತರ ಕ್ರಿಸ್ತಶಕ ಹತ್ತನೆಯ ಶತಮಾನದಲ್ಲಿ ಕನ್ನಡಸಾಹಿತ್ಯದ 'ರತ್ನತ್ರಯ'ರೆಂದು ಕೀರ್ತಿ ಗಳಿಸಿದ ಮೂರು ಕವಿಗಳು: ಪಂಪ, ರನ್ನ, ಪೊನ್ನ. ಅಖಂಡ ಭಾರತಕ್ಕೆ ಮಾನ್ಯವಾಗಿದ್ದ ಬ್ರಾಹ್ಮಣ ಹಿಂದೂ ಸಂಪ್ರದಾಯದ 'ರಾಮಾಯಣ', 'ಮಹಾಭಾರತ' ಹಾಗೂ ಪುರಾಣಗ್ರಂಥ ಗಳೇ ಕನ್ನಡಸಾಹಿತ್ಯದ ಆರಂಭದ ಕೃತಿಗಳಿಗೆ ಹಿನ್ನೆಲೆಯಾಗಿದ್ದುವು. ಜೈನಪರಂಪರೆಯ ಪ್ರಭಾವವೂ ಬೃಹತ್ ಪ್ರಮಾಣದಲ್ಲಿತ್ತು. ಕ್ರಿಸ್ತ ಶಕ ಹನ್ನೆರಡನೆ ಶತಮಾನದ ಉತ್ತ ರಾರ್ಧದಲ್ಲಿ ಬಾಳಿದ ಸುಧಾರಕ ಬಸವಣ್ಣನಿಂದ 'ವೀರಶೈವ'ವೆಂಬ ಮತಪಂಥಕ್ಕೆ ನಾಂದಿ ಯಾಯಿತು. ಈ ಶೈವಲಿಂಗಾಯತ ಸಂಪ್ರದಾಯವು ಕನ್ನಡ ಸಾಹಿತ್ಯಪೀಠದ ಮೂರ ನೆಯ ಮುಖ. ವೈಷ್ಣವಸಂತ ಹಾಗೂ ಭಕ್ತಕವಿ ಪುರಂದರದಾಸರು ಭಾರತೀಯ ಸಂಗೀತ ಕಲೆಯ ಮೂಲಪ್ರವರ್ತಕರಲ್ಲೊಬ್ಬರು. ಇವರ ಪಂಕ್ತಿಯಲ್ಲಿ ಹರಿದಾಸ ಗೋಸ್ವಾಮಿ, ಗೋಪಾಲ ನಾಯಕ, ತಾನಸೇನ, ತ್ಯಾಗರಾಜ, ಮತ್ತು ರಬೀಂದ್ರನಾಥ ಠಾಗೋರ್

ಸೇರಿಕೊಳ್ಳುತ್ತಾರೆ. ಕರ್ಣಾಟಕ ಸಂಗೀತಪಿತಾಮಹರಾದ ಪುರಂದರದಾಸರ ಕೀರ್ತಿ ಅಖಿಲ ಭಾರತದ ಮಟ್ಟಕ್ಕೇರಿದೆ.

ಭಾರತದ ಇತರ ಕಡೆಗಳಲ್ಲಿ ಹೇಗೋ ಹಾಗೆ ಕನ್ನಡಿಗರಲ್ಲೂ ಸಾಹಿತ್ಯಪ್ರಭೆ ಮೊಳಕೆಯೊಡೆದದ್ದು ಸಂಸ್ಕೃತವಾಣಿಯ ನೆರವಿನಿಂದ. ಕ್ರಮೇಣ ಈ ದೇಶಕ್ಕೆ ಬಂದ ಆಂಗ್ಲರ ಮೂಲಕ ವಿದ್ಯಾಕ್ಷೇತ್ರದಲ್ಲೂ ಸಾರ್ವಜನಿಕ ವಲಯಗಳಲ್ಲೂ ಪ್ರಚಾರಕ್ಕೆ ಬಂದ ಇಂಗ್ಲಿಷ್‌ಭಾಷೆಯ ಪ್ರಭಾವದಿಂದ ದೇಶದ ಬೌದ್ಧಿಕ-ರಾಜಕೀಯ-ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಒಂದು ನವವಿಚಾರಪ್ರಳಯದ ನಾಂದಿಯಾಯಿತು. ಈ ನವೋದಯದಲ್ಲಿ ಕನ್ನಡಿಗರೂ ಪಾಲುಗೊಂಡಿದ್ದಾರೆ. ನವವಿಚಾರಗಳ ಚಿಂತನ-ಮಂಥನದಲ್ಲಿ ಭಾರತದ ಪ್ರಾದೇಶಿಕ ಭಾಷೆಗಳ ನಡುವೆ ಹೊಸ ಸಂಪರ್ಕ-ಸಂಬಂಧಗಳು ಬೆಳೆದುವು. ಬಂಗಾಳದ ನವೋದಯ ಸಾಹಿತ್ಯದ ಸತ್ಪ್ರಭಾವ ಕರ್ಣಾಟಕದ ವರೆಗೂ ಹಾಯ್ದು ಬಂತು. ಬಂಕಿಮ ಚಂದ್ರ ಚಟರ್ಜಿ, ಶರಶ್ಚಂದ್ರ ಚಟರ್ಜಿ, ರಬೀಂದ್ರನಾಥ ಠಾಗೋರ್, ಸ್ವಾಮಿ ವಿವೇಕಾ ನಂದ, ಶ್ರೀ ಅರವಿಂದ ಘೋಷ್ ಮೊದಲಾದವರ ಸಾಹಿತ್ಯ ಕರ್ಣಾಟಕದ ಜನಜೀವನ ಹಾಗೂ ಕನ್ನಡ ಸಾಹಿತ್ಯದ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಬಂಗಾಳದ ಮೇಲ್ಪಂಕ್ತಿ ಯಲ್ಲಿ ಕನ್ನಡ ಸಾಹಿತ್ಯದಲ್ಲೂ ಕೆಲವು ಕ್ರಾಂತಿಗಳಾದವು. ಕನ್ನಡ ಸಾಹಿತ್ಯದ ಹೊಸಯುಗ ಆರಂಭವಾಯಿತು. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಮೇಲ್ಮಟ್ಟದ ಲೇಖಕರು ಉದಯವಾದರು. ಕವಿತೆ, ನಾಟಕ, ಕಾದಂಬರಿ, ಸಣ್ಣಕತೆ, ಪ್ರಬಂಧ, ಪತ್ರಲೇಖನ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ನವ್ಯ ನವ್ಯತರ ಪ್ರಯೋಗಗಳು ನಡೆಯುತ್ತಲೇ ಇವೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಭಾರತದ ಇತರ ಭಾಷೆಗಳ ಶ್ರೇಷ್ಠ ಸಾಹಿತಿಗಳಿಗೆ ಸರಿಸಾಟಿಯಾಗಿ ನಿಲ್ಲುವ ಹಲವಾರು ಬರೆಹಗಾರರಿದ್ದಾರೆ. ಉದಾಹರಣೆಗೆ: ಸರ್ವಶ್ರೀ ಕೆ. ವಿ. ಪುಟ್ಟಪ್ಪ, ಜಿ. ಪಿ. ರಾಜರತ್ನಂ, ಅ. ನ. ಕೃಷ್ಣರಾಯ, ಆರ್. ವಿ. ಜಾಗೀರ್‌ದಾರ್, ಬಸವರಾಜ ಕಟ್ಟೀಮನಿ, ಆರ್. ಎಸ್. ಮುಗಳಿ, ಮಿರ್ಜಿ ಅಣ್ಣಾರಾವ್, ವಿನಾಯಕ ಕೃಷ್ಣ ಗೋಕಾಕ, ಪಂಜೆ ಮಂಗೇಶ ರಾವ್, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಟಿ. ಪಿ. ಕೈಲಾಸಂ, ಡಿ. ವಿ. ಗುಂಡಪ್ಪ, ಬಿ. ಎಂ. ಶ್ರೀಕಂಠಯ್ಯ, ಡಿ. ಆರ್. ಬೇಂದ್ರೆ ('ಅಂಬಿಕಾ ತನಯದತ್ತ'), ಹಲಸಂಗಿ ಚೆನ್ನಮಲ್ಲಪ್ಪ ('ಮಧುರಚೆನ್ನ'), ಸಾಲಿ ರಾಮಚಂದ್ರರಾವ್, ಆನಂದಕಂದ, ಗೋವಿಂದ ಪೈ, ಶಂಕರಭಟ್ಟ, ಪಿ. ಟಿ. ನರಸಿಂಹಾಚಾರ್ಯ, ಆರ್. ನರಸಿಂಹಾಚಾರ್ಯ, ಆರ್. ಜಿ. ಮಲಕಟ್ಟಿ, ಶ್ರೀನಿವಾಸಮೂರ್ತಿ ಮೊದಲಾದವರು. ಕಲ್ಕತ್ತೆಯಲ್ಲಿ ಅಕಾಲ ಮರಣಕ್ಕೆ ತುತ್ತಾದ ನನ್ನ ಮಿತ್ರ ಹಾಗೂ ಕನ್ನಡದ ಶ್ರೇಷ್ಠ ಮಟ್ಟ ದ ಕವಿ-ವಿಮರ್ಶಕ ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯನವರು ಮೇಲೆ ಹೇಳಿದ ಲೇಖ ಕರ ಪಂಕ್ತಿಯಲ್ಲಿ ಸೇರುತ್ತಾರೆ. ಅವರು ಉಚ್ಚಮಟ್ಟದ ಭಾಷಾಶಾಸ್ತ್ರಜ್ಞರಾಗಿದ್ದರು; ಉತ್ತಮ ಮಟ್ಟದ ವಿದ್ವಾಂಸರೆಂದು ಅಖಿಲ ಭಾರತ ಖ್ಯಾತಿ ಗಳಿಸಿದ್ದರು.

ಈ ಸನ್ಮಾನ ಸಮಾರಂಭದ ವ್ಯಕ್ತಿ ಶ್ರೀಮಾನ್ ಕೋಟ ಶಿವರಾಮ ಕಾರಂತರು ಕರ್ಣಾಟಕದ ಶ್ರೇಷ್ಠ ಬರೆಹಕಾರರಲ್ಲೊಬ್ಬರು, ಕರ್ಣಾಟವೇ ಏಕೆ ಭಾರತದ ಜೀವಂತ ಮಹಾಸಾಹಿತಿಗಳಲ್ಲೊಬ್ಬರು.

ದೂರದ ಬಂಗಾಳದವನಾಗಿ ಕನ್ನಡ ಭಾಷೆಯ ಪರಿಚಯವಿಲ್ಲದ ನನಗೆ ಇಂದಿನ ಕನ್ನಡ ಸಾಹಿತ್ಯದ ವಿದ್ಯಮಾನಗಳನ್ನು ಕೂಲಂಕಷವಾಗಿ ತಿಳಿಯಲು ಸಾಧ್ಯವಾಗಿಲ್ಲ. ನನ್ನ ವಯಸ್ಸು ಕೂಡಾ ಇಂಥ ಅಧ್ಯಯನಕ್ಕೆ ಬೇಕಾದ ಮಿತಿಯನ್ನು ದಾಟಿಹೋಗಿದೆ. ಇಸ್ವಿ ೧೯೬೩ರಲ್ಲಿ ನಾನು Languages & Literatures of Modern India (ಆಧುನಿಕ ಭಾರತದ ಭಾಷೆಗಳು ಮತ್ತು ಸಾಹಿತ್ಯಕೃತಿಗಳು) ಎಂಬ ಶೀರ್ಷಿಕೆಯ ಗ್ರಂಥ ಬರೆದುದುಂಟು. ಆ ಗ್ರಂಥದಲ್ಲಿ ಕನ್ನಡಸಾಹಿತ್ಯಕ್ಕೆ ಸಂಬಂಧಿಸಿದ ಪ್ರಕರಣದಲ್ಲಿ ಹಾಗೂ ಇನ್ನಿತರ ಕೆಲವು ಭಾಗಗಳಲ್ಲಿ ಹಲವು ನ್ಯೂನತೆಗಳೂ ತಪ್ಪುಗಳೂ ಸೇರಿಕೊಂಡಿವೆ. ಭಾಷೆ ಗೊತ್ತಿಲ್ಲವಾದುದರಿಂದ, ಕನ್ನಡದ ಬಗ್ಗೆ ಇತರರು ಬರೆದುದನ್ನೋ ಹೇಳಿದುದನ್ನೋ ಸಂಗ್ರಹಿಸಿ ನಾನು ಕನ್ನಡ ಸಾಹಿತ್ಯದ ಪರಿಚಯ ಮಾಡಿಕೊಳ್ಳಬೇಕಾಯಿತು.

ನನ್ನ ಬರವಣಿಗೆಯಲ್ಲಿ ಎಷ್ಟೋ ಕಡೆ ಶಿವರಾಮ ಕಾರಂತರ ಪ್ರಸ್ತಾಪ ಬಂದಾಗ, ಅವರು ಹಿರಿಯ ಕನ್ನಡ ಸಾಹಿತಿಗಳೆಂದೂ, ಅವರ ಪ್ರತಿಭೆ ಕಾದಂಬರಿ ಮತ್ತು ನಾಟಕ ರಚನೆಗೆ ಸೀಮಿತವಾಗಿತ್ತೆಂದೂ ನಾನು ಬರೆದುದುಂಟು. ಕಾರಂತರು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕೈಯಾಡಿಸಿದ್ದಾರೆ. ಕಲೆ, ವಿಜ್ಞಾನ, ಔದ್ಯಮಿಕ ತಂತ್ರ ಮೊದಲಾದ ವಿಷಯಗಳಲ್ಲೂ ಅವರು ಪರಿಣತಿ ಪಡೆದಿದ್ದಾರೆ. ಅವರು ಬಹುಮುಖ ಪ್ರತಿಭಾವಂತರೆಂಬ ಸಂಗತಿ ನನಗೆ ಹಿಂದೆ ತಿಳಿದಿರಲಿಲ್ಲ. ಕಾರಂತರ ವೈಶಿಷ್ಟ್ಯಗಳನ್ನು ಒಬ್ಬರು ಈ ರೀತಿ ವರ್ಣಿಸಿದ್ದಾರೆ: "ಅವರು ನಾಟ್ಯಕಲಾವಿದರು. ನಾಟಕದಲ್ಲೂ ಅಭಿನಯಿಸಬಲ್ಲರು, ಪತ್ರಿಕೋದ್ಯಮ, ಮುದ್ರಣ, ಪ್ರಕಾಶನ, ನಿಘಂಟು ರಚನೆ, ಫೋಟೋಗ್ರಾಫಿ, ಚಿತ್ರಕಲೆ. ಶಿಲ್ಪ, ಮರದ ಕೆಲಸ, ಕೋಳಿಸಾಕಣೆ– ಇಷ್ಟೆಲ್ಲ ಮುಖಗಳಲ್ಲಿ ಅವರ ಜೀವನ ಹರವಿಕೊಂಡಿದೆ. ಒಂದು ಕಾಲದಲ್ಲಿ ಅವರು ಸತ್ಯಾಗ್ರಹಿಗಳಾಗಿ ಚಳವಳ ಹೂಡಿದುದುಂಟು. ಸ್ವತಃ ಸನ್ಯಾಸಿಗಳಂತಿದ್ದು ಬ್ರಹ್ಮಚರ್ಯದ ಪ್ರಚಾರಕರಾಗಿ, ಕೊನೆಗೆ ತ್ಯಾಗದ ಸೋಗುಗಳನ್ನೇ ತ್ಯಾಗ ಮಾಡಿದರು. ವಿಜ್ಞಾನದಲ್ಲೂ ಅವರು ತಲಸ್ಪರ್ಶಿಯಾದ ಅಧ್ಯಯನವನ್ನು ನಡೆಸಿದ್ದಾರೆ; ವೈಜ್ಞಾನಿಕ ವಿಷಯಗಳ ಕುರಿತು ಸರಳಗನ್ನಡದಲ್ಲಿ ಬರೆದು, ಪ್ರಕಟಿಸಿ, ಅಪೂರ್ವ ಯಶಸ್ಸನ್ನು ಸಾಧಿಸಿದ್ದಾರೆ."

ಇಂಥ ಅಪೂರ್ವ, ಆಶ್ಚರ್ಯಕರ ಬಹುಮುಖ ಪ್ರತಿಭಾಸಂಪನ್ನರನ್ನು ಕಂಡಾಗ ನಮ್ಮ ನೆನಪಿಗೆ ಬರುವವರು ರಬೀಂದ್ರನಾಥ ಠಾಗೋರ್, ಗೆಥೆ ಅಥವಾ ಲಿಯೋನಾರ್ಡೊ ಡಾ. ವಿನ್ಸಿ. ಕಾರಂತರ ಅಖಿಲ ಭಾರತ ಕೀರ್ತಿಯನ್ನು ಗಮನಿಸಿ, ಸಾಹಿತ್ಯ ಅಕಾಡೆಮಿ ಅವರಿಗೆ ಸಾಹಿತ್ಯಪ್ರಶಸ್ತಿಯ ಬಹುಮಾನವನ್ನಿತ್ತು ಗೌರವಿಸಿದೆ. ಅವರ ಪ್ರಸಿದ್ಧ ಕಾದಂಬರಿ 'ಮರಳಿ ಮಣ್ಣಿಗೆ'ಯಲ್ಲಿ ಬರುವ ಮೂರು ತಲೆಮಾರುಗಳ ಚಿತ್ರಣ, ವಸ್ತು ವಿಶ್ಲೇಷಣೆ, ಪಾತ್ರ ನಿರೂಪಣೆ ಎಂಥ ಓದುಗರನ್ನೂ ಮೆಚ್ಚಿಸುವಂಥವು. ಪ್ರೊ। ಎ. ಎನ್. ಮೂರ್ತಿರಾಯರು ಈಗಾಗಲೇ (೧೯೫೭ರಲ್ಲಿ) ಈ ಕಾದಂಬರಿಯನ್ನು ಇಂಗ್ಲಿಷಿಗೆ ತರ್ಜುಮೆಮಾಡಿದ್ದಾರೆ. ಕಾರಂತರ ಇನ್ನುಳಿದ ಪ್ರಸಿದ್ಧ ಕಾದಂಬರಿಗಳೂ ಇಂಗ್ಲಿಷಿನಲ್ಲಿ ಬರಬೇಕು. ಅವರ ಸಾಹಿತ್ಯ ಜಗತ್ತಿನ ಓದುಗರನ್ನೆಲ್ಲ ಮುಟ್ಟುವಂತಾಗಬೇಕು.

ಪ್ರೊ। ಕು. ಶಿ. ಹರಿದಾಸ ಭಟ್ಟರ ದಯೆಯಿಂದ ನಾನು ಈ ಸನ್ಮಾನ ಸಮಾರಂಭದ ಸಲುವಾಗಿ ಕಲ್ಕತ್ತೆಯನ್ನು ಬಿಟ್ಟು ಹೊರಡುವ ದಿವಸವೇ ಶ್ರೀ ಕಾರಂತರ 'ಮರಳಿ

ಮಣ್ಣಿಗೆ'ಯ ಇಂಗ್ಲಿಷ್ ಭಾಷಾಂತರದ ಪ್ರತಿ ನನ್ನ ಕೈಸೇರಿತು. ಕಾದಂಬರಿಯ ಕತೆ ನನಗೆ ಬಹಳ ರುಚಿಸಿತು. ಎರಡು ದಿವಸಗಳ ಪಯಣದಲ್ಲೇ ನಾನು 'ಮರಳಿ ಮಣ್ಣಿಗೆ' ಯನ್ನು ಓದಿ ಮುಗಿಸಿದೆ. ಭಾರತೀಯ ಸಾಹಿತ್ಯದ ಶ್ರೇಷ್ಠ ಕೃತಿಗಳಲ್ಲೊಂದನ್ನು ಇಂಗ್ಲಿಷ್ ಭಾಷೆಯಲ್ಲಿ ಮನಮುಟ್ಟುವಂತೆ ಅನುವಾದ ಮಾಡಿರುವ ಪ್ರೊ। ಮೂರ್ತಿರಾಯರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು. ಕಾರಂತರ ಸಾಹಿತ್ಯಕೃತಿಗಳನ್ನೋದುವ ಭಾಗ್ಯ ನನಗೆ ಈ ಹಿಂದೆ ದೊರೆತಿರಲಿಲ್ಲ. ಈ ಸಮಾರಂಭದಲ್ಲಿ ಅವರನ್ನು ಸ್ವತಃ ಭೇಟಿಯಾಗುವ ಮುನ್ನ ಅವರ ಕಾದಂಬರಿಯ ಮೂಲಕ ನನಗೆ ಅವರ ಕಲೆಯ ಸ್ಪರ್ಶವಾದುದಕ್ಕೆ ಬಹಳ ಹಿಗ್ಗಿದೆ. 'ಮರಳಿ ಮಣ್ಣಿಗೆ' ಒಂದು ಮೇಲ್ಮಟ್ಟದ ಸಾಹಿತ್ಯಕೃತಿ. ಕೆಲವು ಹಳೆ ನಂಬಿಕೆಗಳ ಆವರಣದಲ್ಲಿ, ಸತ್ಯಧರ್ಮಗಳ ನಿಷ್ಠೆಯಲ್ಲಿ ನಿರ್ವಂಚನೆಯಿಂದ ಬದುಕುವ ನಮ್ಮ ಹಳ್ಳಿಯ ಜೀವನದ ಯಥಾರ್ಥ ಚಿತ್ರವನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಭಾರತದ ಸಂಸ್ಕೃತಿಯಲ್ಲಿ ಸಾರವತ್ತಾದ ಭಾಗಗಳನ್ನೆಲ್ಲ ಕಾರಂತರು ಅರ್ಥ ಮಾಡಿ ಕೊಂಡಿದ್ದಾರೆ. ಈ ಭಾಷಾಂತರದ ಮುನ್ನುಡಿಯಲ್ಲಿ ಕಾರಂತರು ಸಾಹಿತ್ಯ ಹಾಗೂ ಜೀವನದ ಬಗೆಗೆ ತಮ್ಮಲ್ಲಿರುವ ಕೆಲವು ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಆ ವಿಚಾರಗಳು ಗಂಭೀರವಾಗಿವೆ, ಅವರ ಮಹತ್ತರ ಪುರುಷಾರ್ಥಚಿಂತನೆಯ ಕುರುಹುಗಳಂತಿವೆ.

'ಮರಳಿ ಮಣ್ಣಿಗೆ'ಯಲ್ಲಿ ಬರುವ ಮೂರು ಹೆಣ್ಣು ಪಾತ್ರಗಳು ಸಾಹಿತ್ಯ ಪ್ರಪಂಚ ದಲ್ಲಿ ಅಚ್ಚಳಿಯದೆ ಉಳಿಯುವಂಥವು. ಜೀವನದ ಪಡಿಯಚ್ಚಿನಂತಿರುವ ಈ ಪಾತ್ರಗಳು ಮಣ್ಣಿನ ಸಹಜತೆಯನ್ನು ಉಳಿಸಿಕೊಂಡೇ ಮಣ್ಣನಾಚಿನ ಆದರ್ಶದತ್ತ ಹಾಯುತ್ತವೆ. ಈ ಪಾತ್ರಗಳು ಕರ್ಣಾಟಕಕ್ಕಷ್ಟೇ ಸಂಬಂಧಿಸಿದವುಗಳಲ್ಲ. ಬಂಗಾಳ, ತಮಿಳುನಾಡು, ಪಂಜಾಬ್, ಮಣಿಪುರ ಮುಂತಾದ ಭಾರತದ ಇತರ ಭಾಗಗಳಲ್ಲೂ ಈ ಪಾತ್ರಚಿತ್ರಣಕ್ಕೆ ಮಾರ್ದನಿಗೊಡುವ ಹಿಂದೂ ಸ್ತ್ರೀಯರನ್ನು ಕಾಣಬಹುದು. ಹಿಂದೂಸಂಸ್ಕೃತಿಯ ಸತ್ವವನ್ನು ಭಾರತ ಈಗಲೂ ಉಳಿಸಿಕೊಂಡಿದೆ. ಕಾಲ ಬದಲಾಗುತ್ತಿದ್ದು, ದ್ರವ್ಯ ಲೋಭದ ಸುಳಿಗೆ ಸಿಕ್ಕಿ ಹೃದಯವನ್ನು ಮುದುಡಿಸಿಕೊಳ್ಳುವ ಸಭ್ಯತೆಯ ಒಂದು ಸೋಗು ಎಲ್ಲ ಕಡೆ ಹರಡಿದೆಯಾದರೂ, ಭಾರತದ ಆತ್ಮಕ್ಕೆ ಈ ಸೋಗಿನ ಸ್ಪರ್ಶ ವಾಗಿಲ್ಲ. ವರ್ಷ ಎಂಭತ್ತರ ಹೊಸ್ತಿಲಲ್ಲಿರುವ ನಾನು 'ಪಾರ್ವತಿ', 'ಸರಸ್ವತಿ', 'ನಾಗ ವೇಣಿ'ಯಂಥ ಹೆಣ್ಣುಜೀವಿಗಳನ್ನು ನನ್ನ ಬಳಗದ ಬಂಧುಗಳಲ್ಲೇ ಕಂಡಿದ್ದೇನೆ. 'ಮರಳಿ ಮಣ್ಣಿಗೆ'ಯ 'ಪಾರ್ವತಿ'ಯ ಮರಣದ ಸತ್ಯಚಿತ್ರವನ್ನೋದುವಾಗ ಮನಸ್ಸು ಕರಗಿ ಹೋಗುತ್ತದೆ. ಅದನ್ನೋದುತ್ತಿದ್ದಾಗ ನನಗೆ ಕಣ್ಣೀರನ್ನು ತಡೆಯಲಾಗಲಿಲ್ಲ. ಕಲ್ಕತ್ತದ ನನ್ನ ಮನೆವಾರ್ತೆಯಲ್ಲೇ ಇಂಥ 'ಪಾರ್ವತಿ'ಯರ ಮರಣವನ್ನು ನಾನು ಕಣ್ಣಾರೆ ನೋಡಿದವನು.

'ಮರಳಿ ಮಣ್ಣಿಗೆ'ಯ ಗಂಡುಪಾತ್ರಗಳಲ್ಲಿ ಕಾರಂತರು ಮನುಷ್ಯಸಹಜವಾದ ಅಸಹನೆ, ಅಸೂಯೆ, ದ್ವೇಷ ಮೊದಲಾದ ದೌರ್ಬಲ್ಯಗಳನ್ನು ಮೂಡಿಸಿದ್ದಾರೆ. ಆ ದೌರ್ಬಲ್ಯಗಳು ಎಷ್ಟಿದ್ದರೂ, ಸಂದರ್ಭ ಬಂದಾಗ 'ರಾಮ ಐತಾಳ' 'ಶೀನ ಮಯ್ಯ' ರಂಥ ಪಾತ್ರಗಳು ತಮ್ಮ ಮಾನವಿಕ ಸೌಜನ್ಯವನ್ನು ಪೂರ್ಣವಾಗಿ ಪ್ರಕಟಿಸುತ್ತಾರೆ. ಶಾಪ ತಟ್ಟಿದವರಂತೆ ಯಾವ ಸಂಸ್ಕಾರದಿಂದಲೂ ಸುಧಾರಣೆ ಹೊಂದದ ಪಾತ್ರವೆಂದರೆ

ಲಚ್ಚನ ಪಾತ್ರ; ಆತ ತಂದೆಗೂ ವಿರುದ್ಧ, ಮಗನಿಗೂ ವಿಪರೀತ. ಮನುಷ್ಯವಿಕೃತಿಯ ಎಂದೂ ಬದಲಾಗದ ಅಂಶಗಳನ್ನು ಕಾರಂತರು ಈ ಪಾತ್ರದಲ್ಲಿ ಎರಕ ಹೊಯ್ದಿದ್ದಾರೆ.

'ಮರಳಿ ಮಣ್ಣಿಗೆ'ಯನ್ನಾಗಲೀ ಅಥವಾ ಅದೇ ರೀತಿಯ ಭಾರತೀಯ ಜೀವನ ಚಿತ್ರವನ್ನು ಮೂಡಿಸುವ ಇನ್ನಾವುದೋ ಭಾರತೀಯ ಭಾಷೆಯ ಗ್ರಂಥವನ್ನಾಗಲೀ ನಾವು ಓದುವ ಹೊತ್ತಿಗೆ ಶ್ರೀ ಕಾರಂತರು 'ಮರಳಿ ಮಣ್ಣಿಗೆ'ಯ ಇಂಗ್ಲಿಷ್ ಭಾಷಾಂತರದ ಮುನ್ನುಡಿಯಲ್ಲಿ ಬರೆದ ಮಾತುಗಳು ನೂರಕ್ಕೆ ನೂರು ಸತ್ಯವೆಂದೆನಿಸುತ್ತದೆ. ಕಾರಂತರು ಹೇಳುತ್ತಾರೆ: "ಭಾರತೀಯರಾದ ನಮಗೆ ಭಾರತದಲ್ಲಿ ಹರಡಿರುವ ಜೀವನವೆಲ್ಲ ಏಕ ರಸವಾಗಿ ಕಾಣುತ್ತದೆ. ಈ ಕೃತಿಯಲ್ಲಿ ಗೋಚರವಾಗುವ ಬಾಳಿನ ಹಾಗೂ ಸಮಸ್ಯೆಗಳ ವರ್ಣನೆ ಭಾರತದ ಇತರ ಯಾವ ಪ್ರದೇಶದ ಬಾಳಿಗೂ ಹೋಲಿಕೆಯಾಗಬಲ್ಲುದು. ನನ್ನ ದೃಷ್ಟಿಯಲ್ಲಿ ಭಾರತದ ಬೇರೆ ಬೇರೆ ಭಾಗಗಳ ಬಾಳಿನ ರೀತಿಗಳಲ್ಲಿ ಹೋಲಿಕೆಯಷ್ಟೇ ಅಲ್ಲ, ತಾದಾತ್ಮ್ಯವಿದೆ. ವೇದ, ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳ ಸಂಸ್ಕೃತಿಸಾರವನ್ನು ಹೀರಿಕೊಂಡ ಹಿಂದೂಭಾರತದ ಜನ ತಮ್ಮ ಮನುಷ್ಯ ಪ್ರಕೃತಿಯಲ್ಲಿ ಹೇಗೊ ಹಾಗೆ ಹೊರನೋಟದ ರೀತಿ ನೀತಿಗಳಲ್ಲೂ ಒಂದೇ ಕ್ರಮದವರು. ಪುರಾಣದ ಕತೆಗಳನ್ನೋ ಉಪದೇಶಗಳನ್ನೋ ಮೈಗೂಡಿಸಿಕೊಂಡ ಸಣ್ಣಪುಟ್ಟ ನುಡಿಗಟ್ಟುಗಳು, ಗಾದೆಗಳು, ಭಾವಿಕ ಹಿನ್ನೆಲೆಯಲ್ಲಿ ಆಚರಿಸಲಾಗುವ ರೂಢಿಗಳು, ಸಂಪ್ರದಾಯಗಳು, ನಡೆನುಡಿಗಳಲ್ಲಿ ಮೂಡುವ ಅಂಗಾಂಗಗಳ ಚಲನವಲನಗಳು ಭಾರತದ ಎಲ್ಲೆಡೆಗಳಲ್ಲೂ ಒಂದೇ ರೀತಿ. ಕಾರಂತರ ಪ್ರಾಂತ್ಯದಲ್ಲಿ ಕಾಣುವಷ್ಟೇ ಸಹಜವಾಗಿ ಅವುಗಳನ್ನು ಬಂಗಾಳದಲ್ಲೂ ಕಾಣಬಹುದು.

ಕಾರಂತರ ಕಾದಂಬರಿಯ ಕುರಿತು ನಾನು ಇಷ್ಟರವರೆಗೆ ಹೇಳಿದ ನಾಲ್ಕು ಮಾತುಗಳಿಗೆ ಉಪಸಂಹಾರವಾಗಿ ಅವರ ಮುನ್ನುಡಿಯಿಂದಲೇ ಕೆಲವು ಮಾತುಗಳನ್ನು ಉದ್ಧರಿಸಿ ಹೇಳುತ್ತೇನೆ:

"ಈ ಕಾದಂಬರಿಯಲ್ಲಿ ನಾನು ಚಿತ್ರಿಸಿರುವ ಬಾಳು ಮತ್ತು ಹೋರಾಟ ಪಡು ಕರಾವಳಿಯ ಒಂದು ಭಾಗದಲ್ಲಿ, ನಿಸರ್ಗಸೌಂದರ್ಯದ ಮಡಿಲಲ್ಲಿ, ಬಾಳು ನಡೆಸುತ್ತಿರುವ ನನ್ನ ಸಂಬಂಧಿಕರ ಮೂರು ತಲೆಮಾರುಗಳ ಕತೆ. ಒಂದನೆಯ ತಲೆಮಾರಿನಲ್ಲಿ ಬದುಕಿನ ಹೋರಾಟ ಬಹಳ ಕಠಿನವಾಗಿತ್ತು. ನೆಲದ ಸೌಂದರ್ಯ, ಹೊಳೆ-ಕಡಲುಗಳ ಏರಿಳಿತಗಳು ಈ ಬಾಳಿನ ಸಂಗ್ರಾಮಕ್ಕೆ ಮೂಕ ಹಿನ್ನೆಲೆಯಂತಿದ್ದವು. ಎರಡನೆಯ ತಲೆಮಾರಿನಲ್ಲಿ ಪಾಶ್ಚಾತ್ಯ ನಾಗರಿಕತೆಯ ಸಂಪರ್ಕ ಬೆಳೆಯಿತು. ಹೊಸ ವಿಚಾರಗಳ ಉದಯವಾಯಿತು. ಜತೆಗೆ ಕಿರಿಯರಲ್ಲಿ ಸುಖಸೌಕರ್ಯಗಳ ಆಸೆ ಹೆಚ್ಚಾಗಿ, ಆಫೀಸು ನೌಕರಿಗಳಲ್ಲಿ ಸೇರಿಕೊಳ್ಳುವ ಹವ್ಯಾಸ ಮೂಡಿತು. ಇಂಥ ಹೊಸ ಜನಾಂಗದ ದೃಷ್ಟಿಯಲ್ಲಿ ಹಳ್ಳಿಯವರು ನಡೆಸುವ ಮಣ್ಣಿನ ದುಡಿಮೆಗೆ ಮರ್ಯಾದೆಯೇ ಇರಲಿಲ್ಲ.

"ಮೂರನೆಯ ತಲೆಮಾರಿಗೆ ದೊರೆತದ್ದು ನಗರಜೀವನದ ಸಮಸ್ಯೆಗಳು: ಯಾಂತ್ರಿಕ ಜೀವನ, ನಿರುದ್ಯೋಗ ಇತ್ಯಾದಿ. ಇದರಿಂದ ರೊಚ್ಚಿಗೆದ್ದ ಕೆಲವು ಕಿರಿಯರು ಮರಳಿ ಮಣ್ಣಿಗೆ ಬಂದರು, ಹಳ್ಳಿಯ ದುಡಿಮೆಯಲ್ಲೇ ಆಸರೆ ಪಡೆದರು. ಕಾದಂಬರಿಯ 'ರಾಮ' ಈ ರೀತಿ ಮಣ್ಣಿಗೆ ಮರಳಿ ಬಂದವನು. ಆತ ತನ್ನ ನೆಲ ಬೆಳೆಗಳಿಗಾಗಿ ಬೆವರು

ಸುರಿಸಿದನು. ಅದೇ ನೆಲ, ಕಡಲು, ಬಾನು, ತೋಟ ಆತನ ಬಾಳಿಗೆ ಆಧಾರವಾಗಿ ನಿಲ್ಲುತ್ತವೆ. ಈ ನಿಸರ್ಗ ಪ್ರೀತಿಯಿಂದಾಗಿ ಹಿಂದಿನ ಎರಡು ತಲೆಮಾರುಗಳಿಗೂ ಸಿಗದಿದ್ದ ಸುಖದ ಬಯಕೆ ಮೂರನೆಯ ತಲೆಮಾರಿನಲ್ಲಿ ಸಾಧ್ಯವಾಗುತ್ತದೆ.

"ಈ ಭಾಷಾಂತರವನ್ನು ಓದುಗರ ಮುಂದಿಡುತ್ತಿದ್ದೇನೆ. ಇದಕ್ಕಿಂತಲೂ ಹೆಚ್ಚಿನ ಜೀವನ ಚಿತ್ರಣಗಳನ್ನು ನೀವು ಓದಿದ್ದೀರಿ. ನನಗೆ ನನ್ನ ಇತಿಮಿತಿಗಳ ಅರಿವು ಇದೆ, ಆ ಕುರಿತು ನೋವೂ ಇದೆ. ಆದರೆ ಒಂದು ಮಾತು ಹೇಳಬೇಕಾಗಿದೆ. ನನಗೆ ಈ ಕಾದಂಬರಿಯ ಸಾಹಿತ್ಯಿಕ ಮೌಲ್ಯ ಅಷ್ಟು ಮುಖ್ಯವಲ್ಲ. ನನಗೆ ಜನ್ಮ ಕೊಟ್ಟ ನನ್ನ ಹಿರಿಯರು ನಡೆಸಿದ ಬಾಳಿನ ಸಾಹಸವೇ ಇಲ್ಲಿ ಮುಖ್ಯ ವಿಷಯ. ಅವರ ಸಚ್ಚಾರಿತ್ರ್ಯದ ಒಂದಂಶವಾದರೂ ಈ ಕೃತಿಯಲ್ಲಿ ಪ್ರಕಟವಾಗಿದ್ದರೆ, ನಾನು ಕೃತಾರ್ಥನೆಂದು ತಿಳಿಯುವೆನು."

ನಾನು ಇಲ್ಲಿನ ಜನರ ಬಗೆಗೆ ಇಷ್ಟರವರೆಗೆ ಏನು ಕಲ್ಪಿಸಿಕೊಂಡಿದ್ದೇನೋ ಅದನ್ನೇ ಈಗ ಕಣ್ಣಾರೆ ನೋಡುವಂತಾದುದಕ್ಕೆ ತುಂಬ ಸಂತೋಷಪಡುತ್ತೇನೆ. ಭಿನ್ನಭಾಷೆ, ಭಿನ್ನಸಂಪ್ರದಾಯಗಳ ಜನ ಒಂದಾಗಿ. ಪರಸ್ಪರ ಸಹಕಾರದ ಸಾಮರಸ್ಯದ ರಾಷ್ಟ್ರನಿಷ್ಠ ಜೀವನವನ್ನು ನಡೆಸುವ ದೃಶ್ಯ ಇಲ್ಲಿ ನನಗೆ ಕಾಣುತ್ತಿದೆ. ತುಳುವರೂ, ಕನ್ನಡಿಗರೂ, ಕೊಂಕಣ ಸಾರಸ್ವತರೂ ಜತೆಜತೆಗೆ ಮಿತ್ರರಾಗಿ, ಶಾಂತವಾಗಿ, ಐಕ್ಯಭಾವನೆಯಿಂದ ಬಾಳುತ್ತಿದ್ದಾರೆ.

ಕೊಂಕಣದ ಸಾರಸ್ವತರು ಪೂರ್ವಕಾಲದಿಂದಲೂ ಸಾಂಸ್ಕೃತಿಕ ಹಾಗೂ ವಿದ್ಯಾಸಂಬಂಧಿ ವಲಯಗಳಲ್ಲಿ ಉನ್ನತ ಕಾರ್ಯಗಳನ್ನು ಸಾಧಿಸಿದವರು. ಇತ್ತೀಚೆಗೆ ಅವರು ಇತರ ಕ್ಷೇತ್ರಗಳಲ್ಲೂ ಸೇವೆ ಸಲ್ಲಿಸುತ್ತಿದ್ದಾರೆ. ಅಖಿಲಭಾರತ ಪ್ರಸಿದ್ಧಿಯನ್ನು ಗಳಿಸಿದ ಸಾರಸ್ವತ ವಿದ್ವಾಂಸರಲ್ಲಿ ರಾಮಕೃಷ್ಣ ಗೋಪಾಲ ಭಂಡಾರಕರ್ ಒಬ್ಬರು, ವಿಷ್ಣು ಸೂಕ್ತನ್‌ಕರ್ ಇನ್ನೊಬ್ಬರು. ಇವರಿಬ್ಬರೂ ಹಿರಿಯ ಸಂಸ್ಕೃತ ವಿದ್ವಾಂಸರಾಗಿದ್ದರು. ಇದೇ ರೀತಿಯ ಇನ್ನೆಷ್ಟೋ ಮಂದಿ ವಿದ್ವಾಂಸರು, ಸಂಶೋಧಕರು, ಶಿಕ್ಷಣವೇತ್ತರು, ವಿಜ್ಞಾನಿಗಳು, ವೈದ್ಯರು, ಆಡಳಿತಗಾರರು, ಉದ್ದಿಮೆದಾರರು, ವ್ಯಾಪಾರಿಗಳು ಕೊಂಕಣ ಸಾರಸ್ವತ ಬ್ರಾಹ್ಮಣರಲ್ಲಿ ಈಗಲೂ ಕಾಣಸಿಗುತ್ತಾರೆ. ಇವರು ಹೋದ ಸ್ಥಳಗಳಲ್ಲೆಲ್ಲ ನಮ್ಮ ರಾಷ್ಟ್ರದ ಕೀರ್ತಿಯನ್ನು ಹಬ್ಬಿಸಿದ್ದಾರೆ.

ಕರ್ನಾಟಕ, ಮಹಾರಾಷ್ಟ್ರ, ಕೇರಳ, ತಮಿಳುನಾಡು, ಪ್ರದೇಶಗಳಲ್ಲಿ ವಾಸಿಸುವ ಸಾರಸ್ವತರ ಮಧ್ಯೆ ಮಣಿಪಾಲದ 'ಪೈ'ಮನೆತನದವರು ತಾವು ಸಾಧಿಸಿರುವ ಜನಹಿತ ಕಾರ್ಯಗಳ ಮೂಲಕ ಅಚ್ಚಳಿಯದಂತೆ ಜನರ ಹೃದಯದಲ್ಲಿ ಸೇರಿಹೋಗಿದ್ದಾರೆ. 'ಮಣಿಪಾಲದ ಪೈ ಬಳಗ' (೧೯೬೭) ಎಂಬ ಪುಸ್ತಕವನ್ನು ಬರೆದಿರುವ ಅಮೇರಿಕದ 'ಸೆಲ್ಡೆನ್ ಮೆನಿಫಿ' ಎಂಬವರು ಪೈಮನೆತನದವರು ಸಾಧಿಸಿರುವ ದೀರ್ಘಕಾಲದ ಸೇವಾಕಾರ್ಯಗಳನ್ನು ಸುಂದರವಾಗಿ ವರ್ಣಿಸಿದ್ದಾರೆ. ಪೈಮನೆತನದವರು ಪ್ರಾರಂಭಿಸಿದ ಸಿಂಡಿಕೇಟ್ ಬ್ಯಾಂಕ್‌ನ ಕೀರ್ತಿ ದೇಶದಲ್ಲೆಲ್ಲ ಹರಡಿದೆ. ಶಿವರಾಮ ಕಾರಂತರು ಲೇಖಕರಾಗಿ, ಪ್ರತಿಭಾಸಂಪನ್ನರಾಗಿ ದೇಶದ ಮನ್ನಣೆ ಪಡೆದಿದ್ದಾರೆ. ಶ್ರೀ ಕಾರಂತರನ್ನು ಗೌರವಿಸುವ ಈ ಸಮಾರಂಭದಲ್ಲಿ ಪೈ ಬಳಗವರು ನೀಡಿರುವ ಸಹಕಾರ ಬಹಳ ಉಚಿತವಾಗಿದೆ. ಡಾ। ಟಿ. ಎಂ. ಎ. ಪೈಯವರ ಸಾಹಸ ಈ ಜಿಲ್ಲೆಯ ಬಣ್ಣವನ್ನೇ

ಬದಲಾಯಿಸಿದೆ: ಶಿಕ್ಷಣ, ವೈದ್ಯಕೀಯ ಹಾಗೂ ಸಾರ್ವಜನಿಕ ಪ್ರಗತಿಕಾರ್ಯಗಳಲ್ಲಿ ಈ ಜಿಲ್ಲೆ ಭಾರತದ ಇತರ ಭಾಗಗಳಿಗೆ ಆದರ್ಶವಾಗಿದೆ. ಇಷ್ಟೆಲ್ಲ ಪ್ರಗತಿಗೆ ಕಾರಣ ಪುರುಷರಾದ ಮಣಿಪಾಲದ ಋಷಿ ಡಾಕ್ಟರ್ ಟಿ. ಎಂ. ಎ. ಪೈಗಳವರಿಗೆ ನನ್ನ ಗೌರವ ಅಭಿನಂದನೆಗಳು.

ಸಾಹಿತ್ಯ, ವಿಜ್ಞಾನ, ಕೈಗಾರಿಕೆ, ನಾಟ್ಯ, ನಾಟಕ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಜನರಿಗಾಗಿ ದುಡಿದಿರುವ ಕಾರಂತರು ಒಬ್ಬ ಅಪೂರ್ವ ವ್ಯಕ್ತಿ, ಈ ದೇಶದ ದೊಡ್ಡ ಸೊತ್ತು. ಅವರ ೭೦ನೇ ಹುಟ್ಟು ಹಬ್ಬವನ್ನು ಆಚರಿಸುತ್ತಿರುವ ಈ ಸನ್ಮಾನ ಸಮಾರಂಭದಲ್ಲಿ ಅವರ ಪ್ರಸಿದ್ಧ ಕಾದಂಬರಿಗಳನ್ನು ಇಂಗ್ಲಿಷಿಗೆ ಭಾಷಾಂತರಿಸುವ ಸನ್ನಾಹ ನಡೆಯಬೇಕಾಗಿದೆ. ಸಮಾರಂಭದ ವ್ಯವಸ್ಥಾಪಕರೇ ಈ ಭಾಷಾಂತರದ ಕಾರ್ಯಕ್ಕೆ ಕೈ ಹಾಕಬಹುದು.

ಕಾರಂತರ ಪ್ರತಿಭೆಗೆ ನನ್ನ ಆದರದ ಅಭಿನಂದನೆಗಳು. ಅವರ ಮೈಮನಸ್ಸುಗಳ ಶಕ್ತಿ ಕುಂದದೆ, ಅವರು ದೀರ್ಘಾಯುಷಿಗಳಾಗಿ ನೂರು ವರ್ಷ ಬದುಕುವಂತಾಗಲಿ.

ಶ್ರೀ ಶಿವರಾಮಕಾರಂತ: ಶತಾಯುರ್ಭವತು
ಶ್ರೀ ಶಿವರಾಮಕಾರಂತೋ ವಿಜಯತಾಂ
(ಶ್ರೀ ಶಿವರಾಮಕಾರಂತರು ನೂರುಕಾಲ ಬಾಳಲಿ.
ಶ್ರೀ ಶಿವರಾಮಕಾರಂತರು ವಿಜಯ ಹೊಂದಲಿ.)

ಅಧ್ಯಕ್ಷರಾದ ಸುನೀತಿಕುಮಾರ ಚಟರ್ಜಿಯವರೇ, ಕನ್ನಡನಾಡಿನ ನಮ್ಮ ಬಾಂಧವರೇ,

ನಮ್ಮ ಆಮಂತ್ರಣಕ್ಕೆ ಓಗೊಟ್ಟು ಇಂದಿನ ಈ ಶುಭಮುಹೂರ್ತದಲ್ಲಿ ಇಲ್ಲಿ ಸೇರಿರುವ ಸಕಲ ಸಭಾಸದರನ್ನೂ ಅತ್ಯಂತ ಪ್ರೀತಿಯಿಂದ ಸ್ವಾಗತಿಸುವುದು ನನ್ನ ಮೊದಲ ಕರ್ತವ್ಯವಾಗಿದೆ. ಕೋಟ ಶಿವರಾಮ ಕಾರಂತರಿಗೆ ಈಗೆಂಟು ವರ್ಷಗಳ ಕೆಳಗೆ ಅರುವತ್ತು ತುಂಬಿದಾಗ ಈ ಊರಿನ ಜನರು ಇಂಥದೇ ಒಂದು ಉತ್ಸವವನ್ನು ಕೂಡಿಸಿ ಅವರಿಗೆ ಸನ್ಮಾನ ಮಾಡಿದರು. ಅರುವತ್ತು ಪುಟಗಳ ಒಂದು ಚಿಕ್ಕ ಹೊತ್ತಗೆ ಯನ್ನು ಅಣಿಗೊಳಿಸಿ ಅವರಿಗೆ ಉಡುಗೊರೆಯಾಗಿ ಕೊಟ್ಟರು. ಉಡುಪಿಯು ಹಾದಿ ಯಲ್ಲೇ ನಡೆದು ಕರ್ನಾಟಕದ ಇತರ ಅನೇಕ ನಗರಗಳೂ, ದೂರದ ಮುಂಬಯಿ ಕನ್ನಡಿಗರೂ ಕಾರಂತರ ಷಷ್ಠ್ಯಬ್ದಿಯನ್ನು ಸಂಭ್ರಮದಿಂದ ಅಲ್ಲಲ್ಲಿ ಆಚರಿಸಿದರು. ಆದರೆ ಅಖಿಲ ಕರ್ನಾಟಕ ತಳಹದಿಯಲ್ಲಿ, ಕಾರಂತರ ಅಭಿಮಾನಿಗಳನ್ನು ಏಕತ್ರ ಸೇರಿಸಿ ಅವರ ಹೆಸರಿನಲ್ಲಿ ಒಂದು ಸಾಹಿತ್ಯ ಸಮಾರಾಧನೆಯನ್ನೇ ನಡೆಸಬೇಕೆಂಬ ನಮ್ಮ ಆಸೆ ಇಂದು ಸಫಲವಾಗುವುದನ್ನು ಕಂಡು ನಮಗೆ ಆನಂದವಾಗಿದೆ. ಈ ಉತ್ಸವ ವನ್ನು ಆಗಮಾಡಿದ, ದೂರದ ಮುಂಬಯಿಯಿಂದ ಮಲೆನಾಡಿನ ಹರಿಹರಪುರದ ವರೆಗೆ ಹರಡಿರುವ ಕನ್ನಡಪ್ರೇಮಿಗಳಿಗೂ ಕಾರಂತಪ್ರಿಯರಿಗೂ ಮೊದಲಾಗಿ ನಮಿಸು ತ್ತೇವೆ.

ಈ ಸಮಾರಂಭದಲ್ಲಿ ಮತ್ತೊಂದು ವಿಧವಾಗಿ ಪಾಲ್ಗೊಳ್ಳುವವರು ಡಾಕ್ಟರ್ ಸುನೀತಿ ಕುಮಾರ ಚಟರ್ಜಿಯವರು. ಇವರು ಬಂಗಾಳದೇಶದಲ್ಲಿ ಹುಟ್ಟಿ ಬೆಳೆದವರು. ಬಹುಭಾಷಾ ತಜ್ಞರು, ಮೇಲಾಗಿ ಅತಿಶ್ರೇಷ್ಠ ಭಾಷಾಶಾಸ್ತ್ರಜ್ಞರು. ಅತ್ಯುತ್ತಮ ಸಂಶೋಧಕರು. ಫ್ರಾನ್ಸ್, ಬ್ರಿಟನ್, ಅಮೇರಿಕ ಮುಂತಾದ ವಿದೇಶಗಳಲ್ಲಿ, ಸ್ವದೇಶ ಭಾರತದ ನಾನಾ ವಿಧವಾದ ಸಾಹಿತ್ಯಕ್ಷೇತ್ರದಲ್ಲಿ ಹಾಗೂ ವಿದ್ಯಾರಂಗದಲ್ಲಿ ಕಾರ್ಯ ವೆಸಗಿದವರು. ರಾಜಕೀಯ ಕ್ಷೇತ್ರದಲ್ಲಿಯೂ ಸೇವೆ ಸಲ್ಲಿಸಿದವರು. ಶ್ರೀಮಾನ್ ಚಟರ್ಜಿ ಯವರ ಬಹುಮುಖವಾದ ಪಾಂಡಿತ್ಯ, ಕಾರ್ಯದಕ್ಷತೆಯನ್ನು ಮನಗಂಡ ಭಾರತ ಸರಕಾರ ಪದ್ಮಭೂಷಣ ಬಿರುದನ್ನು ಕೊಟ್ಟು ಮಾತ್ರ ತೃಪ್ತಿಪಡದೆ ಪದ್ಮವಿಭೂಷಣ ಎಂಬ ಬಿರುದನ್ನೂ ದಯಪಾಲಿಸಿ ಗೌರವಿಸಿದುದು ಇವರ ಅಸಾಮಾನ್ಯ ಪ್ರತಿಭೆಯ ದ್ಯೋತಕವಾಗಿದೆ. ಶ್ರೀ ಚಟರ್ಜಿಯವರು ಪ್ರಕೃತ ನಮ್ಮ ರಾಷ್ಟ್ರೀಯ ಪ್ರೊಫೆಸರ್ ಆಗಿಯೂ ದಿಲ್ಲಿಯ ಸಾಹಿತ್ಯ ಎಕಾಡೆಮಿಯ ಅಧ್ಯಕ್ಷರಾಗಿಯೂ ಭಾರತೀಯ ಸಂಸ್ಕೃತಿ ನಾಗರಿಕತೆಗಳ ಪುನರುತ್ಥಾನಕ್ಕೆ ಪರಿಶ್ರಮಿಸಿ ನಾನಾಮುಖವಾದ ಸೇವೆ ಸಲ್ಲಿಸುವ ಹೊಣೆ ಹೊತ್ತವರಾಗಿದ್ದಾರೆ. ಈ ಸಂಸ್ಥೆಯ ಮೂಲಕ ಭಾರತೀಯ ಭಾಷೆ ಮತ್ತು ಜನತೆಯ ಕಲ್ಯಾಣದ ಸಾರ್ಥಕ ಕಾರ್ಯವೆಸಗುತ್ತಿರುವ ಶ್ರೀ ಸುನೀತಿಕುಮಾರ ಚಟರ್ಜಿ ಯವರಿಗೆ ಅಭಿನಂದನಗಳನ್ನು ಸಲ್ಲಿಸುವ ಮೂಲಕ ಸುಸ್ವಾಗತವನ್ನು ಬಯಸುತ್ತೇವೆ.

ಈಗ ನಾನು ನಮ್ಮ ನಾಡಿನ ಸಾಹಿತ್ಯಕಾರರ ಕುರಿತು ಪ್ರಸ್ತುತಪಡಿಸಬೇಕು. ಅವರೇ ನಮ್ಮ ನಾಡಿನ ಕಲಾಸಂಸ್ಕೃತಿಗಳ ಪ್ರತೀಕದಂತಿರುವ ಸಾಹಿತ್ಯಪರಾಕ್ರಮಿ ಶ್ರೀ ಶಿವರಾಮ ಕಾರಂತರು. ಸಾಹಿತ್ಯವು ಜನರಂಜನೆಯ ಗುರಿಯನ್ನು ಮಾತ್ರ ಸಾಧಿಸುವ ವಸ್ತುಕೋಶವಲ್ಲ. ಅದು ಸತ್ಯಸನ್ನಿಹಿತವಾಗಿರಬೇಕಾದ್ದು ಅತ್ಯಗತ್ಯ. ಆದರೆ ನಮ್ಮಲ್ಲಿ ರಾಜಕೀಯ ಸತ್ಯಕ್ಕೆ ಸೆರೆಮನೆ-ದಂಡನೆಗಳ ಗಂಡಾಂತರವಿದೆ, ಸಾಮಾಜಿಕ ಸತ್ಯಕ್ಕೆ ಬಹಿಷ್ಕಾರದ ಭೀತಿಯಿದೆ, ಆಂತರಿಕ ಸತ್ಯಕ್ಕೆ ಕರ್ಮಠರ ಶಾಪವಿದೆ. ಹೀಗಾಗಿ ಸಾಹಿತ್ಯವು ಜನಪ್ರಿಯತೆಯನ್ನು ಗಳಿಸಬೇಕಾಗಿ ಸತ್ಯವನ್ನು ಅಡಗಿಸಿಡುವಂತೆ ಅದರ ಸೃಷ್ಟಿಯಾಗಿದೆ. ಆದರೆ ಕಾರಂತರು ಎಂದೂ ಸತ್ಯವನ್ನು ಬಚ್ಚಿಡದೆ ಅದು ಕಟು ವಾದರೂ, ಅಪ್ರಿಯವಾದರೂ ಹೇಳುವ ವ್ರತ ತೊಟ್ಟಿದ್ದಾರೆ. ಅವರದು ಸಾಹಿತ್ಯ ಕ್ಷೇತ್ರ ಒಂದೇ ಅಲ್ಲ. ಯಕ್ಷಗಾನ ಕಲೆ ಮತ್ತು ವಿಜ್ಞಾನ ಪ್ರಸಾರಕ್ಷೇತ್ರಗಳಲ್ಲಿ ಅಪೂರ್ವ ಕ್ರಿಯಾಶಕ್ತಿಯಿಂದ ಹಿಂದಿಲ್ಲ ಮುಂದಿಲ್ಲವೆಂಬಂತೆ ಕಾರ್ಯವೆಸಗಿದ್ದಾರೆ. ಮಹತ್ತರ ಗುರಿಯನ್ನು ಸಾಧಿಸಿದ್ದಾರೆ. ಅವರ ಕಾರ್ಯಶಕ್ತಿಯನ್ನು ಸಮಗ್ರ ಭಾರತವೂ, ಅಂತಾ ರಾಷ್ಟ್ರೀಯ ಕಲಾವಿದರೂ ಮೆಚ್ಚಿರುವರೆಂದ ಮೇಲೆ ನಮ್ಮ ಮೆಚ್ಚುಗೆ ಹೆಚ್ಚಾಗಿ ಬೇಕೆ! ಕನ್ನಡ ಸಾರಸ್ವತ ಪ್ರಪಂಚದಲ್ಲಿ ಲೋಕೋತ್ತರ ಕಾರ್ಯವೆಸಗಿ ನಮ್ಮ ತಾಯ್ನು ಡಿಗೂ, ಭಾರತೀಯ ಸಾಹಿತ್ಯಕ್ಕೂ ಒಂದು ವಿಶಿಷ್ಟ ಗೌರವ ಮತ್ತು ಮಾನ್ಯತೆಯನ್ನು ಒದಗಿಸಿಕೊಟ್ಟಿರುವ ಕಾರಂತರನ್ನು ಅಭಿನಂದಿಸುವುದು ನಮಗೆ ಹೆಮ್ಮೆಯೆಂದೆನಿಸಿದೆ. ಕನ್ನಡದ ವರಪುತ್ರರಾದ ಕಾರಂತರಿಗೆ ಅಭಿಮಾನದ ಸುಸ್ವಾಗತವನ್ನು ಬಯಸುತ್ತೇವೆ.

ನಾವು ಇಂದು ಸಾಯಂಕಾಲ ಅರ್ಪಿಸಲಿರುವ ಅಭಿನಂದನ ಗ್ರಂಥವನ್ನು ಬಿಡುಗಡೆ ಮಾಡಲು ನಾವು ಗುಜರಾತಿನ ಕವಿ ಉಮಾಶಂಕರ ಜೋಶಿಯವರನ್ನೂ, ಉತ್ಸವದ ಉದ್ಘಾಟನೆ ನಡೆಸಲು ರಾಜ್ಯದ ನೇತಾರರನ್ನೂ ಕೇಳಿಕೊಂಡಿದ್ದೆವು. ಆದರೆ ದೇಶದ ಕೆಲಭಾಗಗಳಲ್ಲಿ ಮೂಡಿದ ಅಶಾಂತ ಪರಿಸ್ಥಿತಿಗೆ ವಶರಾಗಿ ಅವರಿಬ್ಬರು ಮಹನೀಯರೂ ಇಲ್ಲಿಗೆ ಬರಲು ಅಸಮರ್ಥರಾಗಿದ್ದಾರೆ. ಅವರ ಪರವಾಗಿ ತಮ್ಮೆಲ್ಲರ ಕ್ಷಮೆಯನ್ನು ಯಾಚಿಸುತ್ತೇವೆ. ಆದರೆ ಅವರ ತೆರವಾದ ಸ್ಥಾನವನ್ನು ತುಂಬಿಕೊಡಲು ಸಂತೋಷದಿಂದ ಒಪ್ಪಿದ, ಕಾರಂತರ ಬಹುಕಾಲದ ಸ್ನೇಹಿತರೂ, ಕನ್ನಡಸಾಹಿತ್ಯಲೋಕದಲ್ಲಿ ಕವಿ ಎಂದೂ, ವಿಮರ್ಶಕರೆಂದೂ, ಕಲಾವಿಮರ್ಶಕರೆಂದೂ, ವಿಚಾರಸಾಹಿತ್ಯದ ಮೂಲ ಪುರುಷರೆಂದೂ, ವಾಗ್ಮಿಶ್ರೇಷ್ಠರೆಂದೂ ಹೆಸರಾಂತ ಹಿರಿಯರಾದ ಪ್ರೊಫೆಸರ್ ವಿ.ಸೀ. ಒಪ್ಪಿಕೊಂಡು ನಮ್ಮೊಡನೆ ಉತ್ಸಾಹದಿಂದ ಸೇರಿಕೊಂಡಿದ್ದಾರೆ. ಅವರಿಗೆ ನಮ್ಮ ಹಾರ್ದಿಕ ಸ್ವಾಗತ.

ಸಾಂಪ್ರದಾಯಿಕವಾದ ಉದ್ಘಾಟನೆಯ ಉಪಚಾರದ ಮಾತುಗಳ ಬದಲು ನೇರ ವಾಗಿ ಕ್ರಿಯಾ ತಾತ್ಪರ್ಯದಿಂದಲೇ ಈ ಉತ್ಸವ ನಡೆಯಬೇಕಾದ್ದು ಆಕಸ್ಮಿಕವೊ, ದೈವಪ್ರೇರಣೆಯೋ ತಿಳಿಯದು. ಆದರೆ ಇಬ್ಬರು ವಿ.ಸೀ.ಗಳು ಈ ಸತ್ಕಾರದಲ್ಲಿ ಸೇರಿದ್ದು ಪುಣ್ಯಭಾಗವೇ ಸರಿ. ಮೊನ್ನೆ ಮೊನ್ನೆ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ನೇಮಕಗೊಳ್ಳುವ ಮೊದಲೇ ಕನ್ನಡನಾಡಿನ ಸಂಘಟನಾಕ್ಷೇತ್ರಕ್ಕೂ, ಸಾಹಿತ್ಯಚೇತನಕ್ಕೂ ಹೇರಳ ಕಾಣಿಕೆಯನ್ನು ಕೊಟ್ಟು ಸಾಹಿತ್ಯವನ್ನು ಪ್ರೋತ್ಸಾಹಿಸು

ವುದರಲ್ಲೇ ತಮ್ಮ ನಲಿವನ್ನು ಗೆಲವನ್ನು ಕಂಡು, ಕನ್ನಡದ ಹಿತರಕ್ಷಣೆಗೆ ಎತ್ತಿದ ಕೈ ಎನಿಸಿದ ಪ್ರೊಫೆಸರ್ ಜವರೇಗೌಡರನ್ನು ಅಭಿಮಾನದಿಂದ ಇಲ್ಲಿ ಸ್ವಾಗತಿಸುತ್ತೇವೆ.

ನಮ್ಮ ಅಭಿನಂದನ ಗ್ರಂಥದಲ್ಲಿ ತಮ್ಮ ಬರವಣಿಗೆಗಳಿಂದ ಜೀವತುಂಬಿ, ಈ ಉತ್ಸವದಲ್ಲಿ ಮುಕ್ತಹೃದಯದಿಂದ ಭಾಗಿಗಳಾಗಲು ನಾಡಿನ ಎಲ್ಲೆಡೆಯಿಂದ ಆಗ ಮಿಸಿರುವ ಸಾಹಿತ್ಯೋಪಾಸಕರಿಗೂ, ವಿಮರ್ಶಕರಿಗೂ ನಮ್ಮ ಸುಸ್ವಾಗತ.

ಹಿಂದಿನ ಕಾಲದಲ್ಲಿ ರಾಜಾಸ್ಥಾನಗಳಲ್ಲಿ, ಮಠ-ಮಂದಿರಗಳಲ್ಲಿ ಇಂತಹ ಕವಿ ಪೂಜೆಯ ಸತ್ಸಂಪ್ರದಾಯ ನಡೆದುಬರುತ್ತಿದ್ದುದನ್ನು ಇತಿಹಾಸ ನಮಗೆ ತಿಳಿಸುತ್ತದೆ. ಇದಕ್ಕೆ ಕಾಲದ ನಿರ್ಬಂಧವಿರಲಿಲ್ಲ. ಮತಧರ್ಮಗಳ ಕಟ್ಟುನಿಟ್ಟುಗಳ ನಿಯಮವಿದ್ದಿಲ್ಲ. ಅನಂತರ ಪರತಂತ್ರವಾದ ಈ ಪದ್ಧತಿ ಅಪರಿಚಿತವಾಗಿ ಅಗೋಚರವಾಗಿದ್ದಿತು. ಇದೀಗ ಸ್ವತಂತ್ರ ಭಾರತದಲ್ಲಿ ಮತ್ತೆ ಈ ಸಂಪ್ರದಾಯದ ಪುನರುದ್ಧಾರವಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಸತ್ಕವಿಗಳನ್ನು ಸತ್ಕರಿಸುವುದೂ ಕಲಾವಿದರನ್ನು ಗೌರವಿಸು ವುದಕ್ಕಾಗಿ ಸಂಘ ಸಂಸ್ಥೆಗಳನ್ನು ಸಂಸ್ಥಾಪಿಸಿರುವುದೂ ಅಭಿನಂದನೀಯವಾಗಿದೆ, ಅನುಕರಣೀಯ ಪದ್ಧತಿಯಾಗಿದೆ. ಅಂತೆಯೇ ನಮ್ಮ ದೇಶದ ನಾನಾ ಭಾಗಗಳಲ್ಲಿ ಕವಿ, ಕಲಾವಿದರನ್ನು ಬಹುಮಾನಿಸುವ ಸಮಾಜ ಸಂಸ್ಥೆಗಳು ಕಾರ್ಯ ಮಾಡುತ್ತಿರು ವುದು ಸಂತಸದ ಸಂಗತಿಯಾಗಿದೆ.

ಭವ್ಯ ಭಾರತದೇವಿಯ ಚತುರ್ದಶ ಭುಜಗಳಂತಿರುವ ಹದಿನಾಲ್ಕು ರಾಜ್ಯ ಭಾಷೆಗಳ ಕವಿಪ್ರಧಾನರಿಗೆ ಈ ತೆರನಾದ ವಿಭೂತಿಪೂಜೆ ದೇಶದ ಎಲ್ಲೆಡೆಗಳಲ್ಲಿಯೂ ನಿರಂತರ ನಡೆದು ಬರುತ್ತಿರಲಿ, ನುಡಿಸೇವೆಯ ಮೂಲಕ ನಾಡಸೇವೆ ಸಾಗಿ ಬರಲಿ. ಅದರಿಂದ ಜನತೆಯಲ್ಲಿ ಕಲಾಜಾಗೃತಿಯುಂಟಾಗಿ ದೇಶದ ಸರ್ವಾಂಗೀಣ ಸಮುನ್ನತಿಗೆ ದಾರಿದೀಪ ಒದಗಲಿ ಎಂದು ಹಾರೈಸಿ ಮತ್ತೊಮ್ಮೆ ನಿಮ್ಮೆಲ್ಲರನ್ನೂ ಹಾರ್ದಿಕವಾಗಿ ಸ್ವಾಗತಿಸುತ್ತೇವೆ.

# ಕಳಪೆ ಕಂಡರೆ ಕೆಂಡ

ಎಂ. ಗೋಪಾಲಕೃಷ್ಣ ಅಡಿಗ

## ಸ್ವಾಗತ ಭಾಷಣ

ಮಹನೀಯರೆ, ಮಹಿಳೆಯರೆ,

ಕಾರಂತ ಅಭಿನಂದನ ಸಮಾರಂಭವನ್ನು ಚಂದಗಾಣಿಸಲು ನೀವೆಲ್ಲ – ಅತಿಥಿಗಳು, ಕನ್ನಡದ ಬರಹಗಾರರು, ಸಾಹಿತ್ಯಪ್ರೇಮಿಗಳು – ಇಲ್ಲಿ ನೆರೆದಿದ್ದೀರಿ. ನಿಮ್ಮನ್ನೆಲ್ಲ ಕಾರಂತ ಅಭಿನಂದನ ಸಮಿತಿಯ ಪರವಾಗಿ ನಾನು ಸಂತೋಷದಿಂದ ಸ್ವಾಗತಿಸುತ್ತೇನೆ.

ಇಂದು ನಾವು ಅಭಿನಂದಿಸುವ ಶ್ರೀ ಶಿವರಾಮ ಕಾರಂತರನ್ನು ನಿಮಗೆ ಪರಿಚಯ ಮಾಡಿಕೊಡುವುದೂ ಒಂದೇ, ನೇಸರನ್ನು ಸೊಡರಿನಿಂದ ತೋರಿಸುವುದೂ ಒಂದೇ. ಕಾರಂತರು ನಮ್ಮ ಇಂದಿನ ಮುಖ್ಯ ಅತಿಥಿ. 'ಕಾರಂತ ಪ್ರಪಂಚ'ವೆಂಬ ಅಭಿನಂದನ ಗ್ರಂಥವನ್ನು ಈ ಸಂದರ್ಭದಲ್ಲಿ ಅವರಿಗೆ ಕಾಣಿಕೆಯಾಗಿ ನಾವು ಅರ್ಪಿಸಲಿದ್ದೇವೆ. ಕಳೆದ ಕೆಲವು ದಶಕಗಳಲ್ಲಿ ಕಾರಂತರು ನಮ್ಮ ಬದುಕನ್ನು, ನಮ್ಮ ಸಂಸ್ಕಾರವನ್ನು ಶ್ರೀಮಂತ ವಾಗಿಸಲು ಕೈಗೊಂಡ ಅನೇಕ ಕಾರ್ಯಕ್ರಮಗಳನ್ನು ನಾವೆಲ್ಲ ವಿಸ್ಮಯದಿಂದ ನೋಡುತ್ತ ಬಂದಿದ್ದೇವೆ. ಅವರ ಪ್ರತಿಭೆಯ ಆಳ, ವಿಸ್ತಾರ ಎರಡೂ ನಮ್ಮನ್ನು ದಂಗುಬಡಿಸು ತ್ತವೆ. ಬದುಕಿನಲ್ಲೂ ಬರೆಹದಲ್ಲೂ ನಿಷ್ಠುರವಾದ ಪ್ರಾಮಾಣಿಕತನವನ್ನು ಕಾಪಾಡಿ ಕೊಂಡವರು ಕಾರಂತರು. ಕಳಪೆಯನ್ನು ಕಂಡರೆ ಕಾರಂತರು ಕೆಂಡವಾಗುತ್ತಾರೆ. ತೋರಿಕೆಗೆ ಗಟ್ಟಿಯಾಗಿ ಕಾಣುವ ಟೊಳ್ಳನ್ನು ಅವರು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುತ್ತಾರೆ.

ಈ ವ್ಯಕ್ತಿಯ ಸಮಕಾಲೀನರಾಗಿ ನಾವೆಲ್ಲ ಇದ್ದೇವಲ್ಲ – ಇದುವೇ ನಮಗೆಲ್ಲ, ಕರ್ನಾಟಕದ ಜನರಿಗೆಲ್ಲ ಅಭಿಮಾನಪಡುವ ವಿಷಯವಾಗಿದೆ. ಈ ಸಮಾರಂಭಕ್ಕೆ ಅವರನ್ನು ಹೃತ್ಪೂರ್ವಕವಾಗಿ ನಾನು ಸ್ವಾಗತಿಸುತ್ತೇನೆ. ಅಲ್ಲದೆ ಈ ಸಂದರ್ಭದಲ್ಲಿ ಅವರ ಜೀವನ, ಕೃತಿಗಳ ಬಗ್ಗೆ ಲೇಖನಗಳನ್ನೊಳಗೊಂಡ ಅಭಿನಂದನ ಗ್ರಂಥವನ್ನು ಅವರಿಗೆ ಸಮರ್ಪಿಸಲು ಅವರ ಅನುಮತಿ ಬೇಡುತ್ತೇವೆ. ಗ್ರಂಥವೇನೋ ಪರಿಪೂರ್ಣ ವಾಗಿದೆಯೆಂಬ ಹೆಗ್ಗಳಿಕೆ ನಮಗಿಲ್ಲ. ಕಾರಂತರ ಮೇಲೆ ನಮಗಿರುವ ವಿಶ್ವಾಸದ ರೂಪ ಅದು, ಅಷ್ಟೆ.

ಇಂದಿನ ಸಮಾರಂಭದ ಅಧ್ಯಕ್ಷತೆ ವಹಿಸಲು ಒಪ್ಪಿ ಬಂದ ಡಾ। ಸುನೀತಿ ಕುಮಾರ ಚಟರ್ಜಿ ಅವರು ಅಂತಾರಾಷ್ಟ್ರೀಯ ಖ್ಯಾತಿಯ ಮಹಾ ವಿದ್ವಾಂಸರು. ಪ್ರಸ್ತುತ ಅವರು ಹೊಸದಿಲ್ಲಿಯಲ್ಲಿ ಸಾಹಿತ್ಯ ಎಕಾಡೆಮಿಯ ಅಧ್ಯಕ್ಷರಾಗಿದ್ದಾರೆ. ಅವರ ಪಾಂಡಿತ್ಯ ಎಷ್ಟು ಅಗಾಧವೋ ಅಷ್ಟೇ ವಿಶಾಲ. ಅತಿಮಾನುಷಕ್ಕೆ ಏರುವ ಚೈತನ್ಯವುಳ್ಳದ್ದು

ಅದು. ಹಲವಾರು ಕಾಲ ಪ್ರಾಧ್ಯಾಪಕರಾಗಿ, ವಿದ್ವಾಂಸರಾಗಿ, ಗ್ರಂಥಕರ್ತರಾಗಿ ಭಾರತ ಕ್ಕೆಂದೇನು, ಸಮಸ್ತ ಜ್ಞಾನಪ್ರಪಂಚಕ್ಕೇ ಕೊಡುಗೈಯಿಂದ ಕೊಡಮಾಡಿದ ಹಿರಿಮೆ ಅವರದು. ದೇಶ ವಿದೇಶಗಳಲ್ಲಿ ತಮ್ಮ ಸಾಧನೆಗಳಿಗೋಸ್ಕರ ಅವರು ಪಡೆದ ಪದವಿ ಗಳನ್ನು, ಬಿರುದುಗಳನ್ನು ಇಲ್ಲಿ ಎಣಿಸುವುದೂ ಅಶಕ್ಯವೇ. ತಮ್ಮ ವೃದ್ಧಾಪ್ಯದ ದೆಸೆಯಲ್ಲೂ ಅವರು ಇಲ್ಲಿಯ ವರೆಗೆ ಬಂದು ಈ ಸಮಾರಂಭದ ಯಾಜಮಾನ್ಯ ವಹಿಸಿರುವುದು ಅವರು ಕನ್ನಡ ಜನರ ಮೇಲೆ ತೋರಿದ ಅಭಿಮಾನ, ವಿಶ್ವಾಸಗಳ ದ್ಯೋತಕವಾಗಿದೆ. ಇಲ್ಲಿ ನೆರೆದ ಕನ್ನಡ ಸಾರಸ್ವತ ಲೋಕದ ಪರವಾಗಿಯೂ, ಕಾರಂತ ಅಭಿನಂದನ ಸಮಿತಿಯ ಪರವಾಗಿಯೂ ಅವರಿಗೆ ಸ್ವಾಗತವನ್ನು ಬಯಸುತ್ತೇನೆ.

ಇಲ್ಲಿ ಅಭಿನಂದನ ಗ್ರಂಥವನ್ನು ಬಿಡುಗಡೆ ಮಾಡಲು ಒಪ್ಪಿದ ಪ್ರೊ। ವಿ. ಸೀತಾರಾಮಯ್ಯನವರೂ ಖ್ಯಾತ ಕವಿಗಳು, ವಿಮರ್ಶಕರು, ಮಹೋಪಾಧ್ಯಾಯರು. ಬೌದ್ಧಿಕವಾದ ವಿಷಯಗಳಲ್ಲಿ ಅವರಿಗೆ ಅತೀವ ಆಸಕ್ತಿ. ನಡೆಯಲ್ಲೂ ನುಡಿಯಲ್ಲೂ ಉತ್ಕೃಷ್ಟತೆಯನ್ನು ಸಾಧಿಸುವ ಛಲ ಅವರದು. ಕನ್ನಡ ಸಾಹಿತ್ಯ ಪ್ರೇಮಿಗಳಿಗೆಲ್ಲ ಅವರು ಪರಿಚಿತರೇ, ಅವರಿಗೂ ಸುಸ್ವಾಗತ.

ಇವರನ್ನಲ್ಲದೆ ಈ ದಿನ ಕಾರಂತರ ಕುರಿತು ಅಭಿನಂದನ ಪರ ಭಾಷಣಗಳನ್ನು ಮಾಡಲು ಒಪ್ಪಿ ಬಂದ ಶ್ರೀ ಕೆ. ಕೆ. ಹೆಬ್ಬಾರರು, ಶ್ರೀ ಟಿ. ಟಿ. ಪೈ, ಅವರು, ಶ್ರೀ ಸಿಂಪಿ ಲಿಂಗಣ್ಣನವರು, ಹಾಗೂ ಪ್ರೊ। ದೇ. ಜವರೇ ಗೌಡರು ಇವರನ್ನೂ ವಿಶ್ವಾಸ ಪೂರ್ವಕವಾಗಿ ಸ್ವಾಗತಿಸುತ್ತೇನೆ.

ಈ ಸಮಾರಂಭವು ಚಿರಸ್ಮರಣೀಯವಾಗುವಂತೆ ನಡೆಸಿಕೊಡಬೇಕೆಂದು ವಿನಂತಿಸಿ ಮತ್ತೊಮ್ಮೆ ನಿಮ್ಮೆಲ್ಲರಿಗೂ ಹಾರ್ದಿತ ಸ್ವಾಗತವನ್ನು ಬಯಸುತ್ತೇನೆ.

ಇಂದಿನ ಮಾನ್ಯ ಸಭಾಧ್ಯಕ್ಷರಾದ ಸುನೀತಿ ಕುಮಾರ ಚಟರ್ಜಿಯುವರೇ, ಪೂಜ್ಯ ಗುರುಗಳಾದ ಶ್ರೀಮಾನ್ ವಿ. ಸೀತಾರಾಮಯ್ಯನವರೇ, ಡಾ। ಮಾಧವ ಪೈಯವರೇ, ಡಾ. ಶಿವರಾಮ ಕಾರಂತರವರೇ ಮತ್ತು ಬಂಧುಗಳೇ: ಈ ದಿವಸದ ಉತ್ಸವವನ್ನು ಉದ್ಘಾಟಿಸಬೇಕೆಂದು ನನ್ನ ಮಿತ್ರರಾದಂತಹ ಶ್ರೀ ಕು. ಶಿ. ಹರಿದಾಸ ಭಟ್ಟರು ನನ್ನನ್ನು ನೇಮಿಸಿದ್ದಾರೆ. ಈ ಕಾರ್ಯವನ್ನು ನಾನು ಅತ್ಯಂತ ಸಂತೋಷದಿಂದ ಮತ್ತು ಹೆಮ್ಮೆಯಿಂದ ನೆರವೇರಿಸುತ್ತಿದ್ದೇನೆ. ಡಾ. ಪೈಯವರು ತಮ್ಮ ಪ್ರಾರಂಭ ಭಾಷಣದಲ್ಲಿ ಶ್ರೀಮಾನ್ ಕಾರಂತರಿಗೆ ೬೦ ವರ್ಷ ತುಂಬಿದ ಕೂಡಲೆ ನಾಡಿನ ನಾನಾ ಭಾಗಗಳಲ್ಲಿ ಸನ್ಮಾನ ಸಮಾರಂಭಗಳು ನಡೆದವು ಎಂದು ಹೇಳಿದರು. ಈ ಸತ್-ಪರಂಪರೆ ಇಂದೂ ಮುಂದುವರಿದಿದೆ: ಈ ಒಂದು ಪರಂಪರೆಯಲ್ಲಿ ಡಾ. ಶಿವರಾಮ ಕಾರಂತರು ಯಾವತ್ತೂ ೬೦ರ ಪ್ರಾಯದಲ್ಲೇ ಇರಲಿ ಎಂದು ಎಲ್ಲಾ ಸಾಹಿತಿಗಳ ಪರವಾಗಿ ನಾನು ಆಶಿಸುತ್ತೇನೆ. ಡಾ. ಶಿವರಾಮ ಕಾರಂತರ ಪರಿಚಯ ಯಾರಿಗಿಲ್ಲ? ಇಂತಹ ಉತ್ಸವ, ಇಂತಹ ಸಮಾರಂಭ, ಅವರಿಗೆ ಬೇಕಿಲ್ಲ. ಹೇಗೋ ಕಷ್ಟಪಟ್ಟು ಹಳೆಯ ಮಿತ್ರರು ಅವರನ್ನು ಎಳೆದುಕೊಂಡು ಬಂದು ಇಲ್ಲಿ ಕೂರಿಸಿದ್ದಾರೆಂದು ನಾನು ಅಂದುಕೊಂಡಿದ್ದೇನೆ. ಇಂತಹ ಸಮಾರಂಭಗಳು ಬೇಕಾಗಿರುವುದು ಇಲ್ಲಿ ಕುಳಿತಿರತಕ್ಕ ನನ್ನಂಥವರಿಗೆ, ನಿಮ್ಮಂಥವರಿಗೆ. ಆದರೆ ಅವರಲ್ಲಿರತಕ್ಕಂತಹ ವಿಶೇಷವಾದ ಗುಣಗಳನ್ನು ತಿಳಿದುಕೊಂಡು ಅವುಗಳನ್ನು ಅನುಸರಿಸಲು ಅನುಕೂಲವಾದ ಸನ್ನಿವೇಶ ಉಂಟಾಗುತ್ತದೆಂಬ ಕಾರಣದಿಂದ ಇಂತಹ ಉತ್ಸವ ಸಮಾರಂಭವನ್ನು ಮಾಡಿರುವುದೆಂದು ನಾನು ತಿಳಿದುಕೊಂಡಿದ್ದೇನೆ.

ಶ್ರೀಮಾನ್ ಕಾರಂತರು ಸ್ಥಿತಪ್ರಜ್ಞರು ಎಂದು ಧಾರಾಳವಾಗಿ ಹೇಳಬಹುದು. ಅವರು ಸುಮಾರು ನಾಟಕಗಳನ್ನು ಬರೆದಿದ್ದಾರೆ. ಅನೇಕ ವಿಧದ ಗ್ರಂಥಗಳನ್ನು ಬರೆದಿದ್ದಾರೆ, ವಿಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ರಚಿಸಿದ್ದಾರೆ. ವಿಶ್ವಕೋಶವನ್ನು ರಚಿಸಿದ್ದಾರೆ, ನಾನಾ ರೀತಿಯಲ್ಲಿ ಕನ್ನಡ ಸಾಹಿತ್ಯವನ್ನು ಬೆಳೆಸಿದ್ದಾರೆ. ಅನೇಕರು ಕವಿಗಳಾಗಿರಬಹುದು, ಸಾಹಿತ್ಯವನ್ನು ರಚಿಸಿರಬಹುದು. ಆದರೆ ಜೀವನದ ಎಲ್ಲಾ ಮುಖಗಳನ್ನೂ ಕಾಣಿಸಿದವರು, ಅನೇಕ ವಿಷಯಗಳನ್ನು ರಸವತ್ತಾಗಿ ಹೊಸಹೊಸ ರೀತಿಯಲ್ಲಿ ಚಿತ್ರಿಸಿರುವವರು ಬಹಳ ವಿರಳ. ಇಂಥ ಮಹನೀಯರ ವ್ಯಕ್ತಿತ್ವವನ್ನು ಅಳೆಯುವುದು ಬಹಳ ಕಷ್ಟವಾಗುತ್ತದೆ. ನನಗೆ ಕಾರಂತರ ಪರಿಚಯವಾದುದು ಬಹಳ ಇತ್ತೀಚೆಗೆ. ಅವರನ್ನು ತೀರ ಹತ್ತಿರದಿಂದ ನೋಡಿರುವುದು ಕೇವಲ ಮೂರು ವರ್ಷದಿಂದೀಚೆಗೆ. ಅದಕ್ಕೆ ಮುಂಚಿತವಾಗಿಯೂ ಅವರ ಬಗ್ಗೆ ನನಗೆ ಬಹಳ ಗೌರವವಿತ್ತು, ಬಹಳ ಯೋಗ್ಯ ವ್ಯಕ್ತಿ ಎಂದು ಅವರನ್ನು ತಿಳಿದಿದ್ದೆ. ಮೊಟ್ಟಮೊದಲು ಅವರ ಜೊತೆಯಲ್ಲಿ ಮಾತನಾಡಿದಾಗ ಸಾಹಿತ್ಯವನ್ನು ಕುರಿತು ಅವರು ಏನೂ ಹೇಳಲಿಲ್ಲ. ಶಿವರಾಮ ಕಾರಂತರನ್ನು ಜನರು ಒರಟು ಎನ್ನುವುದನ್ನು ನಾನು ಕೇಳಿದ್ದೆ. ಮೂರು ವರ್ಷಗಳ ಹಿಂದೆ ನಾನೂ ಹಾಗೆ ಅಂದುಕೊಂಡಿದ್ದೆ. ಆಗ ಕಾರಂತರು ಸರ್ವಾಧಿಕಾರ ಮನೋಭಾವವುಳ್ಳವರು ಎಂಬ ಭ್ರಮೆ ನನ್ನದು. ಆದರೂ ನನಗೆ ಅವರಲ್ಲಿ ಎಂದಿನಿಂದಲೂ ಅಪಾರ ಭಕ್ತಿ ಮತ್ತು ಗೌರವ. ಈ ಮೂರು ವರ್ಷಗಳಿಂದ ಕಾರಂತರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಕನ್ನಡ ನಿಘಂಟಿನ ಪರಿಷ್ಕರಣ ಸಮಿತಿಯಲ್ಲಿ ಕೆಲಸಮಾಡುತ್ತಿರುವುದು ನಮ್ಮ

ಭಾಗ್ಯ. ವಯಸ್ಸಿನಲ್ಲಿ ಅವರು ನನಗಿಂತ ತುಂಬ ಹಿರಿಯರು. ನಾನು ಸಮಿತಿಯ ಅಧ್ಯಕ್ಷನಾಗಿದ್ದೆ. ಕಾರಂತರು ಒಂದು ಸಾರಿಯಾದರೂ ಸಭೆಯ ಮರ್ಯಾದೆಗೆ ಧಕ್ಕೆ ತಂದವರಲ್ಲ. ಒಂದು ಪದಕ್ಕೆ ಅರ್ಥ ಹೇಳಿದಾಗ ತಪ್ಪೆಂದು ಕಂಡರೆ ಒಪ್ಪಿಕೊಳ್ಳುವರು. ಈ ವಿಷಯದಲ್ಲಿ ಅವರು ಗಾಂಧಿಯವರ ಹಾಗೆ, ಸಣ್ಣ ತಪ್ಪು ಮಾಡಿದರೂ ಹೇಳುತ್ತಿದ್ದರು. ಇಷ್ಟೇ ಅಲ್ಲ, ಶಿವರಾಮ ಕಾರಂತರ ಪ್ರತಿಭೆಗೆ ಪರಿಷ್ಕರಣ ಸಮಿತಿ ಒಂದು ಉತ್ಕೃಷ್ಟ ಆಡುಂಬೊಲ. ಬೆಳಗ್ಗೆ ೧೧ ಗಂಟೆಯಿಂದ ಸಾಯಂಕಾಲ ೫ ಗಂಟೆಯ ವರೆಗೆ ಅವರಿದ್ದರೆ ಎಲ್ಲರೂ ಹಾಜರು. ಸಾಮಾನ್ಯವಾಗಿ ಅವರು ಮೈಸೂರು ರಾಜ್ಯದಲ್ಲಿದ್ದರೆ ಖಂಡಿತವಾಗಿ ಈ ಸಭೆಯನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ೧೧ರಿಂದ ೫ರವರೆಗೆ ಕೆಲಸ ಮಾಡುತ್ತಾರೆ. ಸದಸ್ಯರ ಮುಖದಲ್ಲಿ ಬೇಸರ, ಆಸರ ಕಂಡರೆ ಒಂದು ನಗುವಿನ ಚಟಾಕೆಯನ್ನು ಹಾರಿಸುತ್ತಾರೆ. ಅಷ್ಟಕ್ಕೇ ಬಿಡದೆ ಮುಂದೆ ಹೋಗೋಣ ಎಂದು ತ್ವರೆ ಮಾಡುತ್ತಾರೆ. ಹೇಳುವುದು ಜನರಿಗೆ ಅರ್ಥವಾಗಬೇಕೆಂಬುದು ಅವರ ಮುಖ್ಯ ಉದ್ದೇಶ, ಆದುದರಿಂದ ಸಾಮಾನ್ಯರಿಗೆ ತಿಳಿಯುವ ರೀತಿಯಲ್ಲಿ ಸರಳ ಮಾತುಗಳಲ್ಲಿ ವಿಷಯವನ್ನು ಬರೆಯಬೇಕೆಂಬುದು ಅವರ ಅಭಿಪ್ರಾಯ. ಕಠಿಣ ಪದಗಳನ್ನು ಉಪಯೋಗಿಸಬಾರದು, ಯಾವುದೇ ಒಂದು ಪದಕ್ಕೆ ಅರ್ಥ ಗೊತ್ತಾಗದಿದ್ದರೆ ಇನ್ನೊಂದು ಕಡೆ ಹೋಗಬೇಕು, ಕನ್ನಡ ಪದಕ್ಕೆ ಬದಲಾಗಿ ಒಂದು ಕಠಿಣ ಸಂಸ್ಕೃತ ಪದವನ್ನು ಹಾಕಿದರೆ ಸಂಸ್ಕೃತ ನಿಘಂಟನ್ನು ಮರೆಹೊಗಬೇಕಾದೀತು. ಆದ್ದರಿಂದ ಕನ್ನಡ ಪದವನ್ನೇ ಉಪಯೋಗಿಸಬೇಕೆಂದು ಅವರು ಹೇಳುತ್ತಾರೆ. ನಮ್ಮ ಸಮಿತಿಯಲ್ಲಿ ನಾನು ಹೇಳುವುದೇ ಸರಿ ಎಂದು ಹೇಳುವ ಕೆಲವು ಖಂಡಿತವಾದಿಗಳಿದ್ದಾರೆ, ಆದುದರಿಂದ ವಾಗ್ಯುದ್ಧ ಸ್ವಾಭಾವಿಕ. ಸಂತೋಷಜನಕ. ಕಾರಂತರು ಆಗಿಂದಾಗ ಹೇಳುವ ಅಣಕ ಪದಗಳನ್ನು ಸೇರಿಸಿದರೆ ಒಂದು ಅನರ್ಥಕೋಶವೇ ಸೃಷ್ಟಿಯಾದೀತು. ಕಾರಂತರು ಒಮ್ಮೊಮ್ಮೆ ಕನ್ನಡ ಮಾಧ್ಯಮದ ಬಗ್ಗೆ ತೀವ್ರ ಸಂಶಯ ವ್ಯಕ್ತಪಡಿಸಿದ್ದಾರೆ. ಅದಕ್ಕೂ ಅವರನ್ನು ತಪ್ಪು ತಿಳಿದುಕೊಳ್ಳುವಂತಿಲ್ಲ. ನಮ್ಮ ಜನ ಸ್ವತಂತ್ರವಾಗಿ ಆಲೋಚನೆ ಮಾಡುತ್ತಿಲ್ಲ, ಸ್ವತಂತ್ರ ವಿಚಾರ ಬೆಳೆಸಿಕೊಂಡಿಲ್ಲ, ನಾಲ್ಕು ಮಾತುಗಳನ್ನು ಯಾರಾದರೂ ಹೇಳಿದರೆ ಪಾಠ ಮಾಡಿಕೊಂಡು ಬಳಸಿಕೊಳ್ಳುತ್ತಿದ್ದೇವೆ, ಅಲ್ಲೊಂದು ಇಲ್ಲೊಂದು ಹೇಳುವುದನ್ನು ಕೇಳಿ ಪುಸ್ತಕ ಬರೆಯುತ್ತಿದ್ದೇವೆ, ಇದು ಸರಿಯಲ್ಲ, ನಾವೇ ಸ್ವತಂತ್ರವಾಗಿ ಆಲೋಚನೆ ಮಾಡಿ, ವಿಜ್ಞಾನ ಮುಂತಾದ ಎಲ್ಲ ವಿಷಯಗಳ ಜ್ಞಾನವನ್ನೂ ಕನ್ನಡದಲ್ಲೇ ಕೊಡಬೇಕು, ನಾವು ಮಾಡುವ ಕಾರ್ಯದಲ್ಲಿ ತಪ್ಪಿರಬಾರದು ಎಂಬುದು ಅವರ ಉದ್ದೇಶ. ಅವರ ಚುಚ್ಚುಮಾತು ಒಮ್ಮೊಮ್ಮೆ ಬಲು ಪರಿಣಾಮಕಾರಿಯಾಗಿರುವಂತೆ ನನಗೆ ತೋರಿದೆ: ಅದು ಇಂಜೆಕ್ಷನ್ ಇದ್ದಹಾಗೆ. ನೋಯಿಸಿದರೂ ಆರೋಗ್ಯವರ್ಧಕ.

ಇಂದು ನಾವು ಕಾರಂತರನ್ನು ಅಭಿನಂದಿಸುತ್ತಿದ್ದೇವೆ ಎಂದು ನನಗನಿಸುವುದಿಲ್ಲ. ಅವರಿಗೆ ಅಭಿವಂದಿಸುತ್ತಿದ್ದೇವೆ. ಅವರು ಒಬ್ಬ ಸ್ಥಿತಪ್ರಜ್ಞರು, ಕನ್ನಡದ ಹಿರಿಯ ಸಾಧಕ, ಭಾರತೀಯ ಸಂಸ್ಕೃತಿಯ ರಕ್ಷಕ. ಅವರ ಕೃತಿ ಶಕ್ತಿಗೆ ವಯಸ್ಸಿನ ಮಿತಿ ಇಲ್ಲ. ಕನ್ನಡ ನಾಡಿಗೆ ಮಾತ್ರವಲ್ಲ, ಇಡೀ ಭರತಖಂಡಕ್ಕೆ ಅವರ ಸಾಹಿತ್ಯಸೇವೆಯ ಲಾಭ ದೊರೆಯಲಿ ಎಂದು ಪ್ರಾರ್ಥಿಸುತ್ತೇನೆ.

ಪ್ರತಿಷ್ಠಿತ ಸಾಹಿತಿಗಳೇ, ಶಿಕ್ಷಣವೇತ್ತರೇ, ಹಾಗೂ ಮಿತ್ರರೇ,

ನಿಮಗೆಲ್ಲ ತಿಳಿದಂತೆ ಶಬ್ದಪ್ರಪಂಚ ವ್ಯವಹಾರಿಯಲ್ಲದ ನಾನು ಇಂದು ಇಂಗ್ಲಿಷಿನಲ್ಲಿ ಮಾತನಾಡಲು ಅನುಮತಿಯನ್ನೀಯಬೇಕೆಂದು ನಿಮ್ಮನ್ನು ಬಿನ್ನವಿಸುವೆ. ಕಾರಂತ ಅಭಿನಂದನ ಗ್ರಂಥಕ್ಕಾಗಿ ಲೇಖನವೊಂದನ್ನು ನೀಡಬೇಕೆಂದು ಪ್ರೊ। ಹರಿದಾಸ ಭಟ್ಟರು ಬಿನ್ನವಿಸಿಕೊಂಡಾಗ ಅದು ನನ್ನಳವಿಗೆ ಮೀರಿದ ಸಾಹಸವೆಂದು ನಾನು ಚೆನ್ನಾಗಿ ತಿಳಿದಿದ್ದೆ. ಆದರೂ ನನ್ನದೇ ಆದ ರೀತಿಯಲ್ಲಿ ರೂಪುಗೊಂಡ ರೇಖಾಕೃತಿಯೊಂದು ಅವರಿಗೆ ಗ್ರಾಹ್ಯವೆಂದಾದರೆ ಅದನ್ನು ಕಳುಹಿಸುವುದಾಗಿ ಒಪ್ಪಿಕೊಂಡೆ. ಕಳೆದ ಸುಮಾರು ೧೭ ವರ್ಷಗಳಿಂದ ಡಾ। ಕಾರಂತರ ನಿಕಟ ಸಹವರ್ತಿಯಾಗಿರುವ ಭಾಗ್ಯ ನನ್ನದು. ಪರಸ್ಪರ ಪ್ರಶಂಸೆಯಲ್ಲಿ ತೊಡಗಿ ಬೆನ್ನು ತಟ್ಟಿಕೊಳ್ಳುವ ಗೆಳೆಯರು ನಾವಲ್ಲ. ಒಬ್ಬರಿಂದೊಬ್ಬರು ಏನನ್ನಾದರೂ ಹೊಸತು ಕಲಿತುಕೊಳ್ಳುವ ಯತ್ನದಲ್ಲಿ ವಾದವಿವಾದ ತರ್ಕವಿತರ್ಕಗಳಿಂದ ಕಚ್ಚಾಡುತ್ತ ಬಂದವರು ನಾವು. ಆದರೆ ನಾನು ಡಾ। ಕಾರಂತರಿಗೆ ಕೊಡ ಮಾಡಿದುದಕ್ಕಿಂತ ಅವರಿಂದ ಪಡೆದು, ತಿಳಿದು ಕಲಿತುದೇ ಹೆಚ್ಚೆಂಬುದು ನಿರ್ವಿವಾದ. ನನ್ನ ಈ ಎಲ್ಲ ವಿಚಾರಗಳು ನನ್ನ ಕಿರುಕೃತಿಯ ಕೆಲವೇ ಸಾಲುಗಳ ಮಿತಿಯಲ್ಲಿ ಪಡಿ ಮೂಡಬೇಕೆಂಬುದೇ ನನ್ನ ಬಯಕೆಯಾಗಿತ್ತು. 'ಕಾರಂತ ಪ್ರಪಂಚ'ದ ಆ ನನ್ನ ಕೃತಿಯ ರೇಖೆಗಳಲ್ಲಿ ನನ್ನ ಎಲ್ಲ ವಿಚಾರಗಳು ಮೂಡಿವೆ ಹಾಗೂ ಡಾ। ಕಾರಂತರ ನಿಕಟವರ್ತಿಯಾಗಿ ನಾನು ಹೇಳಬಹುದಾದ್ದನ್ನೆಲ್ಲ ಹೇಳಿದ್ದೇನೆ.

'ಸಾಹಿತಿ' ಅನ್ನಿಸಿಕೊಂಡವನು ಸಮಾಜದ ಮೆಚ್ಚುಗೆ, ಪುರಸ್ಕಾರಗಳನ್ನು ಪಡೆಯುವ ಭಾಗ್ಯ ಬೇಡಿ ಬಂದಿರುವುದಿಲ್ಲ ಎಂಬುದು ಸಾಮಾನ್ಯ ನಂಬಿಕೆ. ಆದರೆ ಅಂಥ ಸಾಹಿತಿಯು ತಾನು ವ್ಯವಹರಿಸುತ್ತಿರುವ ಸಮಾಜದ ಉತ್ಕರ್ಷ, ಉನ್ನತಿಗಳಿಗಾಗಿ ಅವಿರತವಾಗಿ ದುಡಿಯುವುದೂ ಅಷ್ಟೇ ಸಾಮಾನ್ಯ. ಇಂತಹ ಸಾಮಾಜಿಕ ಅವಹೇಳನ ಎಷ್ಟರ ಮಟ್ಟಿಗೆ ನಿಜ ಎಂಬುದು ನನಗೆ ತಿಳಿಯದು. ಆದರೆ ಇಂದು ಹೀಗಿಲ್ಲ ಎಂಬುದು ನನ್ನ ಅನುಭವ. ಕಲಾವಿದ ವಾನ್ ಗೋಗ್(Van Gogh)ನ ಹೆಸರನ್ನು ನಿಮ್ಮಲ್ಲಿ ಬಹಳ ಜನ ಕೇಳಿ ತಿಳಿದಿರಬೇಕು. ಅವನಂಥ ಒಬ್ಬ ವ್ಯಕ್ತಿ ಕಲಾಪ್ರಪಂಚದಲ್ಲಿ ಇಲ್ಲ. ಅವನು ಬದುಕಿದ್ದಷ್ಟೂ ಕಾಲ ಸಮಾಜದಿಂದ ಅವನು ಪ್ರೀತಿ ವಾತ್ಸಲ್ಯಗಳನ್ನು ಪಡೆಯಲಿಲ್ಲ. ತನ್ನ ಸುತ್ತಲಿನ ಇಡಿಯ ಪ್ರಪಂಚವೇ ತನ್ನನ್ನು ಖಂಡಿಸುತ್ತಿರುವುದನ್ನು ಗೇಲಿ ಮಾಡುತ್ತಿರುವುದನ್ನು ಅವನು ಚೆನ್ನಾಗಿ ಅರಿತಿದ್ದರೂ ಆತ ತನ್ನ ಸ್ವಂತ ವಿಚಾರಸರಣಿಯನ್ನು ತೊರೆಯಲಿಲ್ಲ. ಬಹುಶಃ – ಅವನ ಸಹೋದರ ಹಾಗೂ ಒಬ್ಬ ವೈದ್ಯ ಮಿತ್ರ ಈ ಇಬ್ಬರು ಉದಾರ ಜೀವಿಗಳ ಹೊರತಾಗಿ ಅವನನ್ನು ಮೆಚ್ಚಿದವರೇ ಇಲ್ಲ, ನಡೆಸಿಕೊಂಡವರಿಲ್ಲ. ಈ ಪರಿಸ್ಥಿತಿಯಲ್ಲಿಯೂ ತನ್ನ ಮನದ ಶಾಂತಿಯನ್ನು ಕಾಪಾಡಿಕೊಂಡು,

ತನ್ನದೇ ಆದ ವಿಚಾರಗಳಲ್ಲಿ ಮಗ್ನನಾಗಿ, ತನ್ನ ಬದುಕನ್ನೇ ತೇದು ಚಿತ್ರಗಳನ್ನು ಬರೆದ. ತಾನು ಎದುರಿಸಬೇಕಾಗಿ ಬಂದ ಬದುಕಿನ ಚಿತ್ರಹಿಂಸೆಯನ್ನು ಕೊನೆಗೂ ಸಹಿಸಲಾರ ದವನಾಗಿ ತನ್ನ ಬದುಕಿಗೆ ಕೊನೆ ತಂದುಕೊಂಡ. ಸಾಹಿತಿಗಳ ಸಭೆಯೊಂದರಲ್ಲಿ ವಾನ್ ಗೋಗನನ್ನು ಕೊಲೆಮಾಡಿದ ಹೊಲೆ ಅವನು ಬದುಕಿದ್ದ ಸಮಾಜಕ್ಕೆ ಸಲ್ಲಬೇಕೆಂದು, ವಿಮರ್ಶಕ ಮಿತ್ರರೊಬ್ಬರಿಗೆ ನಾನು ಒತ್ತಿ ಹೇಳಿದಾಗ ಅವರು ಅದನ್ನು ನಿರಾಕರಿಸಿದರು. ಸತ್ತ ಕೆಲವರ್ಷಗಳ ಬಳಿಕ ಇಡಿಯ ಸಮಾಜದ ಖಂಡನೆ ಪರಿಹಾಸಗಳಿಗೆ ಪಕ್ಕಾಗಿದ್ದ ಅದೇ ವ್ಯಕ್ತಿ ವಾನ್‌ಗೋಗನು ಅಖಂಡ ಯುರೋಪಿನ ಜನ ಮನ್ನಣೆಗೆ ಪಾತ್ರನಾಗಿ ಎಲ್ಲರ ಕಣ್ಮಣಿಯಾದ. ಇಂದು ಈ ಪ್ರಪಂಚದ ತುಂಬೆಲ್ಲ ಅವನ ಕಲಾಕೃತಿಗಳು ಅಮೂಲ್ಯವೆನಿಸಿ ಕಲಾಭವನಗಳ ಭವ್ಯತೆಯನ್ನು ಹೆಚ್ಚಿಸಿವೆ. ಅಂತೆಯೇ ಕೆಲವರ್ಷಗಳ ಹಿಂದೆ ಡಾ। ಕಾರಂತರ ವಿಚಾರದಲ್ಲೂ ನಾನು ಕಿವಿಯಾರೆ ಕೇಳಿದ್ದ ಕಟುನುಡಿಗಳು ಹಲವಾರು. 'ತಲೆಗೆಟ್ಟ ತಿರುಕುಳಿ' ಎಂದು, 'ಗೆಲುವಿನ ಗುರಿಮುಟ್ಟಲಾರದ ಉರುಳು ಗಲ್ಲು' ಎಂದು, – ಒಂದೇ, ಎರಡೇ – ಜನ ಮನಬಂದಂತೆ ಆಡಿಕೊಂಡರು. ಆ ಮಾತು ಗಳ ಅರ್ಥವೇನೆಂದು ಡಾ। ಕಾರಂತರಿಗೆ ಬಹುಶಃ ತಿಳಿಯದು. ಇಂದು ಆ ಪ್ರಪಂಚ ತೀರ ಬದಲಾಗಿದೆ. ಅವರನ್ನು ಕಡೆಗಣಿಸಿದ ಜನ ಇಂದು ಅವರನ್ನು ಕೊಂಡಾಡ ತೊಡಗಿದ್ದಾರೆ. ಕೆಲವರಂತೂ ಅಸೂಯೆ ಪಡುತ್ತಾರೆ. ಡಾ। ಕಾರಂತರನ್ನು ಮೆಚ್ಚಿ, ಅವರನ್ನು ಅಭಿನಂದಿಸಲು ಇಲ್ಲಿ ನೆರೆದಿರುವ ಈ ಜನಸಮುದಾಯದ ಹಾಗೂ ಅವರ ಸಹಚರರ ಅಪೂರ್ವ ಸಂಭ್ರಮಾನಂದಗಳಲ್ಲಿ ಪಾಲ್ಗೊಳ್ಳುವ ಉದ್ದೇಶದಿಂದ ನಾನು ಇಲ್ಲಿಗೆ ಬಂದೆನಲ್ಲದೆ ಭಾಷಣ ಬಿಗಿಯಲು ಬಂದಿಲ್ಲ: ಇಲ್ಲಿ ನೆರೆದಿರುವ ಸಾಹಿತಿಮಿತ್ರರ ಅಮಿತ ಆದರೋತ್ಸಾಹಗಳನ್ನು ನಾನು ಇಂದು ಮುಂಜಾವಿನಿಂದಲೂ ನಿರೀಕ್ಷಿಸುತ್ತ ಬಂದಿದ್ದೇನೆ. ಹುಚ್ಚುಮನಸ್ಸಿಗೆ ಹತ್ತು ಹವ್ಯಾಸಗಳಿಲ್ಲದೆ ಬರಿಯ ಧೈರ್ಯವೊಂದ ರಿಂದಲೇ ಮನುಷ್ಯ ಏನನ್ನೂ ಸಾಧಿಸುವುದು ಅಸಾಧ್ಯವೆಂದು ನನಗೆ ಇಂದು ಮನವರಿಕೆ ಯಾಗಿದೆ. ನಿಮ್ಮೆಲ್ಲರಿಂದ ಪಡೆದ ಸ್ಫೂರ್ತಿಯೇ ನೆಲೆಯಾಗಿ ಡಾ। ಕಾರಂತರು ಈ ತನಕ ತೋರಿದ ಈ ಹುಚ್ಚು ಹುಮ್ಮಸದಿಂದಲೇ ತನ್ನ ತುಂಬು ಬಾಳುವೆಯನ್ನು ಬದುಕುವ ರೆಂಬ ಭರವಸೆ ನನಗಿದೆ. ಇಂದು ಬೆಳಗಿದ ಈ ಅಭೂತಪೂರ್ವ ಅಭಿನಂದನೋತ್ಸವವು ಕಲಾವಿದನ ದೃಷ್ಟಿಯಲ್ಲಿ ಮಹತ್ವಪೂರ್ಣವೇನೂ ಅಲ್ಲ. ಆದರೆ ಮಾನವೀಯ ಆಚ ರಣೆಯ ಇನ್ನೊಂದು ಮುಖವನ್ನು ನಾವು ಮರೆಯಲಾಗದು. ತನ್ನಲ್ಲಿ ತೋರಿದ ಈ ಪ್ರೀತಿ ವಿಶ್ವಾಸಗಳು ಜನತಾ ಜನಾರ್ದನನ ಸೇವಾ ಕಾರ್ಯದಲ್ಲಿ ಇನ್ನೂ ಹೆಚ್ಚಿನ ಹೊಣೆಗಾರಿಕೆಯನ್ನು ತನ್ನ ಹೆಗಲಿಗೇರಿಸಿದಂತಾಯಿತು ಎಂಬ ಪ್ರಜ್ಞೆಯನ್ನು ಡಾ। ಕಾರಂತರಲ್ಲಿ ಬೆಳೆಸುವುದರಲ್ಲಿ ಯಾವ ಸಂಶಯವೂ ಇಲ್ಲ.

# ಅವರ ಜೀವನದ ಸಾಮಾಜಿಕ ಮುಖ

**ಟಿ. ಎ. ಪೈ**

ಅನುವಾದ: ಶ್ರೀನಿವಾಸ ಭಟ್

ಅಭಿನಂದನಪರ ಭಾಷಣ – ೨

ಮಿತ್ರರೇ,

ಕರ್ಣಾಟಕದ ಒಳಹೊರಗಿನಿಂದ ಗಣ್ಯ ವ್ಯಕ್ತಿಗಳನೇಕರು ಇಂದು ಡಾ। ಕಾರಂತರಿಗೆ ತಮ್ಮ ಗೌರವಪುಷ್ಪಗಳನ್ನರ್ಪಿಸಲು ಇಲ್ಲಿ ನೆರೆದಿದ್ದಾರೆ. ಈ ಭವ್ಯ ಸಮಾರಂಭಕ್ಕೆ ನನ್ನನ್ನು ನೀವೆಲ್ಲ ಬರ ಮಾಡಿಕೊಂಡು ನಾಲ್ಕು ನುಡಿಗಳನ್ನಾಡುವ ಅವಕಾಶ ನನಗೆ ಒದಗಿಸಿಕೊಟ್ಟುದು ನನ್ನ ಮಹಾಭಾಗ್ಯ. ಡಾ। ಕಾರಂತರು ಯಾವ ದಯ ದಾಕ್ಷಿಣ್ಯವೂ ಇಲ್ಲದೆ ನೆಚ್ಚಿಕೊಂಡ ಮೌಲ್ಯಗಳನ್ನು ಮೆಚ್ಚಿ ಇಲ್ಲಿ ಸೇರಿದ ನಿಮ್ಮೆಲ್ಲರನ್ನು ಕಂಡು ಈ ಜಗತ್ತಿನಲ್ಲಿ ಇಂಥ ಮೌಲ್ಯಗಳನ್ನು ಗುರುತಿಸುವ ಜನ ಇನ್ನೂ ಇರುವರೆಂದು ನನಗೆ ಸಂತಸವಾಗಿದೆ. ಅತ್ಯುಚ್ಚ ಜೀವನಮೌಲ್ಯಗಳು ಈ ಜಗತ್ತಿನಲ್ಲಿ ಶಾಶ್ವತವಾಗಿ ಉಳಿಯಬೇಕೆಂದು ಹೃತ್ಪೂರ್ವಕವಾಗಿ ಬಯಸಿ, ಇವನ್ನು ತಮ್ಮ ಬದುಕಿನ ಆದರ್ಶ ವೆಂದು ಸ್ವೀಕರಿಸಿದ ಕಾರಣಕ್ಕಾಗಿ ಮಾತ್ರ ಇಂತಹ ಮಹನೀಯರನ್ನು ಗೌರವಿಸುವ ಜನ ಇನ್ನೂ ಉಳಿದಿದ್ದಾರೆ. ಡಾ। ಕಾರಂತರು ಇಲ್ಲಿ ನೆರೆದಿರುವ ಈ ಅಸಂಖ್ಯಾತ ಜನಸಮುದಾಯದ ಮೇಲೆ ಹೇರಬಹುದಾದ ಯಾವ ಅಧಿಕಾರವನ್ನೂ ಪಡೆದಿಲ್ಲವಾ ದರೂ ನಮ್ಮೆಲ್ಲರ ಬದುಕಿನ ಮೇಲೆ ಪ್ರಭಾವ ಬೀರಬಲ್ಲ ಪ್ರತಿಭಾವಂತ ಮಹಾ-ಶಕ್ತಿ ಎಂಬುದನ್ನು ನಾವೆಲ್ಲ ಚೆನ್ನಾಗಿ ಅರಿತಿದ್ದೇವೆ.

ನಾನು ಕಾಲೇಜು ವ್ಯಾಸಂಗ ಮುಗಿಸುತ್ತಿದ್ದಂತೆಯೇ ಡಾ। ಕಾರಂತರ ಪರಿಚಯ ನನಗುಂಟಾಯಿತು. ಅವರೊಡನೆ ಕೂಡಿ ಮಾಡುವ ಪ್ರತಿಕಾರ್ಯವೂ ನನಗೆ ಅವರ್ಣ ನೀಯವಾದ ಆನಂದವನ್ನೀಯುತ್ತಿತ್ತು. ನಾವು ಜತೆಯಾಗಿ ಹಲವಾರು ಬಾರಿ ಬೆಂಗ ಳೂರಿಗೆ ಹೋಗುವ ಮತ್ತು ಅಲ್ಲಿ ಡಾ। ಕಾರಂತರು ಹಲವಾರು ಪ್ರತಿಷ್ಠಿತ ಸಮಾರಂಭ ಗಳಲ್ಲಿ ಮಾತನಾಡುವ ಅವಕಾಶಗಳು ಒದಗಿಬರುತ್ತಿದ್ದುವು. ಇಂತಹ ಸಮಾರಂಭಗಳಲ್ಲಿ ಪಾಲ್ಗೊಳ್ಳುತ್ತಿದ್ದ ಸನ್ಮಾನ್ಯ 'ಡಿ ವಿ ಜಿ'ಯಂತಹ ಪ್ರತಿಭಾವಂತ ಮೇಧಾವಿಗಳೂ ಕಾರಂತರ ಪಕ್ಷದಲ್ಲಿರುವ ನಮ್ಮನ್ನು ಆ ಕಾರಣಕ್ಕೆಂದೇ ಬೆಂಬಲಿಸುವಂತಾಗುತ್ತಿತ್ತು. ಅವರು ಒಂದು 'ನಡೆದಾಡುವ ವಿಶ್ವಕೋಶ'ವೆಂದರೂ ಸಲ್ಲುವುದು. ಇಂದಿಗೂ ಸಹ ಅವರ ಜತೆಗೂಡಿ ದ. ಕನ್ನಡ ಜಿಲ್ಲೆಯಿಂದ ಮೈಸೂರಿಗೋ ಬೆಂಗಳೂರಿಗೋ ಪಯಣ ಹೊರಟಾಗ ದಾರಿಯಲ್ಲಿನ ಪ್ರತಿಯೊಂದು ಮರ, ಮೈಲಿಗಲ್ಲುಗಳ ಕುರಿತೂ ಸಹ ಅವನು ಏನೇನು ಹೇಳುತ್ತಿದ್ದರೆಂಬುದನ್ನು ನಾನು ನೆನಪಿಸಿಕೊಳ್ಳಬಲ್ಲೆ. ಅವರ ಕುತೂ ಹಲವನ್ನು ಕೆರಳಿಸದ, ಆಸಕ್ತಿಯನ್ನು ಸೆರೆಹಿಡಿಯದ ವಿಷಯವೇ ಇಲ್ಲವೆಂದರೂ ಸಲ್ಲು ವುದು. ನಾವು ಕಂಡುದು ಅವರ ಬದುಕಿನ ಒಂದು ಮುಖವನ್ನು ಮಾತ್ರ. ಅವರು ಬಹುವಾಗಿ ಮೆಚ್ಚಿ ತೋರಿದ ಅವರ ಜೀವನದ ಸಾಮಾಜಿಕ ಮುಖವೊಂದು ಬೇರೆಯೇ ಇದೆ. ಹೊಸ ಕಾಲೇಜನ್ನು ಸ್ಥಾಪಿಸಬೇಕೆಂದಾಗ ಅವರು ನಮ್ಮ ನೆರವಿಗೆ ಬಂದರು. ಈ ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜಿನ ಸ್ಥಾಪನೆಗೆ ಅವರು ನೀಡಿದ ನೆರವನ್ನು ನಾವು ಮರೆಯುವಂತಿಲ್ಲ. ಡಾ। ಮಾಧವ ಪೈಗಳು ಮೆಡಿಕಲ್ ಕಾಲೇಜು ಒಂದನ್ನು ಸ್ಥಾಪಿಸಬಯಸಿದ ಸಂದರ್ಭದಲ್ಲಿ ಆ ಕಾಲೇಜು ಕರ್ಣಾಟಕ ವಿಶ್ವವಿದ್ಯಾ

ಲಯದ ಆಶ್ರಯದಲ್ಲಿರಬೇಕೆಂದು ನಾವು ಬಯಸಿದೆವು. ಅಂದು ಡಾ। ಕಾರಂತರ ಸಮಯೋಚಿತವಾದ ನೆರವು ದೊರೆಯದಿರುತ್ತಿದ್ದರೆ ಮೆಡಿಕಲ್ ಕಾಲೇಜು ಸ್ಥಾಪಿಸಬೇಕೆಂಬ ಆ ಕನಸು ನೆನಸಾಗುತ್ತಿರಲಿಲ್ಲವೇನೊ! ಈ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಡಾ। ಕಾರಂತರ ಕೊಡುಗೆ ಕಡಿಮೆಯೇನಲ್ಲ. ಡಾ। ಕಾರಂತರ ಬದುಕು, ವಿಚಾರ ಹಾಗೂ ಕೃತಿಗಳಿಂದ ಪ್ರಭಾವಿತರಾಗದ ವ್ಯಕ್ತಿ ಈ ತಲೆಮಾರಿನಲ್ಲಂತೂ ಇಲ್ಲವೇ ಇಲ್ಲವೆಂದರೂ ಅತಿಶಯೋಕ್ತಿಯಲ್ಲ. ಅವರ ತಾರುಣ್ಯದಲ್ಲಿಯೇ 'ಬಾಲ ಪ್ರಪಂಚ' ಜನ್ಮ ತಾಳಿತು. ಅವರು ಅಷ್ಟಕ್ಕೇ ತೃಪ್ತರಾಗಲಿಲ್ಲ. ಮುಂದೆ ಈ ಜಿಲ್ಲೆಯ ಜನಮನದ ಮೇಲೆ ಅಚ್ಚಳಿಯದ ಪ್ರಭಾವ ಬೀರುವಂತಹ ಹಲವಾರು ಯೋಜನೆಗಳನ್ನು ಕೈಗೊಂಡು, ಅದನ್ನು ಸಾಧಿಸಿ ತೋರಿದಾಗ, ನಾವೆಲ್ಲ ಅವರಿಗಾಗಿ ಹೆಮ್ಮೆ ಪಡುವಂತಾಯಿತು. ಅವರು ನಾಡಿನ ಜನತೆಗಾಗಿ ನೀಡಿದ ಸಂದೇಶವೇನು ಎಂಬುದನ್ನು ತಿಳಿಯುವುದಕ್ಕೂ ಮಿಗಿಲಾಗಿ ನಮ್ಮ ಜೀವಿತದ ಧ್ಯೇಯ ಧೋರಣೆಗಳೇನು? ಅಂತಹ ಧ್ಯೇಯ ಸಾಧನೆಗಾಗಿ ದುಡಿದ ನಮ್ಮವರನ್ನು ನಾವು ಗೌರವಿಸುವ ಬಗೆ ಹೇಗೆ ಎಂಬುದನ್ನು ನಾವು ಇಂದು ಮನಗಾಣಬೇಕಾಗಿದೆ. ಅಂತಹ ಮಹಾ ಸತ್ವಶಾಲಿಗಳಲ್ಲಿ ಇವರೊಬ್ಬರೆಂದು ತಿಳಿದು, ಇವರು ನಮ್ಮವರಲ್ಲೊಬ್ಬರು ಎಂಬುದನ್ನರಿತು ಅಭಿಮಾನದಿಂದ ಬಾಗುವಂತಾಗಿದೆ. ಡಾ। ಕಾರಂತರು ಸಾಧಿಸಿದ್ದನ್ನು ಆಗೊಮ್ಮೆ ಈಗೊಮ್ಮೆ ಕಣ್ತೆರೆದು ನೋಡಿ, ಅವರ ಸಾಧನೆಗಳ ಕುರಿತು ಆಗೊಮ್ಮೆ ಈಗೊಮ್ಮೆ ಮೆಚ್ಚಿಕೆಯ ನುಡಿ ನುಡಿದು, ಉಳಿದೆಲ್ಲ ಕಾಲದಲ್ಲಿ ಅವರ ಮಹಾಸಾಧನೆಯನ್ನು ಮೂಕವಿಸ್ಮಯದಿಂದ ಗಮನಿಸುತ್ತಿರುವುದರಲ್ಲೇ ನನಗೆ ಆನಂದ.

ಒಮ್ಮೆ ನಾನು, ಶ್ರೀ ಕೆ. ಕೆ. ಹೆಬ್ಬಾರರು ಹಾಗೂ ಇತರ ಹಲವು ಮಿತ್ರರು ಕೂಡಿ ಡಾ। ಕಾರಂತರ ಬಳಿ ಹೋದ ನೆನಪು ಈಗಲೂ ಅಚ್ಚಳಿಯದೆ ಉಳಿದಿದೆ. ಶ್ರೀ ಹೆಬ್ಬಾರರಂತೂ ಅತಿಸಾಮಾನ್ಯ ವಿಚಾರಗಳನ್ನೂ ಹೊಸನೋಟದಿಂದ ಪರಿಕಿಸುವ ಪರಿಯಿಂದ ನಮ್ಮನ್ನು ಚಕಿತಗೊಳಿಸಿದರು. ಒಂದು ಕಡೆ ಶ್ರೀ ಹೆಬ್ಬಾರರು ಕಾರನ್ನು ನಿಲ್ಲಿಸಿ ಬತ್ತದ ಸಸಿಗಳ ನಾಟಿಯ ಕೆಲಸದಲ್ಲಿ ಮಗ್ನರಾದ ಹೆಣ್ಮಕ್ಕಳನ್ನು ನಮಗೆ ತೋರಿಸುತ್ತಿದ್ದರು. ನಮ್ಮ ಹುಲುನೋಟಕ್ಕಂತೂ ಅಲ್ಲಿ ಯಾವ ಹೊಸತನವೂ ಇರಲಿಲ್ಲ. ಆದರೆ ಶ್ರೀ ಹೆಬ್ಬಾರರ ದೃಷ್ಟಿಯಲ್ಲಿ ಅಲ್ಲಿ ಅರ್ಥವಿತ್ತು; ಬದುಕಿನ ವಿಶ್ವರೂಪ ದರ್ಶನವಿತ್ತು. ದೈನಂದಿನ ರೀತಿ-ನೀತಿಗಳಲ್ಲಿ ಯಾವ ಹುರುಳನ್ನೂ ಕಾಣದ, ಕಣ್ಣಿದ್ದೂ ಕುರುಡಾಗಿದ್ದ ನಮಗೆ ತೋರಿದ ಪ್ರಕೃತಿಯ ಒನಪು-ವೈಯ್ಯಾರ, ಗಾಡಿ-ಮೋಡಿಗಳು ಅವರಿಗೆ ಅವರ್ಣನೀಯವಾದ ಸಂತಸವನ್ನು ನೀಡುತ್ತಿದ್ದುವು. ಅದು ಡಾ। ಕಾರಂತರಂತಹ, ಶ್ರೀ ಹೆಬ್ಬಾರರಂತಹ ಪ್ರತಿಭಾವಂತನಿಗೆ ಮಾತ್ರ ದೊರಕಿದ ವರಪ್ರಸಾದ. ನಾವು ಕಾಣಲಾಗದುದನ್ನು ಕಂಡು, ಆ ದರ್ಶನ ಫಲವನ್ನು ನಮಗೆಲ್ಲ ಉಣಿಸಿದ ಇಂಥ ಮಹಾತ್ಮರಿಗೆ ನಾವು ಚಿರಋಣಿಗಳು. ಅವರ ಸ್ನೇಹಸಂಬಂಧವನ್ನು ಪಡೆದದ್ದೇ ನಮ್ಮ ಪುಣ್ಯ. ರಾಷ್ಟ್ರದ ಭಾಗ್ಯನಿಧಿಯಂತಿರುವ ಈ ಪುಣ್ಯಜೀವಿಗಳು ಬಹುಕಾಲ ಬಾಳಲಿ, ಬಾಳಿ ಈ ನಾಡಿನ ಬದುಕನ್ನು ಹಸನುಗೊಳಿಸುವಂತಾಗಲಿ ಎಂದು ನಿಮ್ಮೆಲ್ಲರೊಡನೆ ಒಂದಾಗಿ ನಾನೂ ಪ್ರಾರ್ಥಿಸುತ್ತೇನೆ.

ಸ್ನೇಹಿತರೇ,

ಕಾರಂತರನ್ನು ಕುರಿತು ನಾನು ಮಾತನಾಡತಕ್ಕದ್ದು ಇದೇ ಮೊದಲನೆಯ ಸಲ ಅಲ್ಲ. ಮಾತನಾಡಬೇಕಾಗಿ ಬಂತು, ಮಾತನಾಡಬೇಕು ಎಂದು ಅನಿಸಿತು – ಮಾತನಾಡಿದ್ದೇನೆ. ನಾನು ಈಗ ಹೇಳಬೇಕೆಂದರೆ ನನಗೆ ಅನಿಸುತ್ತದೆ: ಹೆಚ್ಚು ಕಮ್ಮಿ ೪೦ ವರ್ಷಗಳಿಂದಲೂ ನಾವು ಜಗಳ ಮಾಡುತ್ತಲೇ ಬಂದಿದ್ದೇವೆ. ಈ ಸ್ನೇಹ ೧೯೨೮–೨೯ನೇ ಇಸವಿಯಿಂದ ಇವತ್ತಿನವರೆಗೂ ಎಂದರೆ ಸುಮಾರು ೪೦–೪೨ ವರ್ಷಗಳವರೆಗೂ ನಡೆದುಕೊಂಡು ಬಂದಿದೆ. ಈ ಒಂದು ಸಂದರ್ಭದಲ್ಲಿ ಅವರ ವಿಷಯವಾಗಿ ಮಾತನಾಡಲು ಉತ್ಸಾಹಿಗಳು, ಸಾಹಿತಿಗಳು ನನಗೆ ಒಂದು ಅವಕಾಶ ಕೊಟ್ಟಿರುವುದಕ್ಕಾಗಿ ನಾನು ಎಷ್ಟು ಅವರಿಗೆ ಕೃತಜ್ಞನಾಗಿದ್ದೇನೆ ಎಂಬುದನ್ನು ಮಾತಿನಲ್ಲಿ ಹೇಳಲಾರೆ. ಕಾರಂತರ ಉತ್ಸಾಹ ಬಹಳ ದೊಡ್ಡದು, ಯಾವ ವಿಧವಾದ ಜನಕ್ಕೆ ಯಾವ ವಿಧವಾದ ತಿಳಿವಳಿಕೆ ಕೊಡಬೇಕು, ಯಾವ ವಿಧವಾದ ಚರ್ಚೆ ನಡೆದರೆ ಬುದ್ಧಿ-ಭಾವ ಬೆಳೆಯುತ್ತದೆ. ಉದಾರವಾದ ಮನೋಧರ್ಮ-ಸ್ನೇಹಿತರು ಮತ್ತು ಇತರರ ಪರವಾಗಿ ಉಂಟಾಗುತ್ತದೆ, – ಅವರು ಯಾವ ರೀತಿ ನಡೆದುಕೊಂಡಾರು ಎಂಬುದು ಅವರಿಗೆ ಗೊತ್ತು. ಕಾರಂತರ ಮಾತು ಬಂದಾಗ ಒಂದು ವಿಷಯ ಜ್ಞಾಪಕಕ್ಕೆ ಬರುತ್ತದೆ, ಅವರು ಅಪರಾಜಿತ – ಫ್ರೀ, ಫ್ರಾಂಕ್ ಅಂಡ್ ಫಿಯರ್‌ಲೆಸ್ (Free, frank, and fearless) ಅಂತ ಅನ್ನುವ ಹಾಗೆ. ಮನಸ್ಸಿನಲ್ಲಿ ಬಂಥ ಭಾವನೆಯನ್ನು ಹೇಳಿಬಿಡುವ ಸ್ವಭಾವ ಅವರದು. ಇದೇನೂ ಅಣಕ ಮಾತಲ್ಲ. ಇವರಂತೆಯೇ ಬರೆದವರು ಎಷ್ಟೋ ಜನ ಇದ್ದಾರು, ಆದರೆ ತಿಳಿವಳಿಕೆ ಮೂಡಿಸಿದವರಿಲ್ಲ. ನಮ್ಮ ಜನಗಳು ವಿದ್ಯೆ ಎಂದು ಯಾವುದನ್ನು ಕರೆಯುತ್ತಾರೋ ಆ ವಿದ್ಯೆಗಿಂತಲೂ ಹೆಚ್ಚಿನ ಪರಿಣಾಮವನ್ನು ಮನಸ್ಸಿನ ಮೇಲೆ ಉಂಟುಮಾಡಿ ವ್ಯಕ್ತಿತ್ವವನ್ನು ಬಿಡುಗಡೆ ಮಾಡಿ ಮನುಷ್ಯರನ್ನು ಸ್ವತಂತ್ರರಾಗಿ ಮಾಡತಕ್ಕವರು ಸಾಹಿತಿಗಳು. 'ಸ್ವಾತಂತ್ರ್ಯ' ಎಂದರೆ 'ನೈದರ್ ಫಿಯರ್ ನಾರ್ ಫೇವರ್', ಬೇಕು, ಬೇಡ ಎಂಬ ಮಾತು ಇಲ್ಲ. ಸಾಮಾನ್ಯವಾಗಿ ಈ ಮೂರನ್ನು ನಾವು ಒಂದು ಕಡೆ ಕಾಣುವುದಿಲ್ಲ: ನಿರ್ಭೀತ ಮನಸ್ಸುಳ್ಳವರು, ಸ್ವತಂತ್ರ ಮನಸ್ಸುಳ್ಳವರು, ಉದಾರವಾದ ತೇಜಸ್ಸುಳ್ಳವರು. ಈ ಮುಪ್ಪುರಿಯನ್ನು ನಾವು ಕಾರಂತರಲ್ಲಿ ಕಾಣುತ್ತೇವೆ. ಇವರು ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದವರು ಆದರೂ ಕರ್ನಾಟಕದ, ಕನ್ನಡ ದೇಶದ ಕೀರ್ತಿಯನ್ನು ಪ್ರಪಂಚದಲ್ಲಿ ಎಲ್ಲೆಲ್ಲೂ ಬೆಳಗುವಂತೆ ಮಾಡಿದ್ದಾರೆ. ಕಲೆಗೆ, ಶಿಲ್ಪಕ್ಕೆ, ಸಾಹಿತ್ಯಕ್ಕೆ ಯಾರ್ಯಾರ ಹೃದಯ ಮಿಡಿಯುತ್ತದೆಯೋ ಅವರೆಲ್ಲರೂ ಕಾರಂತರನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಲ್ಲರು. ಟವಲ್ ಹಾಕಿಕೊಂಡು ದೇಶ ಸಂಚಾರ ಮಾಡುವಾಗ ಅವರನ್ನು ನಾನು ನೋಡಿದ್ದೇನೆ. ಅವರು ಬರೆದ ಚಿತ್ರ ನೋಡಿದ್ದೇನೆ: ಒಂದು ಬಣ್ಣ ಒಂದು ಕಡೆ ಇನ್ನೊಂದು ಬಣ್ಣ ಇನ್ನೊಂದು ಕಡೆ.

ಯಾವುದು ಹೇಗೆ ಆಗುತ್ತದೆ ಅಂತ ಅನ್ನುವುದು ಏನೇನೂ ಗೊತ್ತಾಗುವುದಿಲ್ಲ. ಸಾಹಿತ್ಯ ರಚನೆಯಲ್ಲೂ ಸಹ ಅಷ್ಟೆ. ಯಾವುದು ತೆಗೆದುಕೊಂಡರೂ – ಮತವಾದರೆ ಮತ, ರಾಜಕೀಯವಾದರೆ ಅದು, – ಯಾವುದೇ ಆಗಲಿ, ಮುಚ್ಚುಮರೆ ಇಲ್ಲದೆ ಹೇಳಿದ್ದಾರೆ, ಕೇಳಿದ್ದಾರೆ, ವಂಚನೆ ಇಲ್ಲ. ಯೋಚನೆಯ ವಿಚಾರದಲ್ಲಿ ಏನು ಬೇಕಾದರೂ ಯೋಚನೆ ಮಾಡುತ್ತಾ ಹೋಗಬಹುದು, ಎಷ್ಟು ಮೇಲಕ್ಕೂ ಹೋಗಬಹುದು. ಆದರೆ ಅದನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗುತ್ತದೆಯೋ ಇಲ್ಲವೊ ಗೊತ್ತಿಲ್ಲ ಎಂಬ ಮಾತು ಸತ್ಯ. ರಾಗದ್ವೇಷಗಳು ಇದಕ್ಕೆ ನಿದರ್ಶನ. ಕಾರಂತರ ಈಚೆಗಿನ ರೇಗಾಟ ಕಂಡು ಸ್ವಲ್ಪ ನಿರ್ಬಂಧ ಇಟ್ಟುಕೊಂಡು ಮಾತನಾಡುವುದು ಒಳ್ಳೆಯದಲ್ಲವೆ ಎಂದು ನನಗೆ ಕಂಡಿದೆ. ಆದರೆ ರೇಗು ಇವರ ಹುಟ್ಟುಗುಣವೇನೋ. ಒಂದು ಒಳ್ಳೆಯ ಮಾರ್ಗದಲ್ಲಿ, ಒಂದು ನಿಚ್ಚಳವಾದ ಹಾದಿಯಲ್ಲಿ ತಮ್ಮ ಜೀವನವನ್ನು ಪ್ರಾಮಾಣಿಕವಾಗಿ, ಧೈರ್ಯವಾಗಿ ಸ್ವತಂತ್ರ ಬುದ್ಧಿಯಿಂದ ನಡೆಸಿಕೊಂಡು ಹೋಗಿರುವ ಈ ಮುಕ್ತ ಜೀವಕ್ಕೆ ಈ ದಿವಸ ಸ್ನೇಹಿತರು ತಮ್ಮ ವಿಶ್ವಾಸ, ಗೌರವವನ್ನು ಸೂಚಿಸುವುದಕ್ಕಾಗಿ ಈ ಗ್ರಂಥ "ಕಾರಂತ ಪ್ರಪಂಚ"ವನ್ನು ಬಿಡುಗಡೆ ಮಾಡಿದ್ದಾರೆ. ಈ ಕೆಲಸ ಸುಲಭವಾದ ಕೆಲಸವಲ್ಲ. ಇದು ೬೦೦ ಪುಟ, ಸಾವಿರಾರು ರೂಪಾಯಿ ಖರ್ಚಾಗಿರಬಹುದು. ಈ ಹೊದಿಕೆಯೊಳಗೆ ಅಡಕವಾದ ಜೀವನ ಪ್ರತಿ ನಿಮಿಷದಲ್ಲೂ ಜ್ವಾಲೆ ಇದ್ದ ಹಾಗೆ. ಸರ್ವತಂತ್ರ ಸ್ವತಂತ್ರರು ಎಂದರೆ ಇಂಥವರನ್ನು ಹೇಳುತ್ತೇವೆ. ಆಚಾರ್ಯಪುರುಷರು ಎಂದರೂ ಇವರೆ. ಕಾರಂತರು, ಪತಿತರಾಗಿರತಕ್ಕವರು ಯಾರಿದ್ದಾರೆ - ಅಂಥವರ ಜೊತೆಯಲ್ಲಿ ಹೋಗಿ ಅವರನ್ನು ಒಂದು ನೆಲೆಗೆ ನಿಲ್ಲಿಸಿದ್ದಾರೆ. ಇದು ಒಂದು ಸಾಮಾನ್ಯವಾದ ಕೆಲಸವಲ್ಲ. ಇಂಥ ಹತ್ತಾರು ಆದರ್ಶಗಳಿಗೆ ಹೋರಾಡಿದ ಕಾರಂತರಿಗೆ ಹೀಗೆ ಸಾರ್ವತ್ರಿಕವಾಗಿ ಮರ್ಯಾದೆ ಮಾಡತಕ್ಕಂಥ ಒಂದು ಕಾರ್ಯ ಉಡುಪಿಯಲ್ಲಿ ನಡೆಯುತ್ತಿರುವುದನ್ನು ನೋಡಿ ಮನಸ್ಸಿಗೆ ತುಂಬಾ ಸಂತೋಷವಾಗುತ್ತಿದೆ.

# ಶಿವನಂತೆ ನಂಜುಂಡ; ರಾಮನಂತೆ ಸತ್ಯವಾದಿ

**ಸಿಂಪಿ ಲಿಂಗಣ್ಣ**

ಅಭಿನಂದನಪರ ಭಾಷಣ – ೪

ಮಹನೀಯರೇ ಮತ್ತು ನನ್ನ ಹಳೆಯ ಮಿತ್ರರಾದಂತಹ ಕಾರಂತರೇ, ಇಲ್ಲಿ ನೆರೆದಿರತಕ್ಕ ವಿದ್ವನ್ಮಣಿಗಳೇ,

ನಾನು ಬಹಳ ದೂರದ ಭೀಮಾತೀರದಿಂದ ಬಂದವನು. ಕಾರಂತರ ಸಮಾರಂಭದಲ್ಲಿ ಅಭಿನಂದನಪರವಾದಂತಹ ಮಾತುಗಳನ್ನಾಡುವ ಸಲುವಾಗಿ ಇಲ್ಲಿ ನಿಂತಿದ್ದೇನೆ. ಅಭಿನಂದನೆ ಮಾಡುವುದು ಯಾರಿಗೆ ಅಂತ ಕೇಳಿದಾಗ ನಾನು ಸ್ವಲ್ಪ ದಿಗಲುಬಿದ್ದೆ ಎಂದು ಅನಿಸುತ್ತದೆ — ಕಾರಂತರನ್ನು ಅಭಿನಂದಿಸಬೇಕೇ ಅಥವಾ ಕಾರಂತರನ್ನು ಅಭಿನಂದಿಸುವವರನ್ನು ಅಭಿನಂದಿಸಬೇಕೇ? ಅಭಿನಂದಿಸುವವರನ್ನು ಅಭಿನಂದಿಸಬೇಕು ಎಂದರೆ ಅವರಲ್ಲಿ ನಾನೂ ಒಬ್ಬ. ಆದ್ದರಿಂದ ನನ್ನನ್ನು ನಾನೇ ಅಭಿನಂದಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದ ಆ ಕಾರ್ಯ ಮಾಡುವುದನ್ನ ಬಿಟ್ಟು ಕಾರಂತರನ್ನು ಅಭಿನಂದಿಸುತ್ತೇನೆ. ಏಕೆಂದರೆ ನಮ್ಮೆಲ್ಲರ ಯೋಗ್ಯ ಮನ್ನಣೆಯನ್ನು ಪಡೆಯಬೇಕಾದ್ದು ಯಾವುದೆಂದರೆ ಕಾರಂತರ ಕಾರ್ಯನಿರ್ವಹಣೆ. ೪೦ ವರ್ಷಗಳಿಂದ ಸುತ್ತೀ, ದುಡಿದೂ ದಣಿಯದ ಕಾರಂತರು ತಮ್ಮ ಕಾರ್ಯದಲ್ಲಿ ವಿಜಯಶಾಲಿಗಳಾಗಿರುವುದನ್ನು ಇಂದು ನಾವು ನೋಡುತ್ತಾ ಇದ್ದೇವೆ. ಕಾರಂತರು ೪೨ ವರ್ಷಗಳ ಹಿಂದೆ ನಮ್ಮ ಹಳ್ಳಿಗೆ ಬಂದರು. ನಮ್ಮ ಗೆಳೆಯರ ಗುಂಪಿನಲ್ಲಿ ಕೆಲವರು ಹಲಸಂಗಿ ಕಡೆಯವರು ಇದ್ದರು, ಅವರನ್ನು ಕಂಡು 'ಹೊಲಸಂಗಿ ಗೆಳೆಯರೆ' ಎಂದು ಹೆಸರಿಸಿ ಕೂಗಿದರು. ವ್ಯವಹಾರ ಜ್ಞಾನ ಇರುವಂತಹ ಸಜ್ಜನರು. ಅವರು ಏನು ಹೇಳಿದರೋ ಅದನ್ನು ಕಾಪಾಡಿಕೊಂಡು ಬಂದಿದ್ದೇವೆಯೋ ಇಲ್ಲವೇ ಎಂಬುದೂ ಸಹ ಈ ನನ್ನ ಅಭಿನಂದನೆಯ ಭಾಷಣದಲ್ಲಿ ಸ್ಪಷ್ಟವಾಗುತ್ತದೆ. ಅವರ ಚಲನವಲನಗಳನ್ನು ನಾನು ಕುಳಿತಲ್ಲೇ ನೋಡುತ್ತಾ ಇದ್ದೇನೆ. ಒಂದು ಮನೆ, ಒಂದು ಜಿಲ್ಲೆ, ಒಂದು ರಾಜ್ಯ ಯಾತಕ್ಕೆ ಇಡಿ ಭಾರತ ದೇಶದಾದ್ಯಂತ ಅಲ್ಲ ಹೊರದೇಶಗಳ ವರೆಗೂ ಅವರು ಕಾಣದೇ ಹೋದುದು ಯಾವುದೂ ಇಲ್ಲ. ಕಾರಂತರನ್ನು ಕುಳಿತಲ್ಲೆ ನೋಡುವಂತಹದು, ಅವರ ವಿಚಾರಗಳನ್ನು ತಿಳಿದುಕೊಳ್ಳುವಂತಹದು ಸಣ್ಣ ಮಾತಲ್ಲ. ಕಾರಂತರ ನುಡಿ ಸಿಡಿಲಿನಂತೆ. ಬೇಂದ್ರೆಯವರು ನುಡಿದಂತೆ 'ಒಳ್ಳೆಯವರು ಸತ್ತರು, ಉಳಿದವರು ಅತ್ತರು ಕುಣಿಯೋಣು ಬಾ' ಅಂತ ಅಂದ ಹಾಗೆ ಯಾವುದನ್ನೇ ಆಗಲಿ ಕಠಿಣವಾಗಿ ಹೇಳತಕ್ಕವರು. ದೃಢವಾದ ಶರೀರ, ಗಟ್ಟಿಯಾದ ಮನಸ್ಸು ಉಳ್ಳವರು. ಜ್ಞಾನಿಗಳಿಗೆ ಜಗತ್ತೆ ಒಂದು ಕಾರ್ಯರಂಗ, ಅದೇ ಬಂದು ಕಾಲಿಗೆ ಎರಗುವುದು ಅಂತ ವಿವೇಕಾನಂದರ ವಾಣಿ ಇದೆ. ಇದರ ಸಾರ್ಥಕತೆಯನ್ನು ಇವತ್ತು ಕಾರಂತರ ಜೀವನದಲ್ಲಿ ನಾವು ಕಾಣುತ್ತಾ ಇದ್ದೇವೆ. ಅವರ ಒಂದೊಂದು ಚಳುವಳಿ ಅಥವಾ ಒಂದೊಂದು ಚಲನವಲನ, ಅವರ ಬರವಣಿಗೆ, ಅವರ ಘನತೆ, ಅವರ ಜ್ಞಾನ ಇದನ್ನೆಲ್ಲಾ ನೋಡಿದರೆ ಯಾರೂ ಅವರ ಸ್ನೇಹಿತರಾಗಿ ಉಳಿಯಬಾರದು ಎನ್ನುವಂತಹ ಪರಿಸ್ಥಿತಿ. ಹಾಗಿದ್ದೂ ಇವತ್ತು ಎಲ್ಲರಿಂದಲೂ ಮನ್ನಣೆ ಪಡೆಯುವಂತಹ ಸ್ಥಿತಿಗೆ ಬಂದದ್ದು ಸಣ್ಣ ಮಾತಲ್ಲ.

ಇವತ್ತು ಜಗತ್ತೆ ಬಂದು ಅವರ ಕಾಲಿಗೆ ಎರಗಿದೆ. 'ಸುತ್ತಲೂ ಲತ್ತೆ ಕೊಡುವ ಕತ್ತೆ'ಯಂತೆ, ಇರುವ ಸಮಾಜದ ಪರಿಸ್ಥಿತಿಯನ್ನು ಕಂಡು ಕಠಿಣವಾದ ರೀತಿಯಲ್ಲಿ ಟೀಕೆ ಮಾಡಿದ್ದಾರೆ. ಇದರಿಂದ ನೊಂದವರೂ, ನೋಯದವರೂ ಇಂದು ಪರೀಕ್ಷೆ ಮಾಡಿ ಅವರ ಯೋಗ್ಯತೆಯನ್ನು ಅರಿತುಕೊಂಡು, ಮನ್ನಣೆ ಮಾಡಲಿಕ್ಕೆ ಹತ್ತಿದ್ದಾರೆ. ಇದು ಒಂದು ದೊಡ್ಡ ವಿಜಯ ಎಂದು ಹೇಳಬಹುದು. ಕಾರಂತರು ಎಂದರೆ ಏನು? ಅವರು ನಾಟಕ ಕಾರರು ಇರಬಹುದು, ಕಾದಂಬರಿಕಾರರು ಇರಬಹುದು, ಯಕ್ಷಗಾನವನ್ನು ಪುನರುದ್ಧಾರ ಮಾಡಿದವರು ಇರಬಹುದು. ಎಲ್ಲಾ ಇರಬಹುದು. ಒಟ್ಟಿನ ಮೇಲೆ ಕಾರಂತರು ಒಬ್ಬ ಕವಿಯಾಗಿ, ಸಾಹಿತಿಯಾಗಿ, ಸಾಹಿತ್ಯರಂಗಕ್ಕೆಪ್ರವೇಶ ಮಾಡಿದ್ದಾರೆ. ಕರ್ನಾಟಕ ದಲ್ಲಿ ಸಾಹಿತಿಯ ಬಗ್ಗೆ ಏನು ಅನಿಸಿಕೆ ಇತ್ತು, ಒಂದು ಕಾಲಕ್ಕೆ ಎಂದರೆ: 'ಏಕೆ ಬರೆದೆ ಸಾಹಿತಿ; ಏಕೆ ಓದಿದೆ ಸಾಹಿತಿ, ಸಾಕು ಸಾಯಿ ಸಾಹಿತಿ' ಎನ್ನಬೇಕು. ಇದು ಕರ್ನಾಟಕದಲ್ಲಿ ಸಾಹಿತಿಗಳಿಗೆ ದೊರೆಯುವಂತಹ ಬಿರುದು. ಹಾಗಿದ್ದಾಗ್ಯೂ ಕಾರಂತರು ಹಲವು ತರಹದ ಸಾಹಿತ್ಯಗಳನ್ನು ರಚನೆ ಮಾಡಿ, ಹಲವು ತರಹದ ಕಾದಂಬರಿಗಳನ್ನು ನಿರ್ಮಿಸಿ, ಹಲವು ಮಕ್ಕಳ ಮನೋವೃತ್ತಿಯನ್ನು ಅಭ್ಯಸಿಸಿ, ಚರಿತಾರ್ಥರಾಗಿದ್ದಾರೆ. ಬಾಲಪ್ರಪಂಚ, ವಿಜ್ಞಾನಪ್ರಪಂಚ ಇವೇನು ಸಾಮಾನ್ಯ ಸಾಧನೆಗಳೆ? ಶಿವರಾಮ ಅಂತ ಇವರ ಹೆಸರು ಇದೆ. ಶಿವ ಮತ್ತು ರಾಮ – ಈ ಎರಡು ಮುಖಗಳೂ ಇವರ ಜೀವನದಲ್ಲಿ ಸಿಕ್ಕುತ್ತವೆ. ಇವರು ಶಿವನಂತೆ ನಂಜುಂಡವರೂ ಹೌದು, ರಾಮನಂತೆ ಸತ್ಯಕ್ಕಾಗಿ ವನವಾಸ ಮಾಡಿದವರೂ ಹೌದು. ಅವರೆಂದಿಗೂ ಸುಳ್ಳು ಹೇಳುವುದಿಲ್ಲ, ಎಂಬ ಭಾವನೆ ಜನರಲ್ಲಿ ಮೂಡಿಸಿ ಸತ್ಯವಂತರೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಅವರು ಶಿವ, ರಾಮ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮುಂತಾದವುಗಳಿಗೆ ಸಂಬಂಧಪಟ್ಟ ವಿಚಾರಗಳನ್ನೆಲ್ಲಾ ತಿಳಿದಿದ್ದಾರೆ. ಕೆಲವರು ಅಂಜುಬುರುಕ ಮಿತ್ರರು ಏನೇನೋ ಅಂದರೂ ಕೂಡ ಅದಕ್ಕೆ ಲಕ್ಷ್ಯಕೊಡದೆ ತಮ್ಮ ಪರಾಕ್ರಮದಿಂದಲೇ ಮುಂದುವರಿದು ಕೆಲಸವನ್ನು ಸಾಧಿಸಿದ್ದಾರೆ. ಕಾರಂತರ ಪರಿಚಯ ಅವರ ಜೀವನ ರಹಸ್ಯದ ಬಗ್ಗೆ ಒಂದು ಸಣ್ಣ ಪುಸ್ತಕವನ್ನು ರಚಿಸಿ ಎಲ್ಲರಿಗೂ ಕೊಡಬೇಕಾಗಿತ್ತು. ಅವರು ಬರೆದಿರುವ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಒಬ್ಬ ಸತ್ಯವಾದಿಯ ಆತ್ಮ ಚರಿತ್ರೆ. ವಿವೇಕಾನಂದ ನಾಟಕ ಸಂಸ್ಥೆಯವರು ಬಾಗಲುಕೋಟೆ ಯಲ್ಲಿ ನಾಟಕವಾಡಿರುವುದು ನನಗೆ ನೆನಪಿದೆ, ಅಲ್ಲಿ ಸಾಹಿತಿಗಳೆಲ್ಲರೂ ಸೇರಿದ್ದರು. ಅಲ್ಲೇ ನಾನು ಮೊದಲು ಕಾರಂತರನ್ನು ನೋಡಿದೆ. ಆಮೇಲೆ ಅವರ ಚಲನವಲನಗಳನ್ನು ನಾನು ಕುಳಿತಲ್ಲಿಂದಲೇ ನೋಡಿದ್ದೇನೆ. ಅವರ ಸಾಹಿತ್ಯವನ್ನು ಹೇಳಿಕೊಂಡು ಮನೆಯಲ್ಲಿ ಮಕ್ಕಳು ಇಂದಿಗೂ ಕುಣಿಯುವುದುಂಟು. ಬಡವರ ಗಂಗ ಎಂಬುವನ ಅಂಗಿ ಹರಿದು ಹೋದಾಗ ಹೊಸ ಅಂಗಿ ತಂದುಕೊಡುವುದಾಗಿ ಅವನ ತಂದೆ ಹೇಳಿದಾಗ ಆ ಹುಡುಗ 'ಹರಕು ಅಂಗಿ ಹೋಯ್ತು, ಹೊಸ ಅಂಗಿ ಬಂತು, ಕೆಂಪು ಕಪ್ಪು ಗೀಟಿನ ಅಂಗಿ' ಎಂದು ಕುಣಿದನೆಂದು ರಚಿಸಿರುವ ಪದ್ಯವನ್ನು ಮಕ್ಕಳು ಹಾಡಿಕೊಂಡು ಕುಣಿಯುವಾಗ, ಕಾರಂತರ ನೆನಪು ಬರುವುದು. ಕೆಲವು ಸಂದರ್ಭಗಳಲ್ಲಿ ಕಾರಂತರನ್ನು ಕೆಲವರು ಖಾರಂತರು ಅಂದಿರುವುದುಂಟು. ಅವರು ಸತ್ಯಪ್ರಿಯರು. ಇದ್ದದ್ದನ್ನು ಇದ್ದಂತೆ ಅಂದರೆ

ಕೆಲವರಿಗೆ ಖಾರವಾಗುತ್ತದೆ. ಒಬ್ಬ ಶ್ರೀಮಂತ ಹೆಣ್ಣುಮಗಳು ದಯಾಳುವಾಗಿದ್ದಳು, ಆಕೆ ರೊಟ್ಟಿ ಮಾಡಿದ್ದಳು, ಒಬ್ಬ ಬಡವ ಹಸಿದುಬಂದು ತಿನ್ನಲು ಕೊಡಿ ಎಂದು ಆಕೆಯನ್ನು ಕೇಳಿದಾಗ, ಎರಡು ರೊಟ್ಟಿ ಕೊಡುತ್ತೇನೆ, ಆದರೆ ಪುಕ್ಕಟೆ ಕೊಡಬಾರ ದೆಂಬ ನಿಯಮವಿದೆ, ಹಿಂದಿನ ಬಾಗಿಲಿನಿಂದ ಬಾ, ಕೆಲಸ ಕೊಡುತ್ತೇನೆ, ಎಂದಳು. ಈ ಕಟ್ಟಿಗೆ ಒಡೆದು ರೊಟ್ಟಿ ತೆಗೆದುಕೊಂಡುಹೋಗು ಎಂದು ಹೇಳಿ, ಒಂದು ಬಿರುಸಾದ ಕೊರಡನ್ನು ತೋರಿಸಿದಳು. ಸ್ವಲ್ಪ ಹೊತ್ತಿನಲ್ಲಿ ಆ ಬಡವ ಬಂದು ನೀವು ಕಟ್ಟಿಗೆ ಒಡಿ, ರೊಟ್ಟಿ ತಿನ್ನು ಎಂದು ಹೇಳಿದಿರಿ, ಆದರೆ ನಾನು ಕಟ್ಟಿಗೆ ತಿಂದು ರೊಟ್ಟಿ ಒಡೆಯು ತೇನೆ ಎಂದು ಹೇಳಿದನಂತೆ. ಇಂಥ 'ಶ್ರೀಮಂತ'ರೂ, 'ಉದಾರ ಹೃದಯವುಳ್ಳವರೂ' ಕಾರಂತರನ್ನು ಖಾರಂತರೆಂದು ಹೇಳುವುದು ಸಹಜ. ಅಂತು ಸತ್ಯಶೋಧಕ ಕಾರಂತರನ್ನು ಅಭಿನಂದಿಸಲು ನನಗೆ ವಹಿಸಿದ್ದರಿಂದ ನನಗೆ ಮನ್ನಣೆ ಬಂದಂತಾಯಿತು ಎಂದು ಭಾವಿಸುತ್ತೇನೆ. ಕಾರಂತರು ಸ್ವಯಂ ಶಕ್ತಿಯಿಂದ ನಮ್ಮ ಜೀವನದಲ್ಲಿ ಶಕ್ತಿಯನ್ನು ತುಂಬಿಸಿ ಸಮಾಜದ ಕಾರ್ಯವನ್ನು ನೆರವೇರಿಸುತ್ತ ಇನ್ನೂ ಹಲವು ವರ್ಷ ಮೆರೆಯಲಿ ಎಂದು ನಾನು ಹಾರೈಸುತ್ತೇನೆ.

ಮಾನ್ಯ ಚಟರ್ಜಿಯವರೇ, ನನ್ನ ಬಗ್ಗೆ ಅಭಿನಂದನೆಯ ಮಾತುಗಳನ್ನಾಡಿದ ನನ್ನ ಸಹೋದ್ಯೋಗಿಗಳು ಮತ್ತು ಕನ್ನಡ ಪ್ರದೇಶದ ಹಿರಿಯ ಮತ್ತು ಕಿರಿಯ ವರ್ಗದವರಿಗೆ ನಾನು ನನ್ನ ಕೃತಜ್ಞತೆಗಳನ್ನು ಸಲ್ಲಿಸಿ ಅವರು ಸಲ್ಲಿಸಿರುವ ಋಣಭಾರವನ್ನು ಕಡಿಮೆ ಮಾಡಿಕೊಳ್ಳಲು ನಾಲ್ಕು ಮಾತುಗಳನ್ನು ಹೇಳುವುದಕ್ಕೆ ಪ್ರಯತ್ನಿಸುತ್ತಿದ್ದೇನೆ. ಭಗವದ್ಗೀತೆಯ ಪ್ರಾರಂಭದ ಒಂದು ಚಿತ್ರ ನೆನಪಿಗೆ ಬರುತ್ತದೆ: ಬಂಧುಸೇನೆಯ ನಡುವೆ ನಿಂತ ಅರ್ಜುನನದು. ಆ ಚಿತ್ರದ ನೆನಪು ಇಲ್ಲಿ ನೆರೆದಿರುವ ಬಂಧುವರ್ಗ ನೋಡಿದಾಗ ನನಗೆ ಮರುಕಳಿಸುತ್ತದೆ. ನನ್ನ ಅಣ್ಣಂದಿರು, ತಮ್ಮಂದಿರು, ನಿಕಟ ಬಂಧುಗಳು ಇಲ್ಲಿದ್ದಾರೆ. ನನ್ನ ಮಿತ್ರಪರಂಪರೆಯ ಅನೇಕ ಜನರು ಕನ್ನಡ ನಾಡಿನ ಆ ತುದಿಯಿಂದ ಈ ತುದಿಯ ವರೆಗಿನವರು ಅಭಿಮಾನದಿಂದ ಇಲ್ಲಿಗೆ ಬಂದು ಸೇರಿದ್ದಾರೆ. ನಾನು ದುಡಿಯುವ ಕ್ಷೇತ್ರಕ್ಕೆ ಸಂಬಂಧಪಟ್ಟ ಸಾಹಿತಿಗಳು ಮತ್ತು ಕಲಾವಿದರು ಇಲ್ಲಿದ್ದಾರೆ. ನನ್ನ ಜೀವನಜಾತ್ರೆಯಲ್ಲಿ ಕೆಲವುಕಾಲ ಕಲೆಯ ಸೇವೆಯಲ್ಲಿ ಜೊತೆಗಾರರಾಗಿದ್ದ ಸ್ನೇಹಿತರೂ ಬಂದಿದ್ದಾರೆ.

ಬೇಕಷ್ಟು ಅಭಿಮಾನದಿಂದ ಇವರೆಲ್ಲರೂ ಕೂಡಿ ಈದಿನ ಕೊಟ್ಟಂಥ ಮಹಾಗ್ರಂಥದಲ್ಲಿ ಏನೆಲ್ಲಾ ತುಂಬಿದ್ದಾರೆಂಬುದು ನನಗೆ ತಿಳಿಯದು. ನಾನು ನನ್ನ ಬದುಕಿನ ಪಯಣದಲ್ಲಿ ಹೊರಟ ದಿನದಿಂದ ಅರುವತ್ತೆಂಟನೆಯ ವಯಸ್ಸಿಗೆ ಕಾಲಿಡುವ ವರೆಗೆ ಹಿಡಿದ ದಾರಿಯನ್ನು ತಿರುಗಿ ನೋಡಲೇ ಬೇಕೆಂಬ ಇಚ್ಛೆ ನನಗಾಗಿಲ್ಲ. ನಾನು ೨೦ ವರ್ಷದ ಪ್ರಾಯದ ತನಕ ಯಾವ ಒಂದು ಆಲೋಚನೆಯೂ ಇಲ್ಲದೆ ನನ್ನ ಬಂಧುಗಳು ಮತ್ತು ಸ್ನೇಹಿತರೊಡನೆ ಬೆರೆದು ನಿಸರ್ಗವನ್ನು ಕಂಡು ನಲಿದು ಕುಣಿದು ಉದ್ದೇಶರಹಿತವಾಗಿ ಜೀವನ ಸಾಗಿಸಿದ್ದೆ. ನಾನು ಕಲಿಯುವಾಗ ಏಕೆ ಕಲಿತೆ ಎಂಬುದು ಗೊತ್ತಿರಲಿಲ್ಲ. ನಮ್ಮ ತಂದೆ ಕಾಲೇಜಿಗೆ ಕಳಿಸಿದರು, ಕಲಿತೆ. ಗವರ್ಮೆಂಟ್ ಕಾಲೇಜಿನಲ್ಲಿ ಫಿಸಿಕ್ಸ್ ಮತ್ತು ಕೆಮಿಸ್ಟ್ರಿ ತೆಗೆದುಕೊಂಡೆ. ಆದರೆ ಅಲ್ಲಿ ಯಾವುದೇ ವಿಷಯ ನನ್ನನ್ನು ಆಕರ್ಷಿಸಲಿಲ್ಲ. ಆಗಿನ ಕಾಲದಲ್ಲಿ ಏನೋ ಒಂದು ಕಾಲ್ಪನಿಕ ಭಾವನೆ ನನ್ನಲ್ಲಿ ಮೂಡಿರಬೇಕು. ಅದೇಕೋ ಶಾಂತಿನಿಕೇತನವು ನನ್ನನ್ನು ಆಕರ್ಷಿಸಿತು, ಕಾರಣ ಹೇಳಲಾರೆ. ಅಲ್ಲಿನ ಚಿತ್ರಗಳು, ಕಲೆ ಮುಂತಾದ್ದು ಆಕರ್ಷಿಸಿರಬಹುದು. ನನಗೆ ಅಲ್ಲಿ ಕಲಿಯಬೇಕೆಂಬ ಆಸೆ ಇದೆಯೆಂದು ನಮ್ಮ ತಂದೆಗೆ ಬರೆದೆ. ಆದರೆ ಅವರಿಗೆ ನಮ್ಮ ಊರಿನ ಬಳಿಯೇ ಕಲಿತರೆ ಸಾಕು, ನಾನು ವಕೀಲನಾದರೆ ಸಾಕು ಎಂಬ ಆಸೆ ಇತ್ತು ಎಂದು ಕಾಣುತ್ತದೆ. ಅವರು, 'ಬಂಗಾಳದಲ್ಲಿರುವ ಬ್ರಾಹ್ಮಣರು ಮೀನು ಗೀನು ತಿನ್ನುತ್ತಾರೆ, ಅದುದರಿಂದ ಅಲ್ಲಿಗೆ ಹೋಗುವುದು ಅಷ್ಟು ಸರಿಯಲ್ಲ, ಬಂದುಬಿಡು' ಎಂದು ಬರೆದರು. ಆದುದರಿಂದ ಹೋಗಲಿಲ್ಲ. ಕಾಲೇಜಿಗೆ ಸೇರಿ ಎರಡು ತಿಂಗಳು ಕಳೆದ ಮೇಲೆ ಮಹಾತ್ಮ ಗಾಂಧಿಯವರು ದಯಮಾಡಿ ನನ್ನನ್ನು ಕಾಲೇಜು ಬಿಡಿಸಿದರು. ಅಸಹಕಾರ ಚಳವಳಿ ಪ್ರಾರಂಭವಾದಾಗ ಅದರಲ್ಲಿ ಭಾಗವಹಿಸಬೇಕಾದರೆ ಕಾಲೇಜನ್ನು ಬಿಡಬೇಕೆಂದು ಅವರು ತಿಳಿಸಿದರು. ದೇಶಸೇವೆ ಮಾಡಬೇಕೆಂಬ ಹಂಬಲ ನನ್ನಲ್ಲುಂಟಾಯಿತು. ಅದರಂತೆ ನಾನು ಕಾಲೇಜಿಂದ ಹೊರಟುಬಂದೆ.

ಇಪ್ಪತ್ತು ವರ್ಷಗಳ ವರೆಗೆ ಅಜ್ಞಾನದಲ್ಲಿ ಜಗತ್ತಿನ ಬಗ್ಗೆ ಉದಾಸೀನವಾಗಿ ಕಾಲ ಕಳೆದ ನನಗೆ ಗಾಂಧೀಜಿಯವರ ಬರವಣಿಗೆಯನ್ನು ಓದಿಯೆ ಈ ದೇಶಸೇವೆ ಮಾಡಬೇಕೆಂಬ ಅಪೇಕ್ಷೆಯುಂಟಾಯಿತು, ಉಂಟಾಗಿರಬೇಕು. ಸಾಮಾಜಿಕ ಕ್ಷೇತ್ರ ದಲ್ಲಿ ಮತ್ತು ಮತಧರ್ಮಗಳ ವಿಚಾರದಲ್ಲಿ ರಾಮಕೃಷ್ಣಪರಮಹಂಸರಂತೆ ಗಾಂಧೀಜಿ ಯವರು ಆದರ್ಶವಾದಿಗಳಾಗಿದ್ದರು. ಈ ಇಬ್ಬರು ಮಹನೀಯರ ಪ್ರಭಾವ ನನ್ನ ಮೇಲೆ ಪ್ರಬಲವಾಗಿತ್ತು. ನಾನು ಆ ಕಾಲದಲ್ಲಿ ಸಿಂಪಿ ಲಿಂಗಣ್ಣನವರ ಊರಿಗೆ ಹೋದಾಗ ಚನ್ನ ಮಲ್ಲಪ್ಪನವರ ಭೇಟಿಯಾಯಿತು, ಅವರು ಭಕ್ತಿಯ ಕ್ಷೇತ್ರದಲ್ಲಿ ದುಡಿಯುತ್ತಿದ್ದರು, ನಾನು ಅದಕ್ಕೆ ಹತ್ತಿರವಾದ ಸಾಹಿತ್ಯದ ಕ್ಷೇತ್ರದಲ್ಲಿ ದುಡಿಯುತ್ತಿದ್ದೆ. ಅವರ ದಾರಿಯೇ ಬೇರೆ, ನನ್ನ ದಾರಿಯೇ ಬೇರೆ. ಆದರೂ ಆ ಹತ್ತು ವರ್ಷಗಳಲ್ಲಿ ನನ್ನ ಮನಸ್ಸಿಗೆ ಹೊಸ ಭಾವನೆ ಯಾವುದೂ ಬರಲಿಲ್ಲ. ಅದಕ್ಕೆ ಅವಕಾಶವಿರಲಿಲ್ಲ. ನನ್ನ ತಂದೆತಾಯಿಗಳು, ಅಜ್ಜ, ಗಾಂಧೀಜಿ ಮುಂತಾದವರು ಸಮಾಜವನ್ನು ಕುರಿತು, ಕರ್ತವ್ಯವನ್ನು ಕುರಿತು, ವ್ಯಕ್ತಿಜೀವನವನ್ನು ಕುರಿತು ಏನೆಲ್ಲಾ ಹೇಳಿದ್ದಾರೋ ಅದನ್ನು ಕಣ್ಣುಮುಚ್ಚಿ ಸಾಧಿಸು ವುದಕ್ಕೆ ತೊಡಗಿದೆ. ದೈವದ ವಿಚಾರದಲ್ಲಿ ಸಾಧನೆ ಮಾಡಬೇಕು, ಸಮಾಜಸೇವೆ ಮಾಡ ಬೇಕು, ಬ್ರಹ್ಮಚಾರಿಯಾಗಿರಬೇಕು ಇದೆಲ್ಲ ಬೇರೆಯವರ ವಿಚಾರ —ನನ್ನದಾಗಿರಲಿಲ್ಲ. ಎಲ್ಲವನ್ನೂ ರಾಮಕೃಷ್ಣ ಪರಮಹಂಸರು, ನಮ್ಮ ಅಜ್ಜ, ಅಮ್ಮ, ಗಾಂಧೀಜಿ ಮುಂತಾ ದವರಿಂದ ಕಡ ತಂದದ್ದೇ. ಅದೇ ಬಂಡವಾಳ ಹೂಡಿ ಅನೇಕ ಕಡೆ ಭಾಷಣ ಮಾಡಿದೆ. ಕೆಲವನ್ನು ಕೃಷ್ಣಪರಮಾತ್ಮನಿಂದಲೂ ತಿಳಿಯಲಾಗಿತ್ತು.

ಆಗಿನ ನನ್ನ ಸಾಹಿತ್ಯ ಕಾರ್ಯಕ್ರಮವೂ ಹೀಗಿಯೆ. ಪೇಪರ್ ಹೊರಡಿ ಸುವುದು, ಕಾದಂಬರಿಗಳನ್ನು ಬರೆಯುವುದು — ಇದು ಒಬ್ಬರನ್ನು ನೋಡಿ ನಾನೂ ಮಾಡಬೇಕೆಂದು ಹೊರಟದ್ದು. ಕುಂದಾಪುರದ ಒಬ್ಬ ಗುಮಾಸ್ತರು ಬರೆಯ ಲಿಕ್ಕೆ ಶುರುಮಾಡಿದರು. ಅದರಿಂದ ನಾನೂ ಪ್ರೇರಣೆಗೊಂಡು ಸಾಹಿತ್ಯವನ್ನು ಓದಲಿಕ್ಕೆ ತೊಡಗಿದೆ, ಸಮಾಜವನ್ನು ರಿಪೇರಿ ಮಾಡುವುದಕ್ಕೆ ಹೊರಟೆ. ಆ ಕಾಲದಲ್ಲಿ ನಾಟಕ ಬರೆದದ್ದೇ ಬರೆದದ್ದು. ಕೆಲವನ್ನು ನಾಟಕದ ಕಂಪೆನಿಯವರು ಎರಡು ತಿಂಗಳು ಅಭ್ಯಾಸ ಮಾಡುವಾಗ ಅದರಲ್ಲಿ ಯಾವುದನ್ನು ಮಾಡಬಾರದು, ಯಾವುದನ್ನು ಹೇಳಬಾರದು ಎಂದು ಉಲ್ಲೇಖ ಮಾಡಿದ್ದೇನೋ ಅದನ್ನೆಲ್ಲಾ ಅವರು ಮಾಡುವುದನ್ನು. ಹೇಳುವುದನ್ನು ಕಂಡೆ. ಇದು ತುಂಬಾ ಕಷ್ಟ ಪರಿಸ್ಥಿತಿಗೆ ಇಟ್ಟುಕೊಂಡಿತು. ಆದ್ದರಿಂದ ನಾನೇ ಸ್ವಂತವಾಗಿ ಒಂದು ಕಂಪೆನಿ ಮಾಡಬಾರದೋ ಅಂತ ಅನ್ನಿಸಿತು. ಸ್ವಂತ ದುಡ್ಡು ಇರಲಿಲ್ಲ. ಕೊನೆಗೆ ಕರ್ನಾಟಕದ ಗಂಧರ್ವ ಸವಾಯಿ ಗಂಧರ್ವರ ಹತ್ತಿರ ಹೋಗಿದ್ದೆ. ಪುಣ್ಯಕ್ಕೆ ಅವರಿಂದ ಯಾವುದೇ ಸಹಾನುಭೂತಿ ಸಿಕ್ಕದ್ದರಿಂದ ನನ್ನ ನಾಟಕದ ಕಂಪೆನಿ ಹುಟ್ಟಲಿಲ್ಲ. ಜನ ಎಲ್ಲಾ, ಎಷ್ಟೋ ಸಾರಿ ನಮ್ಮ ನಾಟಕದ ಕಂಪೆನಿಗೆ ಬನ್ನಿ ಸಾರ್, ನಾಟಕ ಬರೆದುಕೊಡಿ ಎಂದು ಕೇಳಿದಾಗ ಅವರೆಲ್ಲರನ್ನೂ ಸಂತೈಸಿ ಕಳುಹಿಸಿದ್ದೇನೆ; ನೀವು ಏನು ಬೇಕಾದರೂ ಆಡಿ, ನನ್ನದೇನೂ ಆಕ್ಷೇಪಣೆ ಇಲ್ಲ ಅಂತ. ಆಮೇಲೆ ನನಗೆ ಅನ್ನಿಸಿತು ಈ ಸಮಾಜದಲ್ಲಿ ನಾನು ನೋಡಿದ ಹಾಗೆ ಗಂಡಸರು, ಹೆಂಗಸರು ರಂಗಸ್ಥಳದಲ್ಲಿ, ಊರಿನ ಒಳಗೆ, ಹೊರಗೆ, ಮನೆಯಲ್ಲಿ, ದೇವಾಲಯದಲ್ಲಿ

ಎಲ್ಲಿ ನೋಡಿದರೂ ಅವರೊಳಗೆ ಯಾವ ಅಧಿಕ ವ್ಯತ್ಯಾಸವನ್ನೂ ನಾನು ನೋಡಲಿಲ್ಲ. ನಾನು ಪುಸ್ತಕದಲ್ಲಿ ಪ್ರತಿಬಿಂಬಿಸುವಂತಹ ಬ್ರಹ್ಮಚರ್ಯ, ರೀತಿ-ನೀತಿ, ಗಾಂಧಿಯವರು ಮಾಡಿದಂತಹ ಉಪದೇಶಗಳನ್ನು ನಮ್ಮ ವ್ಯವಹಾರದಲ್ಲಿ, ನಮ್ಮ ಜೀವನದಲ್ಲಿ ಯಾವ ಸಮಾಜದಲ್ಲೂ ನಾವು ಕಾಣುತ್ತಿಲ್ಲ. ಮಾನವೀಯ ದೌರ್ಬಲ್ಯಕ್ಕೆ ಗುರಿಯಾದವರು, ಇತರ ಜನರ ಎದುರಿಗೆ ಭಾರೀ ಉಪದೇಶ ಮಾಡಿದ್ದನ್ನು ನೋಡಿದ್ದೇನೆ. ಸತ್ಯ ವನ್ನೇ ಹೇಳಬೇಕು, ಬ್ರಹ್ಮಚರ್ಯವನ್ನು ಪಾಲಿಸಬೇಕು ಎಂದು ಏನೇನು ಹೇಳು ತ್ತಾರೋ ಅದನ್ನು ಈ ರೀತಿ ಪಾಲಿಸಬಹುದೇ ಎಂದು ಗಾಂಧೀಜಿಯವರಿಗೆ ಕಾಗದ ಬರೆಯುವುದು, ಅವರು ಉತ್ತರ ಕೊಡುವುದು, ಅದರಿಂದ ತೃಪ್ತನಾಗುವುದು ನನ್ನ ಅಂದಿನ ರೂಢಿ. ಎರಡು ಪ್ರಸಂಗಗಳಲ್ಲಿ ಮಾತ್ರ ನನಗೆ ದುಃಖವಾಯಿತು: ಒಂದು ಮನೆಯಲ್ಲಿ ಇಬ್ಬರು ವೇಶ್ಯಾ ಹುಡುಗಿಯರಿಗೆ ಮದುವೆ ಮಾಡಿಸಬೇಕು, ಅವ ರನ್ನು ಆ ವೃತ್ತಿಗೆ ತಳ್ಳಬಾರದು ಎಂಬ ಪ್ರಯತ್ನದಲ್ಲಿ ತೊಡಗಿ ಅದೇ ಆಸಕ್ತಿಯಿಂದ ಓಡಾಡುತ್ತಾ ಇದ್ದಂಥ ಕಾಲದಲ್ಲಿ ಇಂತಹ ಪ್ರಸಂಗದಲ್ಲಿ ಏನು ಮಾಡಬೇಕು ಎಂದು ಖುದ್ದಾಗಿ ಮಹಾತ್ಮಾಗಾಂಧಿಯವರಿಗೆ ಕಾಗದ ಬರೆದೆ. ನನಗೆ ಹೇಳಲು ಬಹಳ ಸಂಕಟ ವಾಗುತ್ತಾ ಇದೆ; ಬ್ರಹ್ಮಚಾರಿಣಿಯರಾಗಿ ಇರಬೇಕೆಂದು ಅವರಿಂದ ಅಪ್ಪಣೆ ಬಂತು. ಆ ಒಂದು ನೋಟೀಸನ್ನು ನೋಡಿದಾಗ ಬಹಳ ದಿಗಿಲಾಯಿತು. ಒಂದು ವೇಳೆ ಮನುಷ್ಯರೆಲ್ಲ ಹನುಮಂತನಂತೆ ಚಿರಂಜೀವಿಯಾಗಿ ಇರುವಂಥವರಾಗಿದ್ದರೆ ಆ ರೀತಿ ಇರಬಹುದಾಗಿತ್ತು. ಆದರೆ ನಾವೆಲ್ಲರೂ ನಾಳೆ ಸತ್ತುಹೋಗತಕ್ಕ ಮನುಷ್ಯರು. ಆದ್ದರಿಂದ ಯಾವ ಜನ್ಮವೂ ಇಲ್ಲದ ಚಿರಂಜೀವಿಗಳು ನಮಗೆ ಆದರ್ಶವಾಗಲಾರರು. ಆಕಾಲಕ್ಕೆ ಮನುಷ್ಯನ ಶಕ್ತಿ, ರೀತಿ-ನೀತಿ ಏನೆಂಬುದನ್ನು ತಿಳಿಯದೆ ಯಾವ ಆದರ್ಶವನ್ನೂ ಕೂಡ ಒಪ್ಪಿಕೊಳ್ಳಕೂಡದು ಎಂಬ ಒಂದು ಪ್ರಜ್ಞೆ ನನ್ನಲ್ಲಿ ಮೂಡಿತು. ಅದರ ಜೊತೆಗೆ ಇನ್ನೊಂದು ತಿಳಿವೂ ಜಾಗ್ರತವಾ ಯಿತು. ಚಾಮರಾಜ ನಗರದಲ್ಲಿ ಒಬ್ಬ ವಿಧವೆ ಹುಡುಗಿ ಇದ್ದಳು. ನಾಟಕದ ಕಂಪೆನಿಯ ಒಬ್ಬ ಧೂರ್ತ ಅವಳನ್ನು ಲಪಟಾಯಿಸಿಕೊಂಡು ತಿಪಟೂರಿಗೆ ಬಂದ. ಆಕೆ ಯಾರಿಗೆ ಸಲಬೇಕೆಂಬ ವಿಷಯದಲ್ಲಿ ವಿವಾದ ಬಂತು. ಈ ಪ್ರಸಂಗವನ್ನು ಹೇಗೆ ಪರಿಹಾರ ಮಾಡ ಬೇಕು ಅಂತ ಹೇಳಿ ಆ ಹುಡುಗಿಯನ್ನು ಕರೆದುಕೊಂಡು ನನ್ನ ಹತ್ತಿರ ಬಂದರು. ಹೇಗೂ ಬಂದಿದ್ದೀರಿ, ಬಂದದ್ದಾಯಿತು ಇಬ್ಬರೂ ಮದುವೆಯಾಗಿಬಿಡಿ ಎಂದು ಹೇಳಿದೆ. ಆದರೂ ಆ ರೀತಿ ಹೇಳುವುದಕ್ಕೆ ನನಗೆ ಹಕ್ಕು ಇಲ್ಲ ಅಂತ ತಿಳಿದುಕೊಂಡು ಗಾಂಧೀಜಿಯವರಿಗೆ ಒಂದು ಕಾಗದ ಬರೆದೆ. ಅವರಿಂದ ಉತ್ತರ ಬಂದಾಗ ಅದರಲ್ಲಿ ಆಕೆ ಆಜನ್ಮ ಬ್ರಹ್ಮಚಾರಿಣಿ ಯಾಗಿ ಇರಬೇಕು ಅಂತಲೇ ಇತ್ತು. ಇದರಿಂದ ನನ್ನ ಮನಸ್ಸಿಗೆ ಬಹಳ ವೇದನೆಯಾಯಿತು. ಜೀವನದಲ್ಲಿ ನಡೆಯತಕ್ಕ ಯಾವುದೇ ಪ್ರಸಂಗದಲ್ಲಾಗಲಿ, ಯಾವುದೇ ಘಟನೆಯ ಕುರಿತಾ ಗಲಿ ಆಚಾರ್ಯಪುರುಷರು ಏನು ಹೇಳುತ್ತಾರೋ ಅದನ್ನು ಒಪ್ಪಿಕೊಳ್ಳಕೂಡದು, ನನಗೆ ಬುದ್ಧಿ ಇರುವ ತನಕ, ನಾನು ನಾನಾಗಿ ಇರಬೇಕಾದರೆ ಯಾವುದೇ ವಿಚಾರವಾಗಲಿ, ತತ್ತ್ವಜ್ಞಾನವಾಗಲಿ, ಶಾಸ್ತ್ರವಾಗಲಿ ಏನು ಬೇಕಾದರೂ ಆಗಲಿ ನನ್ನ ಆಲೋಚನೆಗೆ ಪ್ರತಿಬಂಧಕವಾಗಬಾರದು ಎಂಬ ಬುದ್ಧಿ ನನಗೆ ಬಂತು. ಪ್ರತಿಯೊಂದು ಪ್ರಸಂಗ ವನ್ನೂ ಕೂಡ ಆಯಾ ಸನ್ನಿವೇಶಕ್ಕೆ ತಕ್ಕಂತೆ ಎದುರಿಸಬೇಕು, ಸ್ವಂತ ಶಕ್ತಿ ಇದ್ದಂತೆ

ನೋಡಬೇಕು ಎಂಬ ಅರಿವು ಉಂಟಾಯಿತು. ದೇವರ ಪ್ರಶ್ನೆ, ಬ್ರಹ್ಮಚರ್ಯದ
ಪ್ರಶ್ನೆ ಇಂತಹ ನೂರಾರು ಸಾಮಾಜಿಕ ಮತ್ತು ಇತರ ಪ್ರಶ್ನೆಗಳನ್ನು ನನ್ನ ಕಣ್ಣಿನಿಂದಲೇ
ನಾನು ನೋಡಬೇಕು, ಹಾಗಲ್ಲದೆ ಜಗತ್ತಿನ ಯಾವ ನಿರಪರಾಧಿಯನ್ನೂ ಶಿಕ್ಷಿಸಕೂಡದು,
ಅಪರಾಧಿಯನ್ನು ಮನ್ನಿಸಕೂಡದು ಎಂಬ ತೀರ್ಮಾನಕ್ಕೆ ಬಂದೆ.

ಅದರಂತೆ ನನ್ನ ಜೀವನದಲ್ಲಿ ನಾನು ತೊಡಗಿದ್ದೇನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣ
ಪರಮಾತ್ಮ ಏನು ಹೇಳಿದ್ದಾನೆ? ದೇವರ ಒಂದು ರೂಪದಲ್ಲಿ ನಾನು ಇದ್ದೇನೆ ಎಂದು
ಹೇಳಿದ್ದಾನೆ. ಯೋಚನೆ ಮಾಡಬೇಕಾಯಿತು. ಹೀಗೆ ನನಗೆ ಸ್ವತಂತ್ರವಾಗಿ ವಿಚಾರ
ಮಾಡಬೇಕೆಂಬ ಪ್ರೇರಣೆ ಯಾರಿಂದಾದರೂ ಬಂದಿದ್ದರೆ ಅದು ನಮ್ಮ ದೇಶದ ಯಾವ
ಬ್ರಹ್ಮನಿಂದಲೂ ಪಡೆದದ್ದಲ್ಲ. ಪ್ರಾಯ: ಬರ್ಟ್ರಂಡ್‌ರಸೆಲ್ಲರ ಪುಸ್ತಕ ಓದಿ ಪಡೆದಿರ
ಬಹುದು. ನನಗೆ ಇರತಕ್ಕಂಥ ಬುದ್ಧಿ, ತಿಳಿವಳಿಕೆಯಿಂದ ಯಾವುದನ್ನೇ ಆಗಲಿ ಪ್ರಶ್ನೆ
ಮಾಡದೆ ಒಪ್ಪಿಕೊಳ್ಳಬಾರದು ಎಂಬುದು ನನ್ನ ಮತ. ಅದನ್ನು ನಾನು ನಂಬಿಕೊಂಡು
ಬಂದಿದ್ದೇನೆ. ಮನುಷ್ಯ ಅನೇಕ ವಿಷಯಗಳಲ್ಲಿ ಪ್ರಾಣಿಯಿಂದ ಭಿನ್ನನಾಗಿಲ್ಲ, ಭಿನ್ನನಾಗ
ಲಾರ. ಹಾಗೆಲ್ಲಾದರೂ ಆದರೆ ಅದು ವಿಕಾರ, 'ಪರ್ವರ್ಸಿಟಿ' ಎಂಬ ತೀರ್ಮಾನಕ್ಕೆ
ಬರಬೇಕಾಯಿತು. ಆ ಮೇಲೆ ನನ್ನ ಮನಸ್ಸಿನಲ್ಲಿರತಕ್ಕ ಅನುಭವಗಳ ಆಧಾರದಿಂದ
ನಾಟಕಗಳನ್ನು, ಕಥೆ ಕಾದಂಬರಿಗಳನ್ನು ಬರೆಯಬೇಕಾದಂತಹ ಅನೇಕ ಪ್ರಸಂಗಗಳು
ಬಂದುವು. ಸ್ವಾನುಭವದ ಮೇಲಿಂದಲೇ ಬರೆಯಲು ನನಗೆ ಶಕ್ತಿ ಬಂತು ಎಂದು ನಾನು
ಹೇಳಬಲ್ಲೆ.

ಗಾಂಧೀಯುಗದಲ್ಲಿ ಕುಂದಾಪುರ ತಾಲ್ಲೂಕಿನಲ್ಲಿ ಪ್ರತಿದಿವಸ ಒಂದೆರಡು
ಮನೆಗಳಿಗೆ ಹೋಗಿ ಹೆಂಡಗಿಂಡ ಕುಡಿಯಬಾರದು. ಅದರ ಬದಲು ಕಾಫಿ
ಕುಡಿಯಿರಿ ಎಂದು ಕೇಳಿಕೊಂಡು ಬಂದೆ. ಆಮೇಲೆ ಪುತ್ತೂರಿನಲ್ಲಿ ೩ ತಿಂಗಳ ಅವಧಿ
ಯಲ್ಲಿ ಕನಿಷ್ಠ ಮೂರು ದಿವಸಕ್ಕೆ ಒಂದು ಹಳ್ಳಿಗೆ ಹೋಗಿ ಅಲ್ಲಿನ ಹರಿಜನರ ಮನೆ
ಗಳಿಗೆ ಹೋಗಿ ನೋಡಿದಾಗ ಅವರು ಎಷ್ಟು ಶುಚಿಯಾಗಿದ್ದರು, ಅವರ ಜೀವನ
ಎಷ್ಟು ಬಡವಾಗಿತ್ತು, ಒಂದು ಹೊತ್ತಿನ ಊಟ ಸಿಕ್ಕಬೇಕಾದರೆ ಎಷ್ಟು ಹೊರೆ
ಸೊಪ್ಪು ಹೊರಬೇಕು ಎಂಬುದನ್ನೆಲ್ಲಾ ವಿಚಾರ ಮಾಡಿದಾಗ ಅಲ್ಲಿನ ದೃಶ್ಯ ಕಣ್ಣು
ಮುಂದೆ ಕಟ್ಟಿದ ಹಾಗೆ ಆಯಿತು. ಅದರ ಪರಿಣಾಮವಾಗಿ 'ಚೋಮನ ದುಡಿ'
ಎಂಬ ಬರಹ ಬಂತು. ಅದಕ್ಕಿಂತ ಮೊದಲು ಕೆಲವು ಕಥೆಗಳನ್ನು, ನಾಟಕಗಳನ್ನು
ಬರೆದಿದ್ದೆ. ಆದರೆ ಒಂದೂ ಜೀವನದ ಅನುಭವದಿಂದ ಬರೆದದ್ದಲ್ಲ. ಸತ್ಯ ಯಾವುದು
ಎಂಬ ವಿಷಯವನ್ನು ಅಲ್ಲಿ ಕಂಡುಕೊಳ್ಳಲಿಕ್ಕೆ ಬರುವುದಿಲ್ಲ. ಯಾವ ಒಂದು ಗ್ರಂಥ
ದಿಂದಲೂ ಸತ್ಯಾಂಶದ ತಿಳಿವಳಿಕೆಯುಂಟಾಗುತ್ತದೆ ಎಂದು ನಾನು ತಿಳಿಯುವುದಿಲ್ಲ.
ನಾವು ನಂಬತಕ್ಕ ವಿಷಯ ಯಾವುದೋ, ದೇವರು ಯಾರೋ ನನಗಂತೂ
ಗೊತ್ತಿಲ್ಲ. ನನ್ನ ಪಾಡಿಗೆ ನಾನು ಹೇಳುವುದಾದರೆ ನಾಟಕದ ಕಂಪೆನಿಯವರು ಇಡು
ವಂತಹ ದೇವರ ಬೊಂಬೆಗಿಂತ ದೇವರು ಬೇರೆ ಅಲ್ಲ. ಜೀವನದ ಪ್ರವಾಹದಲ್ಲಿ
ಅಗಾಧವಾದ ವಿಶ್ವಾಸವುಳ್ಳ ನಾನು ಆತ್ಮ ಇಲ್ಲ ಎಂದು ನಂಬಿದ್ದೇನೆ. ಆದರೆ ಪ್ರತ್ಯೇಕ
ವಾಗಿ ಈ ತತ್ವ ಪ್ರತಿಪಾದನೆ ಮಾಡಬೇಕೆಂದು ನನಗೆ ತೋರಿಲ್ಲ. ಅನೇಕ ಜೀವಕೋಟಿ

ಗಳಲ್ಲಿ ಒಬ್ಬನಾಗಿರತಕ್ಕ ವ್ಯಕ್ತಿ ನಾನು. ನನ್ನ ನೆರೆಹೊರೆಯ, ಅಕ್ಕಪಕ್ಕದ ವ್ಯಕ್ತಿಗಳಿಗೆ ಹೊಣೆಯಾಗಿರತಕ್ಕಂಥವನು. ನನ್ನ ಅರಿವಿನ ಬೆಳಕಿನಲ್ಲಿ, ನನ್ನ ರೀತಿಯಲ್ಲಿ ಬಾಳ ಬೇಕೆಂದು ಒದ್ದಾಡಿದಂತಹ ಜೀವ ನನ್ನದು. ಜೀವಿಗಳಲ್ಲಿ ಇರತಕ್ಕಂಥ ದೌರ್ಬಲ್ಯ ಎಲ್ಲಾ ನನ್ನಲ್ಲೂ ಇದೆ. ಇತರರಿಗಿಂತ ನಾನು ಎಂದಿಗೂ ಹೆಚ್ಚಲ್ಲ. ಇದಕ್ಕನುಸಾರವಾಗಿ ನಾನು ನೋಡಿದ ಸೌಂದರ್ಯದ ದೃಷ್ಟಿಯಾಗಲಿ, ಅನುಭವ ದೃಷ್ಟಿಯಾಗಲಿ, ಸಾಹಿತ್ಯ ವಾಗಲಿ, ಶಿಲ್ಪವಾಗಲಿ ಇವುಗಳ ನಾನಾ ಮುಖಗಳನ್ನು, ನನ್ನ ತಿರುಗಾಟದ ಅವಧಿಯಲ್ಲಿ ನಾನು ಕಂಡ ಬದುಕಿನ ದಾರಿಯನ್ನು ಜನರ ಮುಂದೆ ಬರೆದಿಟ್ಟೆ. ಹೀಗಾಗಿ ಯಾವುದು ನನ್ನ ಮನಸ್ಸನ್ನು ಅರಳಿಸಿತೋ, ಕುತೂಹಲವನ್ನು ಕೆರಳಿಸಿತೋ –ಅದೆಲ್ಲಾ ಬರಹವಾಗಿ ಪರಿಣಮಿಸಿದೆ.

ಒಮ್ಮೆ ನಾನು ನನ್ನ ಹಿರಿಯರ ಜೊತೆಯಲ್ಲಿ ಕಾಶಿಯಾತ್ರೆಗೆ ಹೋಗಿದ್ದೆ. ಕಲ್ಕತ್ತಾಕ್ಕೆ ಹೋಗಿದ್ದೆ, ಗಯಾಕ್ಕೆ ಹೋಗಿದ್ದೆ, ಅಲಹಾಬಾದಿಗೂ ಹೋಗಿದ್ದೆ. ಅಲ್ಲಿ ನಾನು ನೋಡಿದ ಚಿತ್ರ ನನ್ನ ಮನಸ್ಸಿಗೆ ಬಹಳ ನೋವನ್ನುಂಟು ಮಾಡಿತು. ನನಗೆ ತುಂಬಾ ಬೇಸರ ಹುಟ್ಟಿದ ಕಾಲ ಅದು. ಅಂಥ ಇಪ್ಪತ್ತು ವರ್ಷ ಕಳೆದಿದ್ದೇನೆ. ಅಂದಿನ ಜೀವನದ ಪರಿಸ್ಥಿತಿ, ಸಮಾಜದಲ್ಲಿ ಆಗತಕ್ಕ ಅತ್ಯಾಚಾರಗಳನ್ನು ಕಂಡಾಗ, ಜನರ ಅಜ್ಞಾನವನ್ನು ದುರುಪಯೋಗ ಮಾಡಿಕೊಳ್ಳುತ್ತಿರುವ ಭಂಡರನ್ನು ಕಂಡಾಗ ಮನಸ್ಸಿನಲ್ಲಿ ಕ್ರೋಧ ವುಕ್ಕುತ್ತಿತ್ತು. ಅದರ ಅಳಲನ್ನು ನಾನು ತಮ್ಮ ಮುಂದೆ ತೋಡಿಕೊಂಡೆ. ಅಂತೂ ಸಂದರ್ಭಕ್ಕನುಗುಣವಾಗಿ ಬರೆಯುತ್ತಾ ಹೋದೆ. ಅನುಭವ ಕಡಿಮೆಯಾಗಿದ್ದರಿಂದ ಬರೆಯುವುದೇ ಸಂತೋಷ ಕೊಡುತ್ತಿತ್ತು. ಹತ್ತೆಂಟು ನಾಟಕಗಳ ರಚನೆಮಾಡಿದ್ದು ಆಗ.

ನಾನು ಪುರಾಣಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಬರೆದೆ, ವಿಜ್ಞಾನ ಗ್ರಂಥ ಗಳನ್ನೂ ಬರೆದೆ; ಮತ್ತು ಅದರಿಂದ ತೃಪ್ತಿಪಡೆದೆ. ಆಗ ಕೆಲವರು ಇದನ್ನು ಯಾರೂ ಪ್ರಿಂಟ್ ಮಾಡುವುದಿಲ್ಲ, ನಿಮ್ಮ ಖರ್ಚಿನಲ್ಲಿ ನೀವು ಮಾಡಿ ದುಡ್ಡು ಕಳಕೊಳ್ಳುತ್ತೀರಿ ಎಂದು ಲೇವಡಿ ಮಾಡಿದರು. ಜನಜೀವನದ ಮೇಲೆ ಬರೆಹಗಳ ಪ್ರಭಾವ ಎಷ್ಟು ಆಗುತ್ತದೆಂದು ಹೇಳುವುದು ಬಹಳ ಕಷ್ಟ. ನಾನು ಈ ಮಾತನ್ನು ಏಕೆ ಹೇಳುತ್ತಿದ್ದೇ ನೆಂದರೆ, ಇಲ್ಲಿ ಅನೇಕ ನನ್ನ ಸಾಹಿತಿ ಮಿತ್ರರು ಬಂದು ಸೇರಿದ್ದಾರೆ. ನಾನು ಬರವಣಿಗೆಗೆ ತೊಡಗಿದಾಗ, ಜನರ ಮೇಲೆ ಪ್ರಭಾವ ಬೀರಿ, ಸಮಾಜವನ್ನು ಆದಷ್ಟು ಮೇಲೆ ಎತ್ತಬೇಕೆಂದೇ ಹೊರಟ ವ್ಯಕ್ತಿ. ಆದರೆ, ಇವತ್ತು ಆ ನಂಬಿಕೆಯನ್ನು ನಾನು ಕಳಕೊಂಡಿ ದ್ದೇನೆ. ನನ್ನನ್ನು ನಾನು ಮೇಲಕ್ಕೆ ಎತ್ತಿಕೊಳ್ಳದೆ ಇತರರನ್ನು ಎತ್ತಲು ಸಾಧ್ಯವಿಲ್ಲ ವೆನ್ನುವ ತೀರ್ಮಾನಕ್ಕೆ ನಾನು ಬಂದಿದ್ದೇನೆ. ಇನ್ನೊಬ್ಬರನ್ನು ಮೇಲಕ್ಕೆತ್ತುವುದಕ್ಕೋಸ್ಕರ ಬರವಣಿಗೆಯಲ್ಲಿ ತೊಡಗಕೂಡದೆನ್ನುವ ತೀರ್ಮಾನಕ್ಕೆ ಬಂದಿದ್ದೇನೆ. ಆ ಶಕ್ತಿ ನನ್ನಲ್ಲಿಲ್ಲ. ಮೇಲಕ್ಕೆತ್ತಬೇಕಾದರೆ, ನನಗೆ ಸತ್ಯದ ಪೂರ್ಣ ದರ್ಶನ ಆಗಬೇಕು. ಆದರೆ ಯಾವುದು ಸತ್ಯ ? ಸತ್ಯಕ್ಕೆ ಸಾವಿರ ಮುಖಗಳಿದ್ದಾವಲ್ಲ ?

ವಿಸೀ.ಯವರು ನನ್ನನ್ನು ಭಾಷಣಕ್ಕೆ ಕರೆಯುತ್ತಿದ್ದ ಕಾಲದಲ್ಲಿ, ನನಗೂ ಅವರಿಗೂ ವಿವಾದಗಳಾಗುತ್ತಿತ್ತು. ಒಬ್ಬ ವ್ಯಕ್ತಿಯ ಜೀವನದಲ್ಲಿ ಬರತಕ್ಕ ಮೂರು ವಿಚಾರಗಳ ಬಗ್ಗೆ : ಒಂದು ಜೀವನಕ್ಕೆ ಸಂಬಂಧಪಟ್ಟಪ್ರಶ್ನೆ, ಇನ್ನೊಂದು ಗಂಡು ಹೆಣ್ಣಿಗೆ ಸಂಬಂಧಪಟ್ಟ

ಪ್ರಶ್ನೆ, ಮತ್ತೊಂದು ಸ್ನೇಹಿತರಿಗೆ ಸಂಬಂಧಪಟ್ಟ ಪ್ರಶ್ನೆ. ಅದೇ ರೀತಿ ಬಡವರ ಪ್ರಶ್ನೆ, ರಾಜಕೀಯ ಪ್ರಶ್ನೆ. ಯಾವುದೂ ನಾವು ತಿಳಿದುಕೊಂಡಷ್ಟು ಸುಲಭವಾಗಿಲ್ಲ. ನಮ್ಮ ಅಜ್ಞಾನ ಅಗಾಧವಾದುದು. ಕಲೆಯ ಅಭಿವ್ಯಕ್ತಿಯಲ್ಲಿ ನಾನು ಇದನ್ನೇ ಕಂಡುಕೊಂಡಿದ್ದೇನೆ: ಎಷ್ಟೋ ಸುಲಭ, ಎಷ್ಟೋ ಕಠಿಣ. ಹೀಗೆ ಎರಡು ಮುಖಗಳನ್ನೂ ನಾವು ಕಾಣಬಹುದು. ನಾನು ಯಾವತ್ತಿನಿಂದ ಕಲೆಯ ಪ್ರಯೋಗ ಮಾಡತೊಡಗಿದೆನೋ, ಅಲ್ಲಿಂದ ಈ ತನಕ ಹೆಚ್ಚು ಪ್ರಯತ್ನದಿಂದ ತಿಳಿದದ್ದು ಸ್ವಲ್ಪಮಾತ್ರ ಎಂದುಕೊಂಡಿದ್ದೇನೆ. ಈ ಕಲೆಯ ಮೂಲವನ್ನು ತಿಳಿಯುವ ಕೆಲಸ ಬಹಳ ಅಗಾಧವಾದುದು. ಪುರಾಣಗಳ ಕೆಲಸ, ಪ್ರಬಂಧಗಳ ಕೆಲಸ, ಸಾಹಿತಿಗಳು ಮಾಡಬೇಕಾದ ಕೆಲಸ, ಪ್ರಕಾಶಕರು ಮಾಡಬೇಕಾದ ಕೆಲಸ ಹೀಗೆ. ಇವುಗಳು ತರತಕ್ಕ ಬಹುಮಾನಗಳನ್ನು ಉದ್ದೇಶವಾಗಿಟ್ಟುಕೊಂಡು ಬರೆಯಬಾರದು. ನನ್ನ ಕೆಲಸ, ಶೋಧನೆ ಮುಕ್ತಾಯವಾಯಿತು ಎಂದು ನನಗನಿಸುವುದಿಲ್ಲ. ಸೃಷ್ಟಿ ಮುಗಿದಿಲ್ಲ. ಸೃಷ್ಟಿಯನ್ನು ಕುರಿತು ಯಾವ ತೀರ್ಮಾನವೂ ಆಗಿಲ್ಲ. ಸೃಷ್ಟಿ ತನ್ನಷ್ಟಕ್ಕೆ ತಾನೆ ಯಾವುದೋ ಒಂದು ರೀತಿಯಲ್ಲಿ ನಡೆದುಕೊಂಡು ಹೋಗುತ್ತದೆ. ಪ್ರಪಂಚದ ಗುರಿಯೇ ಇದು; ಪಾರಮಾರ್ಥಿಕತೆಯೇ ಸತ್ಯ, ಕಂಡದ್ದು ಸತ್ಯವಲ್ಲ ಎಂದು ನಮ್ಮ ಅನೇಕ ಋಷಿಗಳು ಹೇಳಿದಹಾಗೆ ನಾನು ಎಂದೂ ಹೇಳಲಾರೆ, ಮತ್ತು ಆ ಮಾತನ್ನು ನಾನು ಒಪ್ಪಲಾರೆ. ಈ ಬಾಳು ನನಗೆ ಸತ್ಯ. ಈ ಬಾಳ್ವೆಯ ಮುಖವೇ ನನಗೆ ಸತ್ಯ. ಮನಸ್ಸಿನ ಪ್ರಚೋದನೆಯನ್ನು ಅವಲಂಬಿಸಿಕೊಂಡು ಜ್ಞಾನ ಎಷ್ಟು ವಿಶಾಲವಾಗುತ್ತದೆ, ಅದು ಬಾಳಿಗೆ ಸಂಬಂಧಪಟ್ಟ ಪ್ರಶ್ನೆ. ನಾನು ಅದನ್ನು ಇಣಕಿ ನೋಡಬಲ್ಲೆ; ಮತ್ತು ಅದರ ಮಿತಿಯೊಳಗೆ ಜೀವಿಸಬಲ್ಲೆ. ಈ ಒಂದು ಪ್ರಯಾಣದಲ್ಲಿ ನಾನು ಒಂದು ಭಿನ್ನ ವ್ಯಕ್ತಿಯಲ್ಲ. ನಾನು ಇಡೀ ಸಮಾಜದಲ್ಲಿರುವವರ ಜೊತೆಗೆ ಸೇರಿದಂತಹ ವ್ಯಕ್ತಿ. ಈ ಅರುವತ್ತೆಂಟರ ಪ್ರಾಯ ಬರುವ ತನಕ ನಾನು ನಡೆದುಕೊಂಡು ಬಂದಿದ್ದೇನೆ. ನನ್ನ ಸ್ನೇಹಿತರೆಲ್ಲರೂ ನನ್ನನ್ನು ಬಹಳವಾಗಿ ಹೊಗಳಿದ್ದಾರೆ. ಅದಕ್ಕಾಗಿ ಎಷ್ಟೋ ದೂರದಿಂದ ಇಲ್ಲಿಗೆ ಬಂದಿದ್ದಾರೆ. ಅವರಲ್ಲಿ ಕೆಲವರು ನನ್ನ ಪುಸ್ತಕಗಳನ್ನು ಓದಿರಬಹುದು, ಓದದೆ ಇರಬಹುದು. ಆದರೆ ನನ್ನ ಬಗ್ಗೆ ಪ್ರೀತಿಯನ್ನು ತೋರಿಸಿದ್ದಾರೆ. ನಾನು ಪ್ರತಿಯೋರ್ವ ಮನುಷ್ಯನಿಂದಲೂ ಪ್ರೀತಿ ಸ್ನೇಹಗಳನ್ನು ಅಪೇಕ್ಷೆ ಮಾಡುತ್ತೇನೆ. ನಿಮ್ಮ ಸ್ನೇಹ ಮತ್ತು ಪ್ರೀತಿಗೆ ಅರ್ಹನಾದವನೆಂಬ ಭಾವನೆ ಖಚಿತವಾದರೆ ನನ್ನ ಮನಸ್ಸಿಗೆ ಸಮಾಧಾನ – ರೊಕ್ಕ ಇದ್ದವನಾಗಲಿ, ರೊಕ್ಕ ಇಲ್ಲದವನಾಗಲಿ, ಎಲ್ಲರೂ ನನಗೆ ಒಂದೇ. ನಾನು ಮಾಡುವ ಕರ್ತವ್ಯವನ್ನು ಮಾಡಿದ್ದೇನೆ. ಈ ಒಂದು ಕಾರಣದಿಂದ ಅನೇಕ ಜನ ಮಿತ್ರರು, ಸಾಹಿತಿಗಳು ಮತ್ತು ಕಲಾವಿದರು ಸಮಾಜದಲ್ಲಿ ಹಾಗೆಯೇ ಇದ್ದ ಸ್ಥಾನದಲ್ಲೇ ಇದ್ದಾರೆ. ಈ ಚಿತ್ರಗಳನ್ನು ನಾನು ಅನೇಕ ಕಾದಂಬರಿಗಳಲ್ಲಿ ಚಿತ್ರಿಸಿದ್ದೇನೆ. ನನ್ನ ಪ್ರಯಾಣ ಅರುವತ್ತೆಂಟು ವರ್ಷ ಸಾಗಿದೆ. ಏನೋ ತಿಳಿಯದೆ ನಾನು ಈ ಪ್ರಪಂಚಕ್ಕೆ ಬಂದಿದ್ದೇನೆ. ಇನ್ನೂ ಕೆಲವು ಸಮಯ ಇದ್ದು, ಇನ್ನೂ ಕೆಲವು ಕೆಲಸಗಳನ್ನು ಮಾಡಬೇಕಾಗಿದೆ. ನಂತರ ಒಂದು ದಿವಸ ಕಣ್ಮರೆಯಾಗಬೇಕಾಗಿದೆ. ಈಗ ನನ್ನ ಕೆಲಸ ಏನೆಂಬುದನ್ನು ನಾನು ನಿರ್ಧರಿಸಿಕೊಳ್ಳಬೇಕಾಗಿದೆ. ಅದನ್ನು ಯಾರೂ ಹೇಳಬೇಕಾಗಿಲ್ಲ; ಹೇಳಿದರೂ ನಡೆಯುವ ಹಾಗಿಲ್ಲ. ಜೀವನ ಮಾಡತಕ್ಕವನು ಹಿಂದಕ್ಕೆ ನೋಡುವುದು ಏಕೆ? ನಾನು ಎಷ್ಟು ಮಾಡಿದ್ದೇನೆಂದು

ಸರ್ಟಿಫಿಕೇಟ್ ಪಡೆಯುವುದಕ್ಕೆಯೇ? ನನ್ನ ಮುಂದಿರುವ ಅಲ್ಪ ಅವಧಿಯಲ್ಲಿ ನಮ್ಮ ದೇಶದ, ನಮ್ಮ ಜನತೆಯ ಬುದ್ಧಿ, ಅವರ ಅಜ್ಞಾನ, ವಿಚಾರಹೀನತೆ, ಒಳಹೊಕ್ಕು ನೋಡಿದರೆ – ವಿದ್ಯಾಕ್ಷೇತ್ರ, ರಾಜಕೀಯ ಕ್ಷೇತ್ರ, ಸಂಪತ್ತಿನ ಕ್ಷೇತ್ರ, ಮತ್ತು ಸೌಂದರ್ಯದ ಕ್ಷೇತ್ರದಲ್ಲಿ, – ಹೆಜ್ಜೆ ಹೆಜ್ಜೆಗೂ ಕಣ್ಣಿಗೆ ಕಾಣುತ್ತಾ ಇರುವಾಗ ಅದೇ ನಿಜವಾದ ಸತ್ಯವೆಂದು ನಂಬಬೇಕಾಗಿದೆ. ಜನತೆಯ ಅಜ್ಞಾನವನ್ನು ಹೋಗಲಾಡಿಸುವ ಕೆಲಸವನ್ನು ಮಾಡಬೇಕೆಂಬ ಉದ್ದೇಶದಿಂದ ಬರೆಯುತ್ತೇನೇ ಹೊರತು ನಾನು ಇಷ್ಟು ಮಾಡಿದ್ದೇನೆಂದು ಸಂತೋಷಪಡಬೇಕಾದ ಕಾರಣದಿಂದ ಮಾಡುತ್ತಾ ಇಲ್ಲ. ನಿಮಗೆ ಅದು ಚೆನ್ನಾಗಿ ಕಂಡಿದ್ದರೆ, ನಿಮ್ಮ ಜೀವನಕ್ಕೆ ಅದು ಪ್ರೇರಣೆಯನ್ನು ಕೊಟ್ಟಿದ್ದರೆ ನಿಮ್ಮ ಬದುಕಿನಲ್ಲಿ ಅದನ್ನು ನೀವು ಅಳವಡಿಸಿಕೊಳ್ಳಬಹುದು. ನೀವು ಯಾರೇ ಇರಬಹುದು – ಕವಿಗಳು ಇರಬಹುದು, ವ್ಯಾಪಾರಿಗಳು ಇರಬಹುದು, ಅಥವಾ ಇನ್ನಿತರ ವರ್ಗದ ಜನರೇ ಇರಬಹುದು.

ನಿಮಗೆ ನಾನು ಹೇಳುವುದು ಇಷ್ಟೆ: ಜೀವನದ, ದುಡಿಮೆಯ ಅಪಮೌಲ್ಯಗಳನ್ನು ಎತ್ತಿಕೊಂಡು ದುಡಿಯಬೇಡಿ. ನಮ್ಮ ದೇಶದ ಸಾಹಿತಿಗಳು ಪರದೇಶದಲ್ಲಿದ್ದರೆ ಚೆನ್ನಾಗಿತ್ತು ಎಂಬ ಅಭಿಪ್ರಾಯವನ್ನು ನಮ್ಮ ಸ್ನೇಹಿತರು ಹೇಳಿದ್ದಾರೆ. ನಮ್ಮ ದೇಶದಲ್ಲಿದ್ದವರು ಮೂರ್ಖರು ಎಂಬ ಭಾವನೆಯನ್ನು ಕೆಲವರು ಹೊಂದಿರುತ್ತಾರೆ. ಅದು ಸರಿಯಲ್ಲ. ನಮ್ಮಲ್ಲಿಯೂ ಬೇಕಾದಷ್ಟು ಒಳ್ಳೆಯ ಸಾಹಿತಿಗಳು ಇದ್ದಾರೆ. ಆದರೆ ಇಲ್ಲಿ ಅವರಿಗೆ ಬೇಕಾದ ಪ್ರೋತ್ಸಾಹ ಇಲ್ಲ. ಅವರು ಬರೆದುದನ್ನು ಮುದ್ರಿಸುವ ಖರ್ಚು ಕೂಡ ಕೊಡುವವರಿಲ್ಲ. ಕೊಂಡುಕೊಳ್ಳುವವರಿಲ್ಲ; ಆದರೆ ಬರೆಯಿರಿ ಎಂದು ಮಾತ್ರ ಹೇಳುತ್ತಾರೆ. ನನ್ನ ಬದುಕು, ನನ್ನ ಮನಸ್ಸು ಇವುಗಳಲ್ಲಿರುವುದನ್ನು ನಾನು ತೋಡಿಕೊಂಡಿದ್ದೇನೆ. ನಾನು ಯಾವುದನ್ನೂ ಮೆಚ್ಚಿಗೆಗಾಗಿ ಬರೆದಿಲ್ಲ. ಯಾವ ವಿಷಯ ನನಗೆ ತಿಳಿದಿದೆಯೋ, ಅದನ್ನು ಜನರಿಗೆ ತಿಳಿಯುವ ಮಾತಿನಲ್ಲಿ ನಾನು ಬರೆದುಕೊಡುತ್ತಿದ್ದೇನೆ. ಅವರಿಗೆ ಅದರಿಂದ ಪ್ರಯೋಜನವಾದರೆ ಸಾಕು. ನನ್ನ ಜೀವನದಲ್ಲಿ, ಕರ್ನಾಟಕದ ಸಂಚಾರದಲ್ಲಿ ಸ್ನೇಹಿತರು ಬಹಳ ಮಂದಿ ಆಗಿದ್ದಾರೆ. ಆದರೆ ನನ್ನ ಜೀವನದಲ್ಲಿ ನಿರಾಶೆಯನ್ನು ತುಂಬಿದಂತಹ ಜನವರ್ಗವೆಂದರೆ ಸಾಹಿತಿಗಳು. ಅವರಲ್ಲಿ ಎಷ್ಟೋ ಜನ ತಮ್ಮ ಶೀಲವನ್ನು ಕಳೆದುಕೊಂಡಿದ್ದಾರೆ, ಪ್ರಾಮಾಣಿಕತೆಯನ್ನೂ ಕಳೆದುಕೊಂಡಿದ್ದಾರೆ. ಕೇವಲ ಐದು ರೂಪಾಯಿಗೆ ತಮ್ಮ ಶೀಲವನ್ನು ಮಾರಿಕೊಂಡವರಿದ್ದಾರೆ. ಪ್ರಪಂಚದಲ್ಲಿರುವ ಮೂರ್ಖತನವನ್ನು ಅನೈತಿಕತೆಯನ್ನು, ಮತ್ತು ಅನ್ಯಾಯವನ್ನು ಖಂಡಿಸುವುದೇ ಸಾಹಿತಿಗಳ ಕೆಲಸ ಮತ್ತು ಧರ್ಮ. ನಾನು ಅದೇ ರೀತಿ ಬರೆದವನು. ಕಲಾವಿದ ಇದನ್ನು ಮಾಡುವುದರಲ್ಲಿ ಅಕ್ರಮವೇನೂ ಇಲ್ಲ. ಒಬ್ಬ ಕವನ ಬರೆದಿದ್ದಾನೆ ಅಂದರೆ, ಅದನ್ನು ಕಾಸುಕೊಟ್ಟು ಓದಿಕೊಳ್ಳಬಹುದು. ಚೆನ್ನಾಗಿ ಬರೆದರೆ ಇನ್ನೂ ಎರಡು ಕಾಸು ಸಂಪಾದಿಸುತ್ತಾನೆ. ಕೆಲವರು ಹೊಗಳಿಸಿಕೊಳ್ಳಲು ಕವನ ಬರೆಯುತ್ತಾರೆ, ಕೆಲವರು ಹಣ ಸಂಪಾದಿಸಿಕೊಳ್ಳಲು ಬರೆಯುತ್ತಾರೆ ಮತ್ತೆ ಕೆಲವರು ಗೌರವಕ್ಕೋಸ್ಕರ ಬರೆಯುತ್ತಾರೆ. ಒಬ್ಬನು ಕನ್ನಡಿಯ ಮುಂದೆ ನಿಂತು ನೋಡಿ, ಜಗತ್ತಿನ ಮುಂದೆ, ತಾನು ಮಾಡಿದ ಕೆಲಸ ಪ್ರಾಮಾಣಿಕವಾದುದೇ, ಮತ್ತು

ನಾನು ಸತ್ಯಯುತವಾದ ಬಾಳ್ವೆಯನ್ನು ಮಾಡಿದ್ದೇನೆಯೇ ಎಂದು ಪ್ರಶ್ನಿಸಿಕೊಂಡರೆ, ತನ್ನಷ್ಟಕ್ಕೆ ತಾನೇ ಅವನಿಗೆ ಅರ್ಥವಾಗುತ್ತದೆ – ತಾನು ಯಾವ ಬಾಳ್ವೆಯನ್ನು ಮಾಡಿದ್ದೇನೆ ಎಂದು. ನಾನು ಹಲವಾರು ಸಾಹಿತಿಗಳ ಜೀವನವನ್ನು ಕಂಡಿದ್ದೇನೆ. ಎಲ್ಲರೂ ತಮ್ಮ ಸಂಬಳ ಹೆಚ್ಚು ಮಾಡುವ ಮತ್ತು ಬಡ್ತಿಗಾಗಿ ಇನ್ನೊಬ್ಬರನ್ನು ಉರುಳಿಸಿ ಮೇಲಕ್ಕೇರುವ ಹವಣಿಕೆಯಲ್ಲಿ ಪ್ರಾಣಿಗಳ ಹಾಗೆ ಒಬ್ಬರು ಇನ್ನೊಬ್ಬರ ಮೇಲೆ ವ್ಯವಹರಿಸುವಂತೆ ಆಗಿದೆ.

ಯಕ್ಷಗಾನದಲ್ಲಿಯೂ ನನ್ನನ್ನು ಬಹಳ ಹೊಗಳಿ ಉಪಕಾರ ಮಾಡಿದರು. ಸ್ವಾತಂತ್ರ್ಯ ಹೋರಾಟದಲ್ಲಿ ದೇಶಕ್ಕಾಗಿ ತ್ಯಾಗ ಮಾಡಿದ ಜನ, ಸ್ವಾತಂತ್ರ್ಯ ಬಂದ ನಂತರ ದೇಶದಿಂದ ಸೇವೆ ಮಾಡಿಸಿಕೊಂಡಹಾಗೆ ನಾನು ಸೇವೆ ಮಾಡಿದ ಕಲೆಯ ವೇಷಗಳು ನನ್ನ ಸನ್ಮಾನದ ಸ್ವಾಗತಕ್ಕಾಗಿ ಕಾದು ನಿಂತಾಗ ಮನಸ್ಸಿಗೆ ಬಹಳ ನೋವಾಯಿತು. ಈ ಯಕ್ಷಗಾನಸೇವೆಯನ್ನು ನಾನು ನನ್ನ ಗೌರವವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಮಾಡಿದ್ದಲ್ಲ. ನನ್ನ ಸಂತೋಷಕ್ಕಾಗಿ ಮಾಡಿದ್ದೇನೆ. ಇದರಿಂದ ಬದುಕು ಚೆನ್ನಾಗಿ ಆಗಬೇಕು, ಜನರು ಅರಿಯಬೇಕೆಂದು ದುಡಿದಿದ್ದೇನೆ. ಇದರಿಂದ ನಾಲ್ಕು ಜನ ರಸಿಕರಾಗಿ ಸಂತೋಷಪಡಬೇಕು, ನಾಲ್ಕುನಗು ಮುಖಗಳನ್ನು, ಅರ್ಥ ಮಾಡಿಕೊಂಡು ಮಾತನಾಡುವ ನಾಲ್ಕು ಜನರನ್ನು ಕಾಣಬೇಕು ಎಂಬ ಹಂಬಲದಿಂದ ಇದನ್ನು ಮಾಡುತ್ತಿದ್ದೇನೆ. ಅದನ್ನು ಇಷ್ಟರವರೆಗೂ ಮಾಡಿದ್ದೇನೆ. ಮುಂದೆಯೂ ಕಷ್ಟವಾಗಲಾರದು. ಆದರೆ ದೇಹ ಸ್ವಲ್ಪ ತಾಪತ್ರಯ ಕೊಡಬಹುದು. ಹೀಗೆ ನನ್ನ ಜೀವನದ ಬಗ್ಗೆ ಆಡಿದಂತಹ ನಾಲ್ಕು ಮಾತುಗಳನ್ನು ತಾವು ನನ್ನ ಮೇಲೆ ಪ್ರೀತಿ ಇಟ್ಟು ಕೇಳುತ್ತಿದ್ದೀರಿ. ವಯಸ್ಸಿನಲ್ಲಿ ನಾನು ಸ್ವಲ್ಪ ಹಿರಿಯವನು. ದುಡುಕಿನಿಂದ ಹಲವಾರು ಮಾತುಗಳನ್ನು ಆಡಿರಬಹುದು. ಅನೇಕ ಸಾಹಿತಿಮಿತ್ರರು ಬಹಳ ದೂರದಿಂದ ಇಲ್ಲಿಗೆ ಬಂದಿದ್ದಾರೆ. ಒಬ್ಬೊಬ್ಬರನ್ನಾಗಿ ನನಗೆ ಕಾಣುವುದಕ್ಕಾಗಲಿಲ್ಲ. ಅವರ ಮನೆಗೆ ಹೋಗಿ ಊಟ ತಿಂಡಿ ಮಾಡಿ ಬಂದಿದ್ದರೂ, ದಾರಿಯಲ್ಲಿ ಸಿಕ್ಕಿದರೆ, ಅವರೇ ಸಂತೋಷದಿಂದ ನಾನು ಇಂಥವನು ಎಂದು ಹೇಳಿಕೊಳ್ಳಬೇಕಾದ ಪ್ರಸಂಗ ಬಂದಿದೆ. ತಾವು ಇವತ್ತು ನನಗೆ ತೋರಿಸಿದ ಸೌಜನ್ಯ, ಪ್ರೀತಿ, ವಿಶ್ವಾಸಕ್ಕಿಂತ ಹೆಚ್ಚಿನ ಬಹುಮಾನ ನನಗೆ ಇನ್ನು ಏನೂ ಬೇಕಾಗಿಲ್ಲ. ನನಗೆ ಬೇಕಾದ್ದು ಪ್ರೀತಿ ಒಂದೇ, ಸ್ನೇಹ ಒಂದೇ. ತಾವು ಅದನ್ನು ಧಾರಾಳವಾಗಿ ನನಗೆ ಕೊಟ್ಟಿದ್ದೀರಿ. ಈ ಸಂತೋಷವನ್ನು ಯಾವ ಪದವಿಯೂಕೊಡಲಾರದು, ಯಾವ ಭೂಷಣವೂ ಕೊಡಲಾರದು. ಇದರಿಂದಾಗಿ ನಾನು ಕನ್ನಡ ಜನತೆಗೆ ತುಂಬಾ ಋಣಿಯಾಗಿದ್ದೇನೆ.

# ವಿಶ್ವವಿದ್ಯಾನಿಲಯದ ಪಠ್ಯಪುಸ್ತಕಗಳು

ಅಧ್ಯಕ್ಷರು: ಎ. ಸೀತಾರಾಮಯ್ಯ

ಉದ್ಘಾಟನೆ: ದೇ. ಜವರೇ ಗೌಡ

ಸಂಚಾಲನ: ಕು. ಶಿ. ಹರಿದಾಸ ಭಟ್ಟ

ಪ್ರಬಂಧಗಳು: ಜೆ. ಆರ್. ಲಕ್ಷ್ಮಣರಾವ್

ಉದ್ಯಾವರ ಮಾಧವ ಆಚಾರ್ಯ

ಚರ್ಚೆ: ಶಿವರಾಮ ಕಾರಂತ

ವಿಚಾರಗೋಷ್ಠಿ – ೧

# ಕಾರಂತರು ಮೆರೆದ ಪವಾಡ

ಉದ್ಘಾಟನ ಭಾಷಣದಲ್ಲಿ

**ದೇ. ಜವರೇ ಗೌಡ**

ಕಡಲಕರೆಯ ಭಾರ್ಗವ ಶ್ರೀ ಕೋಟ ಶಿವರಾಮ ಕಾರಂತರನ್ನು ಅಭಿನಂದಿಸುವ ಸಲುವಾಗಿ ಏರ್ಪಡಿಸಲಾಗಿರುವ ಈ ಉತ್ಸವದ ಅಂಗವಾಗಿ 'ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ'ಗಳಿಗೆ ಸಂಬಂಧಪಟ್ಟಂತೆ ಈ ವಿಚಾರಗೋಷ್ಠಿಯನ್ನು ವ್ಯವಸ್ಥೆಗೊಳಿಸಿರುವುದು ಅತ್ಯಂತ ಸೂಕ್ತವಾಗಿದೆ. ತುಂಬ ಹರ್ಷದಿಂದ ಹಾಗೂ ಹೆಮ್ಮೆಯಿಂದ ನನಗೆ ಪ್ರಿಯವಾಗಿರುವ ಈ ಗೋಷ್ಠಿಯನ್ನು ಉದ್ಘಾಟಿಸುತ್ತೇನೆ. ಕಾರಂತರನ್ನು ಸನ್ಮಾನಿಸಲು ಸೇರಿರುವ ಈ ಸಂದರ್ಭದಲ್ಲಿ ವ್ಯಕ್ತಿ ಪ್ರಶಂಸೆಯನ್ನು ಗೌಣವಾಗಿಸಿ ಕಾರಂತರ ಧ್ಯೇಯಾದರ್ಶಗಳಿಗೆ ಉಚಿತವಾಗಿ ತೋರುವ ಇಂತಹ ವಿಚಾರಗೋಷ್ಠಿಯನ್ನು ಏರ್ಪಡಿಸಿರುವುದು ಕಾರಂತರಿಗೆ ಗೌರವ ತೋರುವ ಸಮುಚಿತ ವಿಧಾನವೆಂದೆನಿಸುತ್ತದೆ. ಸಾಹಿತ್ಯ ಕ್ಷೇತ್ರದಲ್ಲೆಂತೋ, ವಿಜ್ಞಾನ ಕ್ಷೇತ್ರದಲ್ಲೂ ಅದ್ವಿತೀಯ ವಿಕ್ರಮವನ್ನು ಸಾಧಿಸಿರುವ ಕಾರಂತರು ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಅಧ್ವರ್ಯುವಾಗಿದ್ದಾರೆ. ಕನ್ನಡ ಭಾಷೆಯ ಸಾಮರ್ಥ್ಯ ಶಕ್ತಿಗಳನ್ನರಿಯದೆ ಬೇಜವಾಬ್ದಾರಿಯುತವಾದ ಮಾತುಕತೆಗಳಲ್ಲಿ ತೊಡಗಿದ್ದ ಜನರು ಆಶ್ಚರ್ಯಪಡುವಂತೆ ಮಾಡಿ ಇಂತಹ ಸಾಹಸೋದ್ಯಮಗಳಲ್ಲಿ ನಿರತರಾಗಿದ್ದ ನಾಡು ನುಡಿಯ ಆರಾಧಕರು ಸಂತಸದಿಂದ ಹಿಗ್ಗುವಂತೆ ಮಾಡಿ ಕಾರಂತರು ಒಂದು ಪವಾಡವನ್ನೇ ಮೆರೆದಿದ್ದಾರೆ. 'ಬಾಲಪ್ರಪಂಚ' ಮತ್ತು 'ವಿಜ್ಞಾನ ಪ್ರಪಂಚ' ವ್ಯಕ್ತಿಯೊಬ್ಬನ ಶ್ರದ್ಧೆ, ನಿಷ್ಠೆ ಮತ್ತು ಸರ್ವಂಕಷ ಪ್ರತಿಭೆಯ ದ್ಯೋತಕವಾಗಿದೆಯೆಂಬುದು ಕನ್ನಡಿಗರಿಗೆ ಹೆಮ್ಮೆಯ ಸಂಗತಿಯಾಗಿದೆ.

ವಿಶ್ವವಿದ್ಯಾನಿಲಯದ ಪಠ್ಯಪುಸ್ತಕಗಳನ್ನು ಪ್ರಧಾನವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು. ಸಾಹಿತ್ಯ ಮತ್ತು ಸಾಹಿತ್ಯೇತರ (ಅಥವಾ ವಿಜ್ಞಾನ ಮತ್ತು ವಿಜ್ಞಾನೇತರ) ಪಠ್ಯಪುಸ್ತಕಗಳು. ಸಾಹಿತ್ಯ ಪಠ್ಯಪುಸ್ತಕಗಳ ವಿಚಾರ ಇಲ್ಲಿ ಅನಗತ್ಯ. ವಿಜ್ಞಾನ ಮತ್ತು ವಿಜ್ಞಾನೇತರ ಅಥವಾ ಮಾನವಿಕ ಶಾಸ್ತ್ರಗಳ ಪಠ್ಯಪುಸ್ತಕಗಳ ವಿಚಾರವನ್ನಿಲ್ಲಿ ಪರಿಗಣಿಸಬಹುದು. ಇವುಗಳ ವಿಚಾರವನ್ನು ಅರಿತು ನುರಿತ ವಿದ್ವಾಂಸರು ಪ್ರತ್ಯೇಕವಾಗಿ ಚರ್ಚಿಸಲಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಅಂಶಗಳ ವಿಚಾರದತ್ತ ಗಮನಸೆಳೆಯುವುದೇ ನನ್ನ ಉದ್ದೇಶ.

ವಿಶ್ವವಿದ್ಯಾನಿಲಯದ ಪಠ್ಯಪುಸ್ತಕಗಳನ್ನು ಶಿಕ್ಷಣದ ಮೂರು ಹಂತಗಳಿಗನುಗುಣವಾಗಿ ಸ್ನಾತಕ ಪೂರ್ವ, ಸ್ನಾತಕ ಮತ್ತು ಸ್ನಾತಕೋತ್ತರ ಸಂಬಂಧಿಗಳೆಂದು

ವಿಂಗಡಿಸಿಕೊಳ್ಳಬೇಕಾಗುತ್ತದೆ. ಇವುಗಳ ಜೊತೆಗೆ ಸಹಪಠ್ಯವೆನಿಸಿಕೊಳ್ಳುವ ಸಂದರ್ಭ ಗ್ರಂಥಗಳು ಅಥವಾ ಪರಾಮರ್ಶನ ಗ್ರಂಥಗಳನ್ನೂ ವಿಶೇಷಜ್ಞರಲ್ಲದ ಸಾಮಾನ್ಯ ಓದುಗರಿಗಾಗಿ ರಚಿಸಲಾಗಿರುವ ಗ್ರಂಥಗಳನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ, ಪ್ರತಿಯೊಂದು ಪಠ್ಯಪುಸ್ತಕವೂ ಕೆಲವು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ. ಮೊದಲನೆಯದಾಗಿ ಒಂದು ಮಟ್ಟದ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಪಠ್ಯಪುಸ್ತಕವನ್ನು ರಚಿಸಲಾಗುತ್ತದೆ. ಎರಡನೆಯದಾಗಿ, ನಿರ್ದಿಷ್ಟ ಪಠ್ಯಕ್ರಮವೊಂದನ್ನು ಅದು ದೃಷ್ಟಿಯಲ್ಲಿರಿಸಿಕೊಂಡಿರುತ್ತದೆ. ವಿಚಾರವೈಪುಲ್ಯ, ಚಿಂತನದ ಗಹನತೆ, ನಿರೂಪಣ ವಿಧಾನ ಮತ್ತು ಭಾಷೆಯು ಬಳಕೆ ಇವು ಆಯಾ ಮಟ್ಟಗಳಿಗನುಗುಣವಾಗಿ ಪ್ರಮಾಣದಲ್ಲಿ ಬೇರೆಯಾಗುತ್ತ ಬರುತ್ತವೆ. ಪ್ರೌಢಶಾಲೆಯ ಮಟ್ಟದಲ್ಲಿ ವಿದ್ಯುಚ್ಛಕ್ತಿಯ ವಿಚಾರ ತಿಳಿಯುವುದಕ್ಕೂ ಸ್ನಾತಕ ಮಟ್ಟದಲ್ಲಿ ವಿದ್ಯುಚ್ಛಕ್ತಿಯನ್ನೇ ಒಂದು ವಿಶೇಷ ಅಧ್ಯಯನ ವಿಷಯವಾಗಿ ಅಭ್ಯಸಿಸುವುದಕ್ಕೂ ವ್ಯತ್ಯಾಸವಿರಬೇಕಾದ್ದು ಸಹಜವೂ ಹೌದು, ಅನಿವಾರ್ಯವೂ ಹೌದು. ಸ್ನಾತಕ ಪೂರ್ವ ಮಟ್ಟದಲ್ಲಿ ಮೂಲಭೂತ ವಿಷಯಗಳನ್ನು ಮಾತ್ರ ತಿಳಿಯಾದ ಭಾಷೆಯಲ್ಲಿ ಸರಳವಾಗಿ, ಸುಲಭವಾಗಿ ಅರ್ಥವಾಗುವಂತೆ ತಿಳಿಸುವುದು ನಮ್ಮ ಉದ್ದೇಶವಾದರೆ ಸ್ನಾತಕೋತ್ತರ ಹಂತದಲ್ಲಿ ವಿಷಯವನ್ನು ಒಳಹೊಕ್ಕು ಆಮೂಲಾಗ್ರವಾಗಿ ಅಭ್ಯಸಿಸುವುದು ನಮ್ಮ ಧ್ಯೇಯವಾಗಿರುತ್ತದೆ. ಹೀಗಾಗಿ ಮೂಲದಲ್ಲಿ ಅಥವಾ ಪ್ರಾರಂಭಿಕ ಹಂತದಲ್ಲಿ ಕಿರುದೊರೆಯಾಗಿ ಹೊರಟ ಜ್ಞಾನವಾಹಿನಿ ಈ ಹಲವು ಹಂತಗಳನ್ನು ಹಾಯ್ದು ಬರುವ ಹೊತ್ತಿಗೆ ಸಾಗರೋಪಮವಾಗಿ ಬೆಳೆದಿರುತ್ತದೆ. ಅದರ ಆಳ-ಅಗಲಗಳು, ನಿಗೂಢ ಶಕ್ತಿಸಾಮರ್ಥ್ಯಗಳು ನಮಗೆ ಸವಾಲಾಗಿ ಪರಿಣಮಿಸುತ್ತವೆ.

ಇಂತಹ ಯೋಜನೆ ರೂಪುದಳೆಯಲು, ಕಾರ್ಯಾನ್ವಯಗೊಳ್ಳಲು ವ್ಯಕ್ತಿಗಳೂ ಶಕ್ತಿಗಳೂ ಕಾರಣವಾಗಬೇಕಾಗುತ್ತದೆ. ಜನತೆಯ ಬೇಡಿಕೆ ಮತ್ತು ಕಾಲದ ಅಗತ್ಯತೆ ಅಂತಹ ಶಕ್ತಿಯಾಗಿ, ಅದರ ಪಾಂಚಜನ್ಯ ಮೊಳಗಿದಾಗ ಬೇಡಿಕೆಯನ್ನು ಮೆಟ್ಟಿನಿಂತ ಕೃತ್ರಿಮ ಶಕ್ತಿಗಳೆಲ್ಲ ಪತನಮುಖಿಯಾಗುತ್ತವೆ. ಜನಸಾಮಾನ್ಯರ ಆಸೆ–ಆಕಾಂಕ್ಷೆಗಳ, ಧ್ಯೇಯೋದ್ದೇಶಗಳ ಪ್ರತೀಕವಾಗಿ, ಸಮಷ್ಟಿ ಶಕ್ತಿಯ ಸಾಕಾರರೂಪವಾಗಿ ವ್ಯಕ್ತಿಗಳು ಮುಂದೆ ಬರಬೇಕಾಗುತ್ತದೆ. ಎಲ್ಲ ರಾಷ್ಟ್ರಗಳ ಇತಿಹಾಸಗಳೂ ಈ ಸತ್ಯಕ್ಕೆ ಸಾಕ್ಷಿ ನುಡಿಯುತ್ತವೆ. ಲ್ಯಾಟಿನ್ನಿನ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಬೇಕಾದರೂ ಇಂಗ್ಲಿಷ್ ಭಾಷೆ ಇದೇ ರೀತಿಯಾಗಿ ಸೆಣಸಬೇಕಾಯಿತು. ಹಿಲ್ಲೇರ್ ಬೆಲ್ಲಾಕನ ಈ ಕೆಲವು ಮಾತುಗಳು ಗಮನಾರ್ಹವಾಗಿವೆ.

"When men were fully conscious of our cultural Unity in the West, they clung to the tradition of Latin which died hard. It is possible that this tradition will be revived but for the moment it has lost its efficacy." and *we are like a group of individuals without a common bond of comprehension with power of speech yet artificially dumb.* We need translation in Europe

more than ever we needed it before. We need it materially in the satisfaction of Common Life, for discovery to culture and is not of one Province".

ಇತಿಹಾಸದ ಪಾಠವನ್ನು ಕಲಿಯಲು ನಾವು ನಿರಾಕರಿಸಿದೆವು. ಶ್ರೀಸಾಮಾನ್ಯ ನೊಡನೆ ಸಹಜವಾದ ಸಂಬಂಧವನ್ನೇರ್ಪಡಿಸುವ ಭಾಷೆಯನ್ನು ಜ್ಞಾನಪ್ರಸರಣಕ್ಕೆ ಮಾಧ್ಯಮವಾಗಿ ಬಳಸಲಿಲ್ಲ. ಹೀಗಾಗಿ, ನುಡಿಗೆ ಶಕ್ತಿ ಇದ್ದರೂ, ನಾಲಿಗೆ ಉಡುಗಿ ಹೋಯಿತು. ಅರಿತ ಪ್ರಾಜ್ಞರೂ, ಶಿಕ್ಷಣವೇತ್ತರೂ ಏರುದನಿಯಲ್ಲಿ ಈ ದುರಂತ ಸತ್ಯವನ್ನು ಉದ್ಘೋಷಿಸಿದರೂ ಅಧಿಕಾರವರ್ಗ ಕಿವುಡಾಯಿತು. ಆದ್ದರಿಂದ ಬೇರೆಡೆಯಲ್ಲಿ ಜರುಗಿದ ಇತಿಹಾಸ ಇಲ್ಲಿಯೂ ಪುನರಾವರ್ತಿತವಾಯಿತು. ಶ್ರೀ ಕುವೆಂಪು ಅವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಈ ತತ್ವವನ್ನು ಅಂಗೀಕರಿಸಿತು. ದಶಕಗಳ ಹಿಂದೆಯೇ ಪ್ರಸಾರಾಂಗದಲ್ಲಿ ಪಠ್ಯಪುಸ್ತಕ ಯೋಜನೆಯೂ ರೂಪು ತಳೆದು ಮುನ್ನಡೆಯಿತು. ವಿಶ್ವವಿದ್ಯಾನಿಲಯದ ವಿವಿಧ ಹಂತಗಳಿಗಾಗಿ ಕನ್ನಡದಲ್ಲಿ ಪಠ್ಯ ಪುಸ್ತಕಗಳನ್ನು ಬರೆಸಲಾಯಿತು. ಆ ಆರಂಭ ಪ್ರಯತ್ನದ ಅಂಗವಾಗಿ ಹೊರಬಂದ ಪುಸ್ತಕಗಳೆಲ್ಲವೂ ಶ್ರೇಷ್ಠ ದರ್ಜೆಯವೆಂದು ನಾನು ಹೇಳುತ್ತಿಲ್ಲ. ಅವು ದೋಷದೂರ ವಾಗಿವೆಯೆಂದು, ವಿಷಯದ ದೃಷ್ಟಿಯಿಂದ ಸಮಗ್ರವಾಗಿವೆಯೆಂದು, ಮುದ್ರಣ ಹಾಗೂ ಚಿತ್ರಗಳ ದೃಷ್ಟಿಯಿಂದ ಅಚ್ಚುಕಟ್ಟಾಗಿವೆಯೆಂದು, ಅವುಗಳ ಪಾರಿಭಾಷಿಕ ಪದ ಸಾಮಗ್ರಿ ನಿರ್ದುಷ್ಟವಾಗಿದೆಯೆಂದು ನನಗನಿಸದು. ಶ್ರೀ ಕು. ಶಿ. ಹರಿದಾಸ ಭಟ್ಟರು ಹೇಳಿರುವಂತೆ "ಕನ್ನಡಮಾಧ್ಯಮದಲ್ಲಿ ವಿಷಯ ಜ್ಞಾನವನ್ನು ಗಳಿಸಿಕೊಳ್ಳಲು ಆಶಿಸುವ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಈ ಮಾಲೆಯ ಹಲವನ್ನು ಪುನರ್ವಿಮರ್ಶಿಸುವುದು, ಪುನರ್ರಚಿಸುವುದು ಉತ್ತಮವೆಂದು ತೋರುತ್ತದೆ." ಆದರೆ ಇದೊಂದು ಪ್ರಥಮ ಪ್ರಯತ್ನವೆಂದೂ, ಮುಂದಿನ ಪೀಳಿಗೆಗೆ ಬುನಾದಿಯೆಂದೂ ಯೋಚಿಸಿದಾಗ ಅದರ ಮ ಹತ್ತು ವಿದಿತವಾಗುತ್ತದೆ. ವಿದ್ವತ್ತಿನ ಪ್ರಾಗಲ್ಭ್ಯ, ಮತ್ತು 'ಶೈಲಿಯ ಓಜಸ್ಸು' ಎರಡೂ ಸೇರಿದಾಗ ಎಂತಹ ಉತ್ತಮ ಪಾಕ ಸಿದ್ಧವಾಗುವುದೆಂಬುದಕ್ಕೆ ನಿದರ್ಶನವಾಗುವಂತಹ ಹಲವು ಕೃತಿಗಳು ಬೆಳಕಿಗೆ ಬಂದಿವೆಯೆಂಬುದು ಸಮಾಧಾನದ ಸಂಗತಿ.

ಸಾಹಸವೇ ಸೋಲುಗೆಲುವುಗಳ ಮಾಲೆ. ಆದ್ದರಿಂದ ಕೈಗೊಂಡ ಕಾರ್ಯದಲ್ಲಿ ಎದೆಗೆಡದೆ ಶ್ರದ್ಧಾನಿಷ್ಠೆಗಳಿಂದ ಮುಂದುವರಿಯಬೇಕಾಗಿದೆ. ಕನ್ನಡನಾಡಿನ ದೈನಿಕಗಳು, ಸಾಪ್ತಾಹಿಕಗಳು, ಪಾಕ್ಷಿಕಗಳು, ನಿಯತಕಾಲಿಕಗಳು ಮತ್ತು ಅವುಗಳಿಗೆಲ್ಲ ನಾಯಕ ಸ್ಥಾನದಲ್ಲಿದ್ದ ಪ್ರಬುದ್ಧ ಕರ್ಣಾಟಕ, ಇತ್ತೀಚೆಗೆ ವಿಜ್ಞಾನಲೋಕ, ವಿಜ್ಞಾನ ಕರ್ಣಾಟಕ, ಕರ್ಣಾಟಕ ಭಾರತಿಗಳು ಕನ್ನಡ ವಿಜ್ಞಾನ ಭಾಷೆಯಾಗಲು ಸರ್ವಸನ್ನದ್ಧವಾಗಿದೆಯೆಂಬು ದನ್ನು ಸಾರಿಹೇಳುತ್ತಿವೆ. ಈ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಪ್ರಸಾರಾಂಗ ಸಾಧಿ ಸಿರುವ ಸಿದ್ಧಿಯನ್ನು ಮರೆಯುವಂತಿಲ್ಲ. ಈಗಾಗಲೇ ನಾನ್ನೂರಕ್ಕೂ ಮೇಲ್ಪಟ್ಟು ವಿವಿಧ ಶಾಖೆಗಳಿಗೆ ಸಂಬಂಧಿಸಿದ ವೈಜ್ಞಾನಿಕ ಗ್ರಂಥಗಳು ಪ್ರಕಟವಾಗಿವೆಯೆಂದು ಅಂದಾಜುಮಾಡಲಾಗಿದೆ. ಸರಿಯಾದ ವ್ಯವಸಾಯದಿಂದ ಕನ್ನಡ ಬಹು ಬೇಗನೆ ಸಮರ್ಥ ವೈಜ್ಞಾನಿಕ ಭಾಷೆಯಾಗಬಲ್ಲುದೆಂದು ಇಷ್ಟರಿಂದಲೇ ತಿಳಿಯುತ್ತದೆ. ಪಾರಿ

ಭಾಷಿಕ ಶಬ್ದಗಳು ಇಲ್ಲವೆಂಬ ಮಾತು ಕನ್ನಡಕ್ಕಂತೂ ಸರ್ವಥಾ ಅನ್ವಯಿಸುವುದಿಲ್ಲ. ಭಾಷೆ ಬೆಳೆಯುವುದು ಬಳಕೆಯಿಂದ; ಪ್ರತಿಭಾವಂತರ ಕ್ರಿಯಾಶೀಲತೆಯಿಂದ. ಒಂದು ಜನಾಂಗದ ಪ್ರತಿಭಾಸಾಮರ್ಥ್ಯಕ್ಕೆ ಆ ಭಾಷೆಯೇ ಸಾಕ್ಷಿ. ಭಾಷೆಯ ದರಿದ್ರತೆ ಆ ಜನಕ ರಿಕ್ತತೆಯನ್ನು ಪ್ರದರ್ಶಿಸುತ್ತದೆ. ಬುದ್ಧಿಪಂಗುತ್ವವನ್ನು ಸೂಚಿಸುತ್ತದೆ. ಪಾರಿಭಾಷಿಕ ಶಬ್ದಗಳ ಸಮಸ್ಯೆ ಕನ್ನಡದ ದೃಷ್ಟಿಯಿಂದ ಜಟಿಲವಾಗಿ ಕಂಡಿಲ್ಲ. ಅದರ ಮೂಲಸಂಪತ್ತು ಅಪಾರವಾಗಿದೆ. ಅದು ಗುಪ್ತ ನಿಧಾನದಂತೆ ಹಳ್ಳಿಕೊಂಪೆಗಳಲ್ಲಿ ನಿಘಂಟುಗಳಲ್ಲಿ ಅಜ್ಞಾತವಾಸವನ್ನು ಅನುಭವಿಸುತ್ತದೆ. ಎರಡು ಸಾವಿರ ವರ್ಷಗಳ ಹಿಂದೆಯೇ ಸಂಸ್ಕೃತ ಪ್ರಾಕೃತಗಳ ಸಂಬಂಧವನ್ನು ಬೆಳೆಸಿಕೊಂಡು, ಅಲ್ಲಿಯ ಶಬ್ದ ಸಂಪತ್ತನ್ನೆಲ್ಲಾ ಕನ್ನಡವಾಗಿಸಿಕೊಂಡಿದೆ. ಅದರ ಆಧಾರದ ಮೇಲೆ ವ್ಯಾಸ ವಾಲ್ಮೀಕಿಯರು ಕನಸುಕಾಣದ ನೂತನ ಪದ ಸಂಪತ್ತನ್ನು ವಿಪುಲವಾಗಿ ಬೆಳೆಸಿಕೊಂಡಿದೆ. ಜೊತೆಗೆ ತನ್ನ ಬಳಿಗೆ ಬಂದ ವಿದೇಶೀಯ ಭಾಷೆಗಳ ಸಾರಸಂಪತ್ತನ್ನು ಗರ್ಭೀಕರಿಸಿಕೊಂಡು, ಜೀರ್ಣಿಸಿಕೊಂಡು, ಶ್ರೇಷ್ಠಸ್ವೀಕರಣ ಭಾಷೆಯೆಂಬ ಹೆಸರಿಗೆ ಪಾತ್ರವಾಗಿದೆ. ಪಾರಿಭಾಷಿಕ ಪದಕೋಶ ಸಮೃದ್ಧವಾಗಿರುವ ಇಂಗ್ಲೀಷ್ ಭಾಷೆಯಲ್ಲಿ ಇರುವುದಾದರೂ ಸುಮಾರು 1,150 ಶಬ್ದ ಘಟಕಗಳು ಅಥವಾ ಪ್ರತ್ಯಯಗಳು. ಅವುಗಳಿಂದ ಸಹಸ್ರ ಸಹಸ್ರ ಶಬ್ದಗಳನ್ನು ನಿರ್ಮಿಸಲಾಗಿದೆ. ಸುಮಾರು 30,000 ಪಾರಿಭಾಷಿಕ ಶಬ್ದಗಳಿವೆಯೆಂದು ಹೇಳಲಾಗಿರುವ ವೈದ್ಯಶಾಸ್ತ್ರ ಮತ್ತು ಅಂಗರಚನಾ ಶಾಸ್ತ್ರ ಶಬ್ದಕೋಶಕ್ಕೆ ಆಧಾರವಾಗಿರುವುದು ಕೇವಲ 1,150 ಶಬ್ದ ಘಟಕಗಳು ಎಂದು ಹೇಳಲಾಗಿದೆ. W. E. Flood ಎಂಬ ವಿದ್ವಾಂಸನ ಮಾತುಗಳನ್ನೇ ಉದ್ಧರಿಸಬಹುದು;

"Despite the enormous size of the modern vocabulary of Science, the basic elements from which the words have been constructed are comparatively few. This book lists about 1,150 word-elements. They have produced, and will go on producing, tens (or probably hundreds) of thousands of words. A large proportion of the words, have been built up from a much smaller number of elements. The greater part af the vocabulany of medicinc and anatomy-perhaps 30,000 words-has been constructed by the use of only about 150 standard word elements and the names of the parts of the body".

ಈ ಮಾತು ಕನ್ನಡದ ವಿಚಾರದಲ್ಲಿಯೂ ಸತ್ಯವೆಂಬುದನ್ನು ಈಗಾಗಲೇ ಅಚ್ಚಾಗುತ್ತಿರುವ ಡಾ. ಡಿ. ಎಸ್. ಶಿವಪ್ಪನವರ ವೈದ್ಯಶಾಸ್ತ್ರಕೋಶ (ಸುಮಾರು 350 ಪುಟಗಳು) ಸ್ಪಷ್ಟಪಡಿಸಲಿದೆ. ದಿ. ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು ಹೇಳಿರುವಂತೆ "ಈ ಶಾಸ್ತ್ರಗಳು ಬೆಳೆದಿರುವುದು ಮುಖ್ಯವಾಗಿ ಆಯಾ ಶಾಸ್ತ್ರಜ್ಞರಿಗೆ ಇರುವ ಜ್ಞಾನ ಪಿಪಾಸೆಯಿಂದ, ಸ್ವಾಭಾವಿಕ ಪ್ರವೃತ್ತಿಯಿಂದ, ಸಂಸ್ಕಾರ ವಿಶೇಷಗಳಿಂದ." ಸುಮಾರು ಒಂದು ಶತಮಾನಕ್ಕೆ ಹಿಂದೆಯೇ ಅಂಗರಚನಾಶಾಸ್ತ್ರ ಮತ್ತು ಪ್ರಸೂತಿ ಶಾಸ್ತ್ರಗಳಿಗೆ

ಸಂಬಂಧಿಸಿದ ಗ್ರೇಯ ಗ್ರಂಥಗಳನ್ನು ತಮಿಳಿಗೆ ಭಾಷಾಂತರಿಸುವುದು ಸಾಧ್ಯವಾಗಿದ್ದರೆ, ಇಂದು ಕನ್ನಡಕ್ಕೆ ಆ ಗ್ರಂಥಗಳನ್ನು ತಂದುಕೊಳ್ಳುವುದು ಕಷ್ಟ ಎಂಬ ಸೊಲ್ಲು ಹುರುಳಿಲ್ಲದ್ದಾಗುತ್ತದೆ. ಏಕೆಂದರೆ ಕನ್ನಡ ಮಡಿವಂತಿಕೆಯಿಂದ ಕುಬ್ಜವಾಗಿಲ್ಲ, ಪುರುಷಸೂಕ್ತದ ಸಹಸ್ರ ಶೀರ್ಷ ಸಹಸ್ರಬಾಹು ಪುರುಷನಂತೆ ಬೆಳೆದು ನಿಂತಿದೆ.

ಇದಕ್ಕೆ ಇರುವ ಅಡಚಣೆಗಳೇ ಬೇರೆ. ಒಂದೆಡೆ ನಮ್ಮಲ್ಲಿ ತುಂಬಿ ತುಳುಕುತ್ತಿರುವ ಔದಾಸೀನ್ಯ, ನಿರ್ಲಕ್ಷ್ಯ, ಅಲ್ಪತೃಪ್ತಿ, ಆತ್ಮಘಾತಕ ಔದಾರ್ಯ ಇದಕ್ಕೆ ಕಾರಣವಾದರೆ ಇನ್ನೊಂದೆಡೆ ಸುಸಂಘಟಿತ ಪ್ರಯತ್ನದ ಇಲ್ಲದಿಕೆಯೂ ಕಾರಣವಾಗಿದೆ. ಪ್ರತಿಭಾವಂತರೂ, ಜ್ಞಾನಪಿಪಾಸುಗಳೂ, ದಕ್ಷರೂ ಸಮರ್ಥರೂ ಆದ ವಿದ್ವಾಂಸರಿಗೆ ನಮ್ಮಲ್ಲಿ ಕೊರತೆಯಿಲ್ಲ. ಕೊರತೆಯಿರುವುದು ಉತ್ಸಾಹ, ಪ್ರೋತ್ಸಾಹ ಮತ್ತು ಸಂಘಟನೆಯಲ್ಲಿ. ಇದನ್ನು ಕಂಡೇ ಮೈಸೂರು ವಿಶ್ವವಿದ್ಯಾಲಯ ಮೂರು ವರ್ಷಗಳ ಹಿಂದೆ ಕನ್ನಡ ಅಧ್ಯಯನ ಸಂಸ್ಥೆಯ ಅಂಗವಾಗಿ ಪಠ್ಯಪುಸ್ತಕ ಮತ್ತು ಭಾಷಾಂತರ ವಿಭಾಗವನ್ನು ಸ್ಥಾಪಿಸಿತು. ಶ್ರೀ ಕುವೆಂಪು ಅವರ ಅಧಿಕಾರಾನಂತರ ಎರಡು ಮೂರು ವರ್ಷ ಹಿಂದೇಟು ಹೊಡೆದಿದ್ದ ಭಾಷಾ ನೀತಿ ಡಾ. ಶ್ರೀಮಾಲಿಯವರ ಪ್ರಬಲ ನೇತೃತ್ವದಲ್ಲಿ ಇಮ್ಮಡಿ ಹುರುಪಿನಿಂದ ಪುನಶ್ಚೇತನಗೊಂಡಿತು. ಈಚೆಗೆ ರಾಜ್ಯ ಮತ್ತು ಕೇಂದ್ರ ಸರಕಾರದ ನೆರವು ದೊರೆತಿದ್ದರಿಂದ, ಕನ್ನಡನಾಡಿನ ನಾಲ್ಕು ವಿಶ್ವವಿದ್ಯಾಲಯಗಳಲ್ಲಿಯೂ ಪಠ್ಯಪುಸ್ತಕ ರಚನೆಯ ಕಾರ್ಯ ಭರದಿಂದ ಸಾಗುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯವನ್ನೇ ತೆಗೆದುಕೊಂಡರೂ ಈ ಪ್ರಗತಿಯ ನೋಟ ನಮಗೆ ಕಾಣದೊರೆಯುತ್ತದೆ. ಈಗಾಗಲೇ ಕನ್ನಡ ಅಧ್ಯಯನ ಸಂಸ್ಥೆ 20 ಗ್ರಂಥಗಳನ್ನು ಹೊರತಂದಿದೆ. ಈ ವರ್ಷಾಂತ್ಯದೊಳಗಾಗಿ 25 ಗ್ರಂಥಗಳು ಹೊರಬರಲಿವೆ. ಸುಮಾರು 180 ಲೇಖಕರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ರಚಿಸುವುದರಲ್ಲಿ ನಿರತರಾಗಿದ್ದಾರೆ. ಮುಂದಿನ ಎರಡು ಮೂರು ವರ್ಷಗಳಲ್ಲಿ ಸುಮಾರು 250 ಗ್ರಂಥಗಳು ಹೊರಬರುವ ನಿರೀಕ್ಷೆಯಿದೆ. ಇವುಗಳ ಜೊತೆಗೆ ಪ್ರಸಾರಾಂಗವೂ ವರ್ಷೇ ವರ್ಷೇ ಇಮ್ಮಡಿಯಾಗಿ ಕಿರಿ ಹಾಗೂ ಹಿರಿ ಹೊತ್ತಗೆಗಳನ್ನು ಪ್ರಕಟಿಸುತ್ತಿದೆ. ಖಾಸಗಿ ಪ್ರಕಾಶಕರು ಈಚೀಚೆಗೆ ವೈಜ್ಞಾನಿಕ ಗ್ರಂಥಗಳನ್ನು ಹೊರತರುತ್ತಿದ್ದಾರೆ. ಗ್ರಂಥ ಕರ್ತರಿಗೆ ನೆರವಾಗುವ ದೃಷ್ಟಿಯಿಂದ ಪಾರಿಭಾಷಿಕ ಶಬ್ದಕೋಶಗಳನ್ನು ಹೊರತರುವ ಯೋಜನೆಯೂ ಜೊತೆ ಜೊತೆಯಲ್ಲಿ ಸಾಗುತ್ತಿದೆ. ಮನೋವಿಜ್ಞಾನ ಕೋಶ ಈಗಾಗಲೇ ಪ್ರಕಟವಾಗಿದೆ.

ಪಠ್ಯಪುಸ್ತಕ ಯೋಜನೆಯಲ್ಲಿ ಅನುವಾದಗಳಿಗೂ ಪ್ರಮುಖ ಸ್ಥಾನವನ್ನು ನೀಡಲಾಗಿದೆ. ಪ್ರಸಿದ್ಧ ಪ್ರಮುಖ ಗ್ರಂಥಗಳನ್ನು ಸಂದರ್ಭ ಗ್ರಂಥಗಳನ್ನು ಅನುವಾದಿಸಲಾಗುತ್ತಿದೆ. ಇಂಗ್ಲೀಷ್ ಸಾಹಿತ್ಯದ ಇತಿಹಾಸವನ್ನು ಬಲ್ಲವರಿಗೆ ಅದರ ಬಹುಭಾಗ ಅನುವಾದಿತ ಸಾಹಿತ್ಯವೆಂಬುದು ತಿಳಿದಿದೆ. ಇಂಥ ಕಾರ್ಯ ಕನ್ನಡಕ್ಕೆ ತುಷ್ಟಿ ಮತ್ತು ಪುಷ್ಟಿಯನ್ನು ನೀಡುತ್ತದೆ. ಪುಸ್ತಕಗಳನ್ನು ರಚಿಸುವವರಿಗೆ ಪ್ರೋತ್ಸಾಹ ನೀಡಲೂ ಹಲವು ಕ್ರಮಗಳನ್ನು ಕೈಗೊಳ್ಳಲಾಗಿದೆ. ಸಂಭಾವನೆಯ ಹಣವನ್ನು ಪುಸ್ತಕ ಬಿಡುಗಡೆಯಾದೊಡನೆಯೇ ಇಡಿಗಂಟಾಗಿ ಕೊಡಲಾಗುತ್ತಿದೆ. ಪ್ರಕಟಣೆಗೆ ಸ್ವೀಕರಿಸಿದ ತರುಣದಲ್ಲಿಯೇ ಅನುವಾದ ಗ್ರಂಥಗಳಿಗೆ ಸಂಭಾವನೆಯ ಒಂದು ಭಾಗವನ್ನು ನೀಡಲಾಗುತ್ತದೆ.

ಇವೆಲ್ಲಕ್ಕಿಂತ ಮುಖ್ಯವಾದುದು ಬಹುಮಾನ ಯೋಜನೆ, ಎಲ್ಲ ಭಾಗಗಳ – ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳು – ಅತ್ಯುತ್ತಮ ಗ್ರಂಥಗಳಿಗೆ ನಗದು ಬಹುಮಾನಗಳನ್ನು ನೀಡುವ ಯೋಜನೆಯೂ ಶೀಘ್ರವಾಗಿ ಜಾರಿಗೆ ಬರಲಿದೆ. ಈ ಎಲ್ಲ ಕಾರ್ಯಕ್ರಮ ಗಳಿಂದ ನಮ್ಮ ಉದ್ದೇಶ ಸಾಧನೆಯತ್ತ ವೇಗವಾಗಿ ಮುನ್ನಡೆಯಬಹುದು.

ನಮ್ಮ ಲೇಖಕರಿಗೆ ಇಂದು ಅಗತ್ಯವಾಗಿರುವುದು ಬರಹದ ತರಬೇತಿ. ಕನ್ನಡದ ಜಾಯಮಾನಕ್ಕನುಗುಣವಾಗಿ ಭಾಷೆಯನ್ನು ಬಳಸುವ ವಿಚಾರದಲ್ಲಿ ಲೇಖಕರಿಗೆ ತರಬೇತಿ ಯನ್ನು ನೀಡಿದರೆ, ಪುಸ್ತಕಗಳ ಶೈಲಿ ತಾನೇ ತಾನಾಗಿ ಸುಧಾರಿಸುತ್ತದೆ. ಈ ದೃಷ್ಟಿ ಯಿಂದ ಲೇಖಕರ ಶಿಬಿರಗಳನ್ನು ಏರ್ಪಡಿಸುವುದು ಸೂಕ್ತವಾಗಿ ತೋರುತ್ತದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈ ಯೋಜನೆಯನ್ನು ಆದಷ್ಟು ಜಾಗ್ರತೆ ಕಾರ್ಯಗತಗೊಳಿಸ ಬೇಕೆಂದು ಯೋಚಿಸಿದ್ದೇನೆ.

ಈ ಮೊದಲೇ ಹೇಳಿದಂತೆ ನಮ್ಮ ದಕ್ಷ, ಅನುಭವಿ, ಪ್ರತಿಭಾವಂತ ಪ್ರಾಧ್ಯಾಪ ಕರು ಮನಸ್ಸು ಮಾಡಿದರೆ ಕನ್ನಡಕ್ಕೆ ಪಠ್ಯಪುಸ್ತಕಗಳ ಅಭಾವ ಇರಲಾರದು. ಸತತ ಅಧ್ಯಾಪನ, ಸಂಶೋಧನ ಮತ್ತು ಅಧ್ಯಯನ ಪ್ರವೃತ್ತಿಗಳ ಪರಿಜ್ಞಾನವಿರುವ ಅವರು ಹತ್ತಾರು ಮೂಲ ಪುಸ್ತಕಗಳ ಅಧ್ಯಯನದ ಫಲವಾಗಿ ರಚಿಸುವ ಹನ್ನೊಂದನೆಯ ಪುಸ್ತಕ ಅತ್ಯಾಧುನಿಕ ಇಂಗ್ಲಿಷ್ ಪಠ್ಯಪುಸ್ತಕಕ್ಕಿಂತಲೂ ಉತ್ತಮ ಪಠ್ಯಪುಸ್ತಕವಾಗು ತ್ತದೆಂಬುದರಲ್ಲಿ ನನಗೆ ಸಂದೇಹವಿಲ್ಲ.

ವಿಜ್ಞಾನ ಮತ್ತು ಮಾನಸಿಕ ಶಾಸ್ತ್ರಗಳ ಕ್ಷೇತ್ರಗಳಲ್ಲಿ ನಡೆದಿರುವ ಕಾರ್ಯದ ಸಮೀಕ್ಷೆಯನ್ನು ಮುಂದರಿಸಲಿರುವ ವಿದ್ವಾಂಸರು ಈ ಕ್ಷೇತ್ರಗಳಲ್ಲಿ ನಡೆದಿರುವ ಪ್ರಗತಿ ಯನ್ನು ಎದುರಿಸಬೇಕಾಗುವ ಸಮಸ್ಯೆಗಳನ್ನು ವಿಶದಪಡಿಸಲಿದ್ದಾರೆ. ಪ್ರಾಸ್ತಾವಿಕವಾಗಿ ಈ ಪ್ರಗತಿಯ ಚರಣಚಿಹ್ನೆಗಳನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದೇನೆ. ಇಂತಹ ವಿಚಾರ ಗೋಷ್ಠಿಗಳು ಹೆಚ್ಚು ಹೆಚ್ಚಾಗಿ ನಡೆದು ಜನತೆಯ ಒಂದು ಭಾಗವನ್ನು ಅವರನ್ನಾವರಿಸಿ ರುವ ಭ್ರಮೆಯಿಂದ ದೂರಮಾಡಲಿ; ಪ್ರಗತಿಯ ನಿಜವಾದ ಹಾದಿಯಲ್ಲಿ ನಾಡು ಮುಂದುವರಿದು ಭಾವೈಕ್ಯ, ಬುದ್ಧಿದಾಸ್ಯವಿಮೋಚನೆ, ವರ್ಗಭೇದ ನಿರ್ಮೂಲನ, ಸಮಷ್ಟಿ ಪ್ರಜ್ಞೆಯ ಜಾಗೃತಿ, ಸರ್ವೋದಯ ಸಮಾಜದ ಉದಯ ಇವೇ ಮೊದಲಾದ ಧ್ಯೇಯಗಳನ್ನು ಸಾಧಿಸಲು ನೆರವಾಗಲಿ ಎಂದು ಆಶಿಸುತ್ತೇನೆ.

# ಕಾರ್ಯಕ್ರಮ ಹೇಗೆ?

ಕು. ಶಿ. ಹರಿದಾಸ ಭಟ್ಟ

ಮಾನ್ಯ ಉಪ ಕುಲಪತಿಗಳ ಭಾಷಣದ ನಂತರ ಏನು ಮಾಡಬೇಕೆಂಬುದನ್ನು ನಾನು ಸೂಚಿಸಬೇಕಾಗಿದೆ. ಇದಕ್ಕೆ ಕಾರಣ – ಈ ಗೋಷ್ಠಿಯ ಅಧ್ಯಕ್ಷರು ನನಗೆ ಅದೇ ಪ್ರಶ್ನೆಯನ್ನು ಕೇಳಿದ್ದಾರೆ. "ನನಗೆ ಏಕೆ ಕರೆದಿದ್ದೀರಿ; ನಾನು ಏನು ಮಾಡಿದ್ದೇನೆಂದು ಕರೆದಿರಿ" ಅಂತ ಕೇಳಿದ್ದಾರೆ. ಅವರು ಮಾಡಿದ ಅಪರಾಧವೆಂದರೆ, ಅವರು ಬರೆದ "ಹಣದ ಪ್ರಪಂಚ". ಆದರಿಂದ ನಾವು ಪ್ರಚೋದಿತರಾಗಿ ಈ ಕೆಲಸ ಮಾಡಲು ಅವರೇ ಸಮರ್ಥರೆಂದು ಭಾವಿಸಿ ಅವರನ್ನು ಇಲ್ಲಿ ಕರೆದಿದ್ದೇವೆ. ಇನ್ನು ಮುಂದಿನ ಕಾರ್ಯಕ್ರಮದಲ್ಲಿ ಸಾಹಿತಿಗಳು ಪ್ರತ್ಯಕ್ಷವಾಗಿ ಭಾಗವಹಿಸತಕ್ಕದ್ದು. ಆ ಕಾರ್ಯಕ್ರಮ ಹೇಗೆ ಎನ್ನುವುದನ್ನು ಸೂಚಿಸುತ್ತೇನೆ. ಮೊದಲನೆಯ ಪ್ರಬಂಧಕಾರರಾದ ಜೆ. ಆರ್ ಲಕ್ಷ್ಮಣರಾಯರ ಪ್ರಬಂಧದ ಮೇಲೆ ಅರ್ಧ ಗಂಟೆ ಚರ್ಚೆ ನಡೆಯುತ್ತದೆ. ಆ ಚರ್ಚೆಯ ಇತಿಮಿತಿಯನ್ನು ಎಲ್ಲಾ ಸೂಚಿಸುವವರು ಪ್ರೊ. ಸೀತಾರಾಮಯ್ಯನವರು. ಸಾಹಿತ್ಯಜ್ಞರು ಮಾತ್ರವಲ್ಲದೆ, ಉಳಿದ ಸಾಹಿತ್ಯ ಪ್ರೇಮಿಗಳೂ ಕೂಡಾ ಏನಾದರೂ ಸಂಶಯ ಇದ್ದರೆ, ಅದನ್ನು ಬರೆದಿಡುವುದಕ್ಕೋಸ್ಕರ, ಅಪೇಕ್ಷೆ ಪಟ್ಟಲ್ಲಿ, ಕಾಗದಗಳನ್ನು ಸರಬರಾಜು ಮಾಡುತ್ತೇವೆ. ಮೂವತ್ತು ಮಿನಿಟು ಚರ್ಚೆಯ ಬಳಿಕ ಎರಡನೆಯ ಪ್ರಬಂಧ. ಅದರ ಬಗ್ಗೆ ಉಂಟಾಗತಕ್ಕ ಪ್ರಶ್ನೆಗಳನ್ನು ಪ್ರೊ. ವಿ. ಸಿ.ಯವರ ಹತ್ತಿರ ಕೊಡಬಹುದು. ಅವರು ಅವುಗಳಲ್ಲಿ ಯೋಗ್ಯವಾದ ಪ್ರಶ್ನೆಯನ್ನು ಆರಿಸಿ ಉತ್ತರವನ್ನು ಕೊಡುವುದಕ್ಕೆ ಪ್ರಬಂಧಕಾರರಿಗೆ ಕೊಡಬಹುದು, ಅಥವಾ ಇತರ ಸಮರ್ಥರಾದವರು ಯಾರಾದರೂ ಉತ್ತರ ಕೊಡಬಹುದು. ನೆರೆದ ಸಾಹಿತಿಗಳ ಪೈಕಿ ಈ ವಿಚಾರವಾಗಿ ಯೋಚನೆ ಮಾಡಿಕೊಂಡು ಬರಬೇಕೆಂದು ಹೇಳಿದ್ದೇವೆ. ಕೆಲವರು ತಕ್ಷಣ ಯೋಚನೆ ಮಾಡಬಲ್ಲವರು ಇದ್ದಾರೆ. ಮತ್ತಿತರರು ಯೋಚಿಸಿ ಉತ್ತರ ಕೊಡಬಹುದು. ಎಲ್ಲರೂ ಈ ವಿಚಾರ ಗೋಷ್ಠಿಯನ್ನು ವಿಚಾರ ಗೋಷ್ಠಿಯಾಗಿ ಪರಿವರ್ತಿಸಬೇಕೆಂದು ಕೇಳಿಕೊಂಡು ಪ್ರೊ. ವಿ. ಸೀ. ಅವರಿಗೆ ಇದರ ಅಧ್ಯಕ್ಷಸ್ಥಾನವನ್ನು ಒಪ್ಪಿಸಿಬಿಡುತ್ತೇನೆ.

# ಒಳ್ಳೆಯ ಪಠ್ಯ ಭೂಗೋಳದ ನಕ್ಷೆ ಇದ್ದ ಹಾಗೆ

ಅಧ್ಯಕ್ಷಸ್ಥಾನದಿಂದ

ಎ. ಸೀ.

ಡಾ. ಚಟರ್ಜಿಯವರೇ, ಮಾನ್ಯ ಕಾರಂತರೇ, ಮತ್ತು ಬಂಧುಗಳೇ: ಭಟ್ಟರು ಕಾಗದ ಬರೆದಾಗ, ನಾನು ಟೆಕ್ಸ್ಟ್‌ಬುಕ್ಸ್ ನೇರವಾಗಿ ಬರೆದವನಲ್ಲ, ನನ್ನ ಏಕೆ ಕರೆದಿದ್ದೀರಿ ಎಂದು ಕೇಳಿದ್ದೇನೆ. ಈ ಸಮಾರಂಭಕ್ಕೆ ನನ್ನ ಪ್ರತ್ಯೇಕವಾಗಿ ಕರೆಯ ಬೇಕಾಗಿಲ್ಲ. ನಾನು ಕಾರಂತರ ಯಾವ ಸಮಾರಂಭಕ್ಕಾದರೂ ಬಂದೇ ಬರುತ್ತೇನೆ. ಅವರು ನಾನು ಯಾವುದೋ ಒಂದು ಕಾಲದಲ್ಲಿ ಮಾಡಿದಂತಹ ಅಪರಾಧಕ್ಕೋಸ್ಕರ ಇದನ್ನು ನಿಮಗೆ ಒಪ್ಪಿಸಿದ್ದೇವೆಂದು ಹೇಳಿದರು. ಆ ಅಪರಾಧವೇನೆಂಬುದು ನಾಕಾಣೆ. ಅದನ್ನು ಬರೆದಾಗ ಮೈಸೂರು ಯುನಿವರ್ಸಿಟಿಯಲ್ಲಿ ಕೆಲವು ಗ್ರಂಥಗಳನ್ನು ಬರೆಯ ಬೇಕೆಂದು ಪ್ರಯತ್ನ ನಡೆಯಿತು. ಆಗ ನನ್ನ ಗುರುಗಳಾದ ಎನ್. ಎಸ್. ಸುಬ್ಬರಾಯರು, ಸಾಹಿತ್ಯ ಬರೆಯುವುದಕ್ಕೆ ಮತ್ತು ಶಾಸ್ತ್ರ, ಅಲಂಕಾರ ಇತ್ಯಾದಿ ಬರೆಯುವುದಕ್ಕೆ ಬೇಕಾದಷ್ಟು ಜನರಿದ್ದಾರೆ, ಆದರೆ ಎಕನಾಮಿಕ್ಸ್ ಪೊಲಿಟಿಕಲ್ ಸಾಯನ್ಸ್ ಮುಂತಾದುವುಗಳನ್ನು ಬರೆಯಬೇಕು, ನೀನಂತೂ ಹೇಗಾದರೂ ಓದಿದ್ದೀಯಾ, ಎಂದು ಹೇಳಿದರು. ನಾನು ಒಂದು600 ಪುಟದ ಪುಸ್ತಕ ತಯಾರಿಸಿದೆ. ಆದರೆ ಆ ಗ್ರಂಥ 200-250 ಪುಟಗಳ ಒಳಗೆ ಇರಬೇಕಾಗಿತ್ತು ಎಂದು ಅದರಲ್ಲಿ ಅನೇಕ ಪುಟಗಳನ್ನು ತೆಗೆದು ಹಾಕಿ ಅಚ್ಚು ಮಾಡಬೇಕಾಗಿ ಬಂತು. ಟೆಕ್ಸ್ಟ್ ಬುಕ್ ಎಂಬ ಪದವನ್ನು ಸುಮಾರು ಎರಡು ಅರ್ಥದಲ್ಲಿ ಬಳಸಬಹುದು. (1) ಒಂದು – ನಾವು ಯಾವುದನ್ನು ತರಗತಿಗಳಿಗೆ – ಅಂದರೆ ಪಿ. ಯು. ಸಿ ಯಿಂದ ಹಿಡಿದು ಬಿ. ಎ. ಪಾಸ್ ಮಾಡುವ ವರೆಗೆ ಓದಲೇ ಬೇಕೆಂಬುದಾಗಿ ಕಡ್ಡಾಯ ಮಾಡುತ್ತೇವೋ ಅವು ಟೆಕ್ಸ್ಟ್ ಬುಕ್‌ಗಳು. ಅದರ ಉದ್ದೇಶ: ಅವರು ಮನೆಯಲ್ಲಿ ಓದಬೇಕು, ಶಕ್ಯವಾದರೆ ಕ್ಲಾಸಿಗೆ ಬರುವಾಗ ತರಬೇಕು. ಕ್ಲಾಸಿನಲ್ಲಿ ತಂದು ಅದಕ್ಕೆ ಸಂಬಂಧಪಟ್ಟ ಹಿಂದುಮುಂದಿನ ವಿಷಯುಗಳನ್ನು ಹೇಳಬೇಕು. ಆದರೆ, ಪಠ್ಯ ಪುಸ್ತಕಗಳನ್ನು ನಿಯಮಿಸುವಾಗ ಯಾವುದನ್ನು ಸಾಹಿತ್ಯವೆಂದು ತಿಳಿದುಕೊಂಡಿದ್ದೇವೆಯೋ, ಅಂಥವನ್ನು ಇಡುವುದುಂಟು. (2) ಎರಡನೇಯದು – ಓದುವ ಹುಡುಗರಿಗೆ ಪ್ರಯೋಜನ ಆಗಬೇಕು, ಸಂತೋಷವಾಗಬೇಕು, ಇವೆರಡನ್ನೂ ದೊರಕಿಸವಂಥ ಪಠ್ಯಪುಸ್ತಕಗಳನ್ನು ವಿಧಿಸುತ್ತಾರೆ. ಅನೇಕ ವೇಳೆ, ಓದಬೇಕೆಂದು ಮಾಡಿದ ಪುಸ್ತಕಗಳು ವಿದ್ಯಾರ್ಥಿಗಳಿಗೆ ಸಂತೋಷ ತರುವುದಿಲ್ಲ, ಪಾಠ ಹೇಳುವವರಿಗೂ ಕಷ್ಟವಾಗುತ್ತದೆ. ಹುಡುಗರ ತಲೆಯ ಮೇಲೆ ನಿಂತು ಪಾಠ ಹೇಳಬೇಕಾಗುತ್ತದೆ.

ಏನು ಮಾಡಿದರೂ ನಮಗೆ ಕಷ್ಟವೇನೆಂದರೆ, ಹುಡುಗರಿಗೆ ಏನೂ ಇದರಿಂದ ಪ್ರಯೋಜನವಾಗುವುದಿಲ್ಲ. ಆದ್ದರಿಂದ ಹುಡುಗರಿಗೆ ಇದರಿಂದ ಪ್ರಯೋಜನವೂ ಆಗಬೇಕು, ಮತ್ತು ಉಪಾಧ್ಯಾಯರುಗಳಿಗೆ ಪಾಠ ಹೇಳುವುದಕ್ಕೂ ಅನುಕೂಲಕರವಾದ ವಿಷಯ ಇರಬೇಕು. ಅಂತಹ ಪಠ್ಯ ಪುಸ್ತಕಗಳನ್ನು ನೇಮಿಸಬೇಕು. ಒಂದು ಯಾವ ವಿಷಯ ಇಟ್ಟುಕೊಂಡು ಪಠ್ಯ ಪುಸ್ತಕ ಮಾಡುತ್ತಾರೆ, ಅದರಲ್ಲಿ, ಆ ವಿಷಯಕ್ಕೆ ಸಂಬಂಧಪಟ್ಟ ಒಂದು ಒಟ್ಟು ಸ್ವರೂಪ ಗೊತ್ತಾಗುವಂತೆ ಬೇರೆ ಬೇರೆ ಭಾಗ ಇದ್ದರೆ ಚೆನ್ನಾಗಿರುತ್ತದೆ. ಇಂದು ನಾನು ಸಾಯನ್ಸ್ ವಿಚಾರ ಸದ್ಯಕ್ಕೆ ಯಾವುದೂ ಹೇಳುವುದಿಲ್ಲ. ಸೈನ್ಸ್ (ಶಾಸ್ತ್ರ)ನಲ್ಲಿ, ಸಮಾಜ ಶಾಸ್ತ್ರ ಬರುತ್ತದೆ, ವಿಜ್ಞಾನ ಶಾಸ್ತ್ರ ಬರುತ್ತದೆ, ಟೆಕ್ನಾಲಜಿ ಬರುತ್ತದೆ, ಮನಸ್ಸಿಗೆ ಸಂಬಂಧಪಟ್ಟ ಶಾಸ್ತ್ರ ಬರುತ್ತದೆ, ಧರ್ಮ ಎಂಬ ಶಾಸ್ತ್ರ ಬರುತ್ತದೆ. ಇಲ್ಲಿಯೂ ಕೆಲವು ಪಠ್ಯ ಪುಸ್ತಕಗಳು ನೇಮಿತವಾಗುತ್ತವೆ. ಇನ್ನು ಕೆಲವು ಮೇಲೋದಿಗಾಗಿ ಇರುವಂಥವು: ಬುಕ್ಸ್ ಫಾರ್ ರೆಫರೆನ್ಸ್. ಇಲ್ಲಿ ಟೆಕ್ಸ್ಟ (ಪಠ್ಯ) ಬಹಳ ಮುಖ್ಯವಾದುದು. ಯಾವುದನ್ನು ಸಿಲೆಬಸಿನಲ್ಲಿ ಇಟ್ಟುಕೊಂಡು ಇರುತ್ತಾರೋ, ಅದನ್ನು ಪೂರ್ತಿಯಾಗಿ ಮಾಡಬೇಕಾಗುತ್ತದೆ. ಅಲ್ಲಿ ವಿಷಯ ಮುಖ್ಯ. ಅಲ್ಲಿ ಸಾಮಾನ್ಯವಾದ ಪುಸ್ತಕದಿಂದ ಹಿಡಿದು ಬಹು ದೊಡ್ಡ ಪುಸ್ತಕವೂ ಪಠ್ಯ ಪುಸ್ತಕವಾಗಬಹುದು. ಪೊಲಿಟಿಕ್ಸ್‌ನಲ್ಲಿ ಲಾಸ್ಕಿಯ 'ಗ್ರಾಮರ್ ಆಫ್ ಪೊಲಿಟಿಕ್ಸ್' ಟೆಕ್ಸ್ಟ ಆಗಬಹುದು. ಲಾಜಿಕ್‌ನಲ್ಲಿ ರಸೆಲ್ಲರ 'ಇಂಟ್ರೋಡೊಕ್ಷನ್ ಟು ಲಾಜಿಕ್' ಟೆಕ್ಸ್ಟ ಆಗಬಹುದು. ಈ ಪುಸ್ತಕಗಳನ್ನು ಓದಿದ ಹೊರತು ಒಬ್ಬ ವಿದ್ಯಾರ್ಥಿಗೆ ಡಿಗ್ರಿ ಪರೀಕ್ಷೆಯನ್ನು ಪಾಸ್ ಮಾಡುವುದಕ್ಕೆ ಅಧಿಕಾರ ಇರಬಾರದು. ಒಂದು ಒಳ್ಳೆಯ ಪಠ್ಯ ಭೂಗೋಳದ ಒಂದು ನಕ್ಷೆ ಇದ್ದ ಹಾಗಿರಬೇಕು. ವಿಷಯದ ಸ್ವರೂಪ ಎದ್ದು ತೋರಬೇಕು: ಇದು ಹಿಮಾಲಯ, ಇದು ವಿಂಧ್ಯ, ಇದು ಪೂರ್ವ ಘಟ್ಟ, ಪಶ್ಚಿಮ ಘಟ್ಟ, ಹೀಗೆ ಮ್ಯಾಪಿನಲ್ಲಿ ಇದ್ದ ಹಾಗೆ ವಿಷಯ ಸ್ಪಷ್ಟವಾಗುವಂತಿದ್ದರೆ ಅವನಿಗೆ ಅನುಕೂಲವಾಗುತ್ತದೆ. ವಿಷಯ ಚೆನ್ನಾಗಿ ತಿಳಿದಂಥವರಿಗೆ ಬೇಕಾದುದನ್ನು ಕೊಟ್ಟು, ಅವರ ಕೈಯಲ್ಲಿ ಇಂಥ ಕೆಲಸ ಮಾಡಿಸಬೇಕಾಗುತ್ತದೆ. ಈ ದಿಶೆಯಲ್ಲಿ ಬಹಳ ದೊಡ್ಡ ಪ್ರಯತ್ನ ಇನ್ನೂ ನಡೆಯಬೇಕಾಗಿದೆ.

# ಕನ್ನಡದಲ್ಲಿ ಮಾನವಿಕ ಪಠ್ಯಗಳು

ಪ್ರಬಂಧ

ಉದ್ಯಾವರ ಮಾಧವ ಆಚಾರ್ಯ

ಕನ್ನಡ ಮಾಧ್ಯಮವಾಗಬೇಕಾದರೆ ಕನ್ನಡದಲ್ಲಿ ಚಿಂತನೆಮಾಡಲು ಯೋಗ್ಯವಾಗುವ ಮೂಲ ಹಾಗೂ ಪಠ್ಯಪುಸ್ತಕಗಳು ಸಾಕಷ್ಟು ಪ್ರಮಾಣದಲ್ಲಿ ಪ್ರಕಟವಾಗಬೇಕು; ಸಾಕಷ್ಟು ಪ್ರಮಾಣದಲ್ಲಿ ಸಾಮಾಜಿಕ ಹಾಗೂ ವೈಜ್ಞಾನಿಕ ಪಠ್ಯಗಳು ಪ್ರಕಟವಾಗ ಬೇಕಾದರೆ ಮೊದಲು ಕನ್ನಡ ಮಾಧ್ಯಮ ಸಂಪೂರ್ಣವಾಗಿ ವಿಶ್ವವಿದ್ಯಾನಿಲಯ ಮಟ್ಟ ದಲ್ಲಿ ಬಂದುಕೊಳ್ಳಬೇಕು ಎಂಬ ಈ ಎರಡು ಪರಿಮಿತಿಗಳ ಒಳಗೆ ಮಾನವಿಕ ಪಠ್ಯಗಳ ಕೆಲವು ಸಮಸ್ಯೆಗಳನ್ನು ಈ ಬರಹ ಚರ್ಚಿಸಲೆತ್ನಿಸುತ್ತದೆ.

"ಮಾನವಿಕ" ಎಂಬ ಪದವನ್ನು ಇಂಗ್ಲಿಷಿನ "Humanities" ಎಂಬ ಪದಕ್ಕೆ ಸಮಾನವಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ. ವಸ್ತು ವೈಶಿಷ್ಟ್ಯವನ್ನು ವಿಶ್ಲೇಷಿಸುವುದು ವಿಜ್ಞಾನವಾದರೆ ಮನುಷ್ಯ ಮನುಷ್ಯನೊಳಗಿನ ಯಾವತ್ತೂ ಸಂಬಂಧಗಳ ವಿಚಾರ ಮಾನವಿಕ ಶಾಸ್ತ್ರವಾಗಿದೆ. ಬದುಕುವುದೆಂದರೆ ಏನು, ಅರ್ಥವತ್ತಾಗಿ ಬದುಕುವುದು ಹೇಗೆ, ಆರ್ಥಿಕ ಯಶಸ್ಸನ್ನು ಗಳಿಸುವುದು ಹೇಗೆ, ಮನಸ್ಸಿನ ಹತ್ತು ಹಂಬಲಗಳನ್ನು ಪೂರೈಸುವುದು ಹೇಗೆ, ಒಬ್ಬ ಇನ್ನೊಬ್ಬನನ್ನು ಹೊಂದಿಕೊಂಡಿರುವುದು ಹೇಗೆ, ಹೀಗೆ ಹಲವಾರು ಸಮಸ್ಯೆಗಳು ಮನುಷ್ಯ ಸಂಘಜೀವಿಯಾಗಿ ಬಾಳಲು ಪ್ರಾರಂಭಿಸಿದ ದಿನದಿಂದ, ಆತ ತನಗೊಂದು ಮನಸ್ಸಿದೆ, ಆ ಮನಸ್ಸು ಕ್ರಿಯಾತ್ಮಕವಾದ ಪ್ರಜ್ಞಾ ಸೃಷ್ಟಿಗೆ ಕಾರಣವಾಗುತ್ತದೆ ಎಂದು ಅರಿತಂದಿನಿಂದ ಈ ಜಗತ್ತಿನ ಸಮಸ್ಯೆಗಳಾಗಿವೆ. ಮೊನಚುಕಲ್ಲಿನ ಆದಿಮಾನವನಿಂದ ಮೊನಚು ಪಾದರಕ್ಷೆಯ ಇವತ್ತಿನ ಮಾನವನ ವರೆಗೆ ಬದುಕು ಒಂದು ಹೋರಾಟವಾಗಿಯೇ ಬಂದಿದೆ. ಈ ಹೋರಾಟದ ಆಳವನ್ನು, ವಿಸ್ತಾರವನ್ನು ಅಳೆಯುವ ಕಲಿಯುವಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಮಾನವಿಕ ಪಠ್ಯಗಳ ಹತ್ತಾರು ಸಮಸ್ಯೆಗಳನ್ನು ನಾವಿಲ್ಲಿ ಚರ್ಚಿಸಬೇಕಾಗುತ್ತದೆ.

ಯಾವುದೇ ಭಾಷೆಯಲ್ಲಾಗಲಿ ಮಾನವಿಕ ಪಠ್ಯಗಳು ಒಂದು ಮುಖ್ಯವಾದ ದೌರ್ಬಲ್ಯವನ್ನು ಪ್ರದರ್ಶಿಸಬೇಕಾಗಿದೆ. ಕಾರಣ ಅವಕ್ಕೆ ಸಂಬಂಧಪಟ್ಟ ವಿದ್ಯೆಯ ಭಾಗ ಮನುಷ್ಯನ ವ್ಯಕ್ತಿತ್ವದ ಆಂತರಿಕ ಹಾಗೂ ಬಾಹ್ಯ ಪ್ರಜ್ಞೆಯ ಮತ್ತು ಇರುವಿಕೆಯ ಎಲ್ಲ ಸಮಸ್ಯೆಗಳನ್ನು ವಿಸ್ತರಿಸುವ ಭಾಗ. ಕಾಲಕಾಲಕ್ಕೆ ಹಲವಾರು ಕಾರಣಗಳಿಂದಾಗಿ ಈ ಸಮಸ್ಯೆಯ ರೂಪ, ಪರಿಹಾರದ ಕ್ರಮ ಮತ್ತು ಪ್ರಯತ್ನ ಬದಲಾಗುತ್ತಲೇ ಇವೆ. ಕಳೆದ ಶತಮಾನದಲ್ಲಿದ್ದ ರಾಜಕೀಯ ವ್ಯವಸ್ಥೆ ಈಗಿಲ್ಲ. ಈಗಲೂ ಕಬ್ಬಿಣದ

ಪರದೆಯ ಆ ಕಡೆ ಒಂದು ಕ್ರಮವಿದ್ದರೆ ಈ ಕಡೆ ಹಲವಾರು ಕ್ರಮಗಳಿವೆ. ಆರ್ಥಿಕ ವ್ಯವಸ್ಥೆಯಲ್ಲೂ ಹೀಗೆ: ನಿನ್ನೆಯ ನೀತಿ ಇಂದಿಗೆ ಹಳತು. ನಾಳೆಗೆ ಹೊಸತೊಂದನ್ನೇ ನಾವು ಸೃಷ್ಟಿಸಬೇಕಾಗಿದೆ. ಅದರಲ್ಲೂ ಜಾಗತಿಕ ಯುದ್ಧಗಳು, ಸಾರ್ವತ್ರಿಕ ಬಿಕ್ಕಟ್ಟು ಮುಂತಾದ ಮೂಲಭೂತ ಪೆಟ್ಟುಗಳು ಬಂದ ಮೇಲಂತೂ ನಾವು "ಕಟ್ಟು ಸಡಿಲವಾದ ಪೊರಕೆ"ಯಂತಾಗಿ ಬಿಟ್ಟಿದ್ದೇವೆ. ಸಾತ್ರೆ ಹೇಳುವಂತೆ " Human order is still only a disorder " ಆದರೂ, ಬದುಕಿನ ವ್ಯವಸ್ಥೆ ಎಂದೆಂದಿಗೂ ಅವ್ಯವಸ್ಥೆಯೇ ಆದರೂ, ವ್ಯವಸ್ಥೆಯ ಕಡೆಗೆ ನಮ್ಮ ಗುರಿಯಿರುವುದರಿಂದ ಸಾಮಾಜಿಕ ಹೋರಾಟದ ಬಣ್ಣ ಬದಲಾಗಿಕೊಂಡೇ ಇದೆ. ಇದರಿಂದಾಗಿ ಮಾನವಿಕ ಪಠ್ಯಗಳು ಆಗಾಗ್ಗೆ ಬದಲಾಗುತ್ತಿರಬೇಕಾಗುತ್ತದೆ.

ಈ ದೌರ್ಬಲ್ಯ ಮಾನವಿಕ ಪಠ್ಯಗಳ ಕಾರ್ಯಕ್ಷೇತ್ರವನ್ನು ಒಂದು ನಿರ್ದಿಷ್ಟವಾದ ಮಿತಿಯೊಳಗಿರುವಂತೆ ಮಾಡಿದೆ. ಕಲಿಯುವವನೂ ಕಲಿಸುವವನೂ ಸಮಕಾಲೀನ ಪ್ರಜ್ಞೆಯನ್ನು ಹೊಂದಿ ಈ ಪಠ್ಯಗಳ ಆಧಾರದ ಮೇಲೆ ಪ್ರಚಲಿತ ಆಗುಹೋಗುಗಳನ್ನು, ಅವುಗಳ ಪರಿಣಾಮಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಸಮಕಾಲೀನ ಪ್ರಜ್ಞೆಯನ್ನು ಮಾನವಿಕ ಪಠ್ಯಪುಸ್ತಕಗಳಲ್ಲಿ ಅಳವಡಿಸಿಕೊಳ್ಳುವುದು ಬಹಳ ಕಷ್ಟ. ಉದಾಹರಣೆಗೆ ಮೊದಲನೆಯ ಜಾಗತಿಕ ಸಮರದ ಹಿಂದೆ ಬರೆಯಲ್ಪಟ್ಟ ಪುಸ್ತಕಗಳಲ್ಲಿ ಸಮಾಜವಾದಿ ತತ್ವಗಳ ವಿಶ್ಲೇಷಣೆ ನಮಗೆ ಸಿಗುವುದಿಲ್ಲ. ಇದೇ ರೀತಿ ಇಂದಿನ ರಶ್ಯಾದಲ್ಲಿ ಒಂದು ಸಮಾಜಶಾಸ್ತ್ರ ಪುಸ್ತಕದಲ್ಲೋ ಅಥವಾ ಅರ್ಥಶಾಸ್ತ್ರದ ಪುಸ್ತಕದಲ್ಲೋ 1917ರ ಹಿಂದಿನ ಸಂಗತಿಗಳು ಎಷ್ಟು ಇವೆ, ಅವುಗಳ ಪ್ರಾಮುಖ್ಯತೆ ಏನು. ಆಧುನಿಕ ರಶ್ಯಾದ ಪ್ರಜೆಯೊಬ್ಬನನ್ನು ನಾಗರಿಕನನ್ನಾಗಿ ಮಾಡುವುದರಲ್ಲಿ ಅವುಗಳ ಪಾತ್ರವೇನು ಎಂದು ಹೇಳುವುದು ಕಷ್ಟ. ಹೆಚ್ಚಿನ ಮಾನವಿಕ ಪಠ್ಯಗಳು ಶ್ರೀ ಬಿ. ಎಂ. ಶ್ರೀಯವರು ಶ್ರೀನಿವಾಸಯ್ಯಂಗಾರರ "ಗ್ರೀಕರ ತತ್ವಶಾಸ್ತ್ರಸಾರಸಂಗ್ರಹಕ್ಕೆ" ಬರೆದ ಮುನ್ನುಡಿಯಲ್ಲಿ ಹೇಳಿದಂತೆ "ಒಂದು ಕಿಟಕಿಯನ್ನು ತೆರೆದು ಹೊಸನೋಟಗಳನ್ನೂ ವಿಚಾರ ಸ್ಫೂರ್ತಿಯನ್ನೂ" ಕೊಡಬಲ್ಲುವು: ಅಷ್ಟೆ. ಈ ಕಿಟಿಕಿಯ ಮೂಲಕ ನೋಡಿ ತಿಳಿಯಬಹುದಾದುದೆಲ್ಲ ನೋಡುವವನ ಶಕ್ತಿಯನ್ನು ಹೊಂದಿಕೊಂಡಿದೆ. ನಮ್ಮ ಸಾಮಾಜಿಕ ಮತ್ತು ವ್ಯಾವಹಾರಿಕ ಬದುಕಿನಲ್ಲಿ ಕ್ಷಣಕ್ಷಣಕ್ಕೆ ಆಗುತ್ತಿರುವ ಬದಲಾವಣೆಗಳೇ ಈ ದೌರ್ಬಲ್ಯಕ್ಕೆ ಮುಖ್ಯ ಕಾರಣ. ವಿಜ್ಞಾನದಲ್ಲಿ ಯಾವ ವಿಶ್ವವ್ಯಾಪಕ ಗುಣವಿದೆಯೋ ಅದು ಮಾನವಿಕ ಶಾಸ್ತ್ರಗಳಲ್ಲಿ ಅಷ್ಟಾಗಿ ಇಲ್ಲ. ಈ ಕಾರಣದಿಂದಾಗಿಯೇ ಎಷ್ಟೊಂದು ರಾಜಕೀಯ ತತ್ವಗಳು ಹುಟ್ಟಿಕೊಂಡವು; ಆರ್ಥಿಕ ವ್ಯವಸ್ಥೆಗಳು ಬದಲಾದುವು; ಸಾಹಿತ್ಯ ಹಾಗೂ ಕಲೆಯ ರೀತಿಗಳು ಬೇರೆಯಾದುವು; ಧರ್ಮಗಳು ತಲೆ ಎತ್ತಿದವು; ಇವುಗಳನ್ನೆಲ್ಲ ಸೆರೆಹಿಡಿದು ಮನುಷ್ಯನ ಜೀವನದ ಒಳಹೊರಗುಗಳ ವಿಶ್ಲೇಷಣೆಯನ್ನು ನಡೆಸುವುದಕ್ಕೆ ಸಾಕಷ್ಟು ವಿಚಾರಸಾಹಿತ್ಯ ಬೆಳೆಯಬೇಕು. ಅವುಗಳು ಬೆಳೆದರೇನೆ ಆ ಬಗ್ಗೆ ಉತ್ತಮ ಪಠ್ಯಗಳನ್ನು ಸಂಪಾದಿಸಲು ಸಾಧ್ಯವಾಗುತ್ತದೆ. ಸ್ಪೊನಿಯರ್ ಮತ್ತು ಹೇಗ್ ಎಂಬ ಇಬ್ಬರು ಪಾಶ್ಚಾತ್ಯರು ಬರೆದ ಅರ್ಥಶಾಸ್ತ್ರದ ಒಂದು ಉತ್ತಮ ಪಠ್ಯಪುಸ್ತಕದಲ್ಲಿ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಹೆಚ್ಚಿನ ಓದಿಗಾಗಿ ಹಲವಾರು

ಗ್ರಂಥಗಳ ಹೆಸರುಗಳನ್ನು ಸೂಚಿಸಿದ್ದಾರೆ. ಇದೇ ರೀತಿ "ಬ್ರಿಟನಿನ ಔದ್ಯೋಗಿಕ ಕ್ರಾಂತಿ"ಯ ಬಗ್ಗೆ ಬರೆದ ಪುಸ್ತಕದಲ್ಲಿ ಲೇಖಕಿ ನೋಲ್ಸ್ ಎಂಬಾಕೆ ಸಾಧಾರಣ ಐವತ್ತಕ್ಕೂ ಮೇಲ್ಪಟ್ಟು ಉದ್ಗ್ರಂಥಗಳ ಪಟ್ಟಿಯನ್ನು ಕೊಟ್ಟಿದ್ದಾಳೆ. ಅದೂ ಔದ್ಯೋಗಿಕ ಕ್ರಾಂತಿ ಎಂಬ ಒಂದು ಅಧ್ಯಾಯದ ಹೆಚ್ಚಿನ ತಿಳುವಳಿಕೆಗಾಗಿ. ಇಷ್ಟಲ್ಲದೆ ಈ ಮೊದಲೇ ಹೇಳಿದಂತೆ ಸೂಕ್ತ ಬದಲಾವಣೆಗಳೊಂದಿಗೆ ಹೊಸ ಹೊಸ ಆವೃತ್ತಿಗಳನ್ನು ತರದಿದ್ದರೆ ಹೆಚ್ಚಿನ ಮಾನವಿಕ ಪಠ್ಯಗಳು ತಮ್ಮ ಮೌಲ್ಯವನ್ನು ಕಳೆದುಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಜಾರ್ಜ್ ಎನ್. ಹಾಮ್. ಎಂಬಾತ 1942ರಲ್ಲಿ "ಹಣ"ದ ಬಗ್ಗೆ ಒಂದು ಗ್ರಂಥವನ್ನು ಬರೆದ. ಅದು ಅಚ್ಚಿನ ಮನೆಯಿಂದ ಹೊರಬಿದ್ದ ಮೇಲೆ "ಬೆನ್‌ಟ್ರವೂಡ್ಸ್" ಸಮ್ಮೇಲನ ಜರಗಿ ಆ ಸಮ್ಮೇಳನ ಹಣ ಪ್ರಪಂಚದಲ್ಲಿ ಸಾಕಷ್ಟುಬದಲಾವಣೆಯನ್ನು ಮಾಡಿತು. ಇದರಿಂದಾಗಿ ಕೇವಲ ನಾಲ್ಕು ವರುಷಗಳ ನಂತರ ಅಂದರೆ 1946ರಲ್ಲಿ ಹಾಮ್ ತನ್ನ ಪುಸ್ತಕದ ಇನ್ನೊಂದೇ ಆವೃತ್ತಿಯನ್ನು ತರಬೇಕಾಯಿತು. ಬದಲಾವಣೆಗಳೊಂದಿಗೆ; ಹೊಸ ವಿಷಯಗಳೊಂದಿಗೆ ಮತ್ತು ಹೆಚ್ಚಿನ ಅಧ್ಯಾಯಗಳೊಂದಿಗೆ. ಈ ಎತ್ತರದಲ್ಲಿ, ಮಟ್ಟದಲ್ಲಿ, ಕ್ರಿಯಾತ್ಮಕ ಸ್ಥಿತಿಯಲ್ಲಿ ನಾವಿದ್ದೇವೆಯೇ? ನಮ್ಮ ಭಾಷೆ ಮಾಧ್ಯಮವಾಗಬೇಕು ಎಂಬ ಒಂದು ಕಾರಣಕ್ಕಾಗಿ ಪಾಠಕ್ಕೆ ಸಂಬಂಧಪಟ್ಟಂತೆ ನಾಲ್ಕಾರು ಪಠ್ಯಗಳನ್ನು ನಮ್ಮ ಭಾಷೆಯಲ್ಲಿ ಬರೆದೋ ಅನುವಾದಿಸಿಯೋ, ಅದನ್ನೇ ವಿಶ್ವವಿದ್ಯಾನಿಲಯದ ವಿದ್ಯಾಸಂಸ್ಥೆಗಳಲ್ಲಿ ಪಠ್ಯಪುಸ್ತಕಗಳನ್ನಾಗಿಸಿ ಟಿಪ್ಪಣಿ ಕೊಟ್ಟು ಪ್ರಶ್ನೆಗಳಿಗೆ ಉತ್ತರ ಬರೆಸಿದರೆ ನಾವು ಏನನ್ನು ಸಾಧಿಸಿಯೇವು? ಇದು ಮುಖ್ಯವಾಗಿ ವಿಚಾರ ಮಾಡಬೇಕಾದ ವಿಷಯ.

ನಮ್ಮ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಈ ಕುರಿತು ಚಿಂತನೆತೊಡಗಿದುದು ಇಂದು ನಿನ್ನೆಯಲ್ಲ. ಈ ಶತಮಾನದ ಪ್ರಾರಂಭದ ಎರಡನೆಯ ಮೂರನೆಯ ದಶಕದಲ್ಲೇ ವಿಚಾರವಂತರು ಯೋಚಿಸಿದ್ದರು. "ಕನ್ನಡದಲ್ಲಿ ತತ್ವಶಾಸ್ತ್ರವನ್ನು ಬರೆಯಬೇಕೆಂಬ ಉತ್ಸಾಹ"ದಿಂದ ಕೆ. ಆರ್. ಶ್ರೀನಿವಾಸಯ್ಯಂಗಾರರು "ಗ್ರೀಕರ ತತ್ವಶಾಸ್ತ್ರ ಸಾರ ಸಂಗ್ರಹ" ಎಂಬ ಗ್ರಂಥವನ್ನು 1923ರಲ್ಲಿ ಪ್ರಾರಂಭಿಸಿ 1925ರಲ್ಲಿ ಮುಗಿಸಿದ್ದರು. ಆದರೆ ಈ ವೈಚಾರಿಕ ಗ್ರಂಥ ಪ್ರಕಟವಾದುದು 1941ರಲ್ಲಿ. ಗ್ರಂಥಕರ್ತರು ತಮ್ಮ ಮೊದಲ ಮಾತಿನಲ್ಲಿ ಬರೆದ ಒಂದು ಸಾಲನ್ನು ಇಲ್ಲಿ ನೆನೆಯಬಹುದೇನೋ? "ಹದಿನೈದು ವರುಷಗಳ ಹಿಂದೆ ಬರೆದ ಗ್ರಂಥ ಈಗ ಅಚ್ಚಾಗುವುದೆಂದರೆ ಅದಕ್ಕಿಂತಲೂ ಹೆಚ್ಚಿನ ಸಂತೋಷ ಗ್ರಂಥವನ್ನು ಬರೆದವನಿಗೆ ಏನಿದೆ?". ಇವರ ಈ ಸಂತೋಷಕ್ಕೆ ಕಾರಣರಾದವರು ಕನ್ನಡದ ಆಚಾರ್ಯ ಪುರುಷ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು. ಗ್ರಂಥವನ್ನು ಹೇಗೆ ವಿಸ್ತರಿಸಬಹುದು ಎಂದು ಲೇಖಕರಿಗೆ ತಿಳಿಸಿ, ಅಚ್ಚಾಗುತ್ತಿರುವಾಗ ಕರಡುಪ್ರತಿಗಳನ್ನೆಲ್ಲಾ ಆಮೂಲಾಗ್ರವಾಗಿ ಪರಿಶೋಧಿಸಿ ಶ್ರೀಯುವರು 'ಕನ್ನಡಿಗರಿಗೆ ತಮ್ಮ ಪಕ್ವ ಪಾಂಡಿತ್ಯವನ್ನು ಸುಲಭವಾಗಿ ಒದಗಿಸಿಕೊಟ್ಟದ್ದಕ್ಕಾಗಿ ತಾನು ವ್ಯಕ್ತಿಶಃ ಶ್ರೀನಿವಾಸಯ್ಯಂಗಾರ್ಯರಿಗೆ ಕೃತಜ್ಞನಾಗಿದ್ದೇನೆ' ಎಂದು ಮುನ್ನುಡಿಯಲ್ಲಿ ಬರೆದಿದ್ದಾರೆ. ಹೀಗೆ ಬಿ.ಎಲ್. ರೈಸ್, ಎನ್. ಎಸ್. ಸುಬ್ಬರಾಯರೇ ಮೊದಲಾದವರ ನೇತೃತ್ವದಲ್ಲಿ 'ಜನಾಭಿವೃದ್ಧಿ ಮಾಡುವ ಸಾಹಿತ್ಯ' ಮೈಸೂರು ವಿಶ್ವವಿದ್ಯಾ

ನಿಲಯದ ಮೂಲಕ ಪ್ರಕಟವಾಗತೊಡಗಿತು. ಮುಂದೆ ಪಾಠ ಕ್ರಮಕ್ಕನುಸಾರವಾಗಿ ಪಠ್ಯಗಳ ರಚನೆಯ ಕಾರ್ಯ ಪ್ರಾರಂಭವಾಯಿತು. "ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಮಾಧ್ಯಮವನ್ನು ಈಗಾಗಲೇ ಕಾರ್ಯರೂಪಕ್ಕೆ ತಂದಿದೆ. ಪ್ರಿಯುನಿವರ್ಸಿಟಿ ತರಗತಿಗೆ ಬೇಕಾದ ಎಲ್ಲ ವಿಷಯಗಳನ್ನು ಕುರಿತು ಪಠ್ಯ ಪುಸ್ತಕಗಳು ಸಿದ್ಧವಾಗಿವೆ" ಎಂದು 1960ರ ಸುಮಾರಿಗೇ ಕೆ. ವಿ. ಪುಟ್ಟಪ್ಪನವರು "ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ"ಯ ಪುಸ್ತಕಗಳ ಮುನ್ನುಡಿಯಲ್ಲಿ ಬರೆದಿದ್ದಾರೆ. ಇದೇ ರೀತಿ 1968ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಕಾಶನ ವಿಭಾಗ ತೆರೆಯಲ್ಪಟ್ಟು ಪಠ್ಯ ಪುಸ್ತಕಗಳ ಪ್ರಕಟಣೆಗೆ ಹೆಚ್ಚಿನ ಗಮನ ಕೊಡತೊಡಗಿತು. ಕರ್ನಾಟಕ ವಿಶ್ವವಿದ್ಯಾನಿಲಯವೂ ತನ್ನ ಹೆಚ್ಚಿನ ಗಮನವನ್ನು ಆಧಾರ ಮತ್ತು ವಿಮರ್ಶಾ ಗ್ರಂಥಗಳ ಪ್ರಕಟಣೆಗೆ ಕೊಡತೊಡಗಿತು. ಈಗಾಗಲೇ ಮಾನವಿಕ ವಿಷಯಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯ 17ಕ್ಕೂ ಮಿಕ್ಕಿ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯ 9ಕ್ಕೂ ಮಿಕ್ಕಿ ಪಠ್ಯಗಳನ್ನು ಬರೆಸಿ ಪ್ರಕಟಿಸಿವೆ. ಕರ್ಣಾಟಕ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಮಾನವಿಕ ಪಠ್ಯಗಳು ಪ್ರಕಟವಾಗಿವೆ. ಹೆಚ್ಚಿನವು ಮುಖ್ಯವಾಗಿ ಪ್ರಿಯುನಿವರ್ಸಿಟಿ ವಿದ್ಯಾಭ್ಯಾಸಕ್ಕಾಗಿ. ಆದರೆ ಈ ಸಂಖ್ಯೆಗಳ ಪಟ್ಟಿ ನಮ್ಮನ್ನು ತೃಪ್ತಿಯ ಹಂತಕ್ಕೆ ಏರಿಸಬಲ್ಲುದೇ?

ಈ ನಾಲ್ಕೈದು ದಶಕಗಳ ದೀರ್ಘಾವಧಿಯಲ್ಲಿ ನಾವು ಯಾವ ಕೆಲಸವು ಮನಃಪೂರ್ವಕವಾಗಿ ಆಗಬೇಕೆಂದು ಸಂಕಲ್ಪ ಮಾಡಿರುವೆವೋ ಅದು ನಾವೆಣಿಸಿದಂತೆ ಕೈಗೂಡಿಲ್ಲ ಎಂಬುದು ಒಪ್ಪಬಹುದಾದ ಮಾತಾದರೂ, ಪಠ್ಯ ಹಾಗೂ ಪಠ್ಯೇತರ ಪುಸ್ತಕಗಳ ಪ್ರಕಟಣೆ ಮೂಡಿಸಿದ ಹೆಜ್ಜೆ ಬಲಶಾಲಿಯಾಗಿಯೇ ಇದೆ. ಸಾಧಾರಣವಾಗಿ ಮಾನವಿಕ ಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲೂ ಪಠ್ಯ ಪುಸ್ತಕಗಳನ್ನು ಪ್ರಕಟಿಸುವ ಪ್ರಯತ್ನ ನಡೆದಿದೆ ಎಂಬುದು ಸಂತೋಷದ ವಿಷಯ. ಆದರೆ ಸಮರ್ಪಕವಾಗಿ ಇನ್ನೂ ಆಗಿಲ್ಲ ಎಂಬ ಕೊರಗಿದೆ; ವಿಳಂಬಕ್ಕೆ ಮುಖ್ಯ ಕಾರಣ ಇತ್ತೀಚೆಗೆ ದೇಶದಲ್ಲಿ ಬೆಳೆದುಬಂದ ಒಂದು ರೀತಿಯ ವಾತಾವರಣ; ಮುಖ್ಯವಾಗಿ ಭಾಷಾ ಸಮಸ್ಯೆಯ ಬಗ್ಗೆ ನಡೆದ ವಾದ ವಿವಾದ. ಇದರ ಬದಲು, ಅಂದರೆ ಮಾಧ್ಯಮದ ಕುರಿತು ಯಾವ ಚರ್ಚೆಯನ್ನೂ ಎತ್ತದೆ ಪ್ರತಿಯೊಂದು ಪ್ರಾದೇಶಿಕ ಭಾಷೆ ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ, ವಿದ್ಯಾಸಂಸ್ಥೆಗಳ ಆಶ್ರಯದಲ್ಲಿ—ಶಕ್ತಿಯಿದ್ದರೆ ಖಾಸಗೀ ಸಂಸ್ಥೆಗಳಿಂದ-ಪಠ್ಯ ಹಾಗೂ ಪಠ್ಯೇತರ ಆಧಾರಗ್ರಂಥಗಳ ಪ್ರಕಟಣೆಗೆ ತಕ್ಕ ನೀತಿಯನ್ನು ಸರಕಾರ ಬೆಂಬಲಿಸಿದ್ದರೆ ಮೇಲೆ ಹೇಳಿದ ಕೊರಗಿನ ಎಷ್ಟೋ ಅಂಶ ಮಾಯವಾಗುತ್ತಿತ್ತು. ಉಣ್ಣುವುದು ಎಲ್ಲಿ, ಉಣ್ಣುವುದು ಹೇಗೆ, ನಮ್ಮ ಬಟ್ಟಲಿನಲ್ಲಿಯೇ ಇನ್ನೊಬ್ಬನ ಬಟ್ಟಲಿನಲ್ಲಿಯೇ ಎಂಬೆಲ್ಲ ಪ್ರಶ್ನೆಗಳಿಗೆ ಮೊದಲು ಉಣ್ಣಲು ಬೇಕಾದುದು ಸಿದ್ಧವಾಗಬೇಕು. ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರ 'ಹಿಂದೂ ದರ್ಶನಸಾರ' ಎಂಬ ಗ್ರಂಥ ಬಂದ ರೀತಿ ಹೀಗೆ. ವೇದಾಂತವನ್ನು ಕಲಿಯ ಬಯಸುವವನಿಗೆ ಉಪಯುಕ್ತವಾದ ಗ್ರಂಥವದು. ವಿ.ಸೀಯವರ 'ಹಣಪ್ರಪಂಚ', ಎಂ. ವಿ. ಕೃಷ್ಣರಾಯರ 'ಪ್ರಜಾಸರ್ಕಾರ', ಡಿ.ವಿ.ಜಿ.ಯವರ 'ರಾಜ್ಯಶಾಸ್ತ್ರ' ಮುಂತಾದ ಗ್ರಂಥಗಳ ಮೌಲ್ಯ ಅಗಾಧವಾದುದು.

ಈ ಹಿನ್ನೆಲೆಯಲ್ಲಿ ಮಾನವಿಕ ಪಠ್ಯಗಳ ಕುರಿತು ವಿವೇಚನೆಯನ್ನು ನಾವು ನಡೆಸ ಬೇಕು. ನಡೆಸುವಾಗ ಈ ಕೆಳಗಿನ ಪ್ರಶ್ನೆಗಳು ನಮ್ಮ ಮುಂದೆ ಬರುತ್ತವೆ:

1) ಮಾನವಿಕ ವಿಷಯಗಳಿಗೆ ಸಾರ್ವತ್ರಿಕ ಅಭಿವ್ಯಕ್ತಿ ಇರುವುದರಿಂದ ಕನ್ನಡದಲ್ಲಿ ಅವುಗಳ ಕುರಿತು ಬರೆಯುವುದು ಸುಲಭವೇ? ಅದಕ್ಕೆ ಬೇಕಾದ ರೀತಿಯಲ್ಲಿ ಅಂದರೆ ಉದಾಹರಣೆಗೆ ಅರ್ಥಶಾಸ್ತ್ರದಲ್ಲಿ ಅರ್ಥಶಾಸ್ತ್ರವೇನು ಎಂಬಲ್ಲಿಂದ ಅಂತರಾಷ್ಟ್ರೀಯ ದ್ರವ್ಯ ಸಮಸ್ಯೆಯ ವರೆಗೆ ಎಲ್ಲ ವಿಚಾರಗಳನ್ನು ಸ್ವಾಭಾವಿಕವಾಗಿ ಸ್ವಯಂ ಚಿಂತನೆ ಮಾಡಲು ನಮ್ಮ ಭಾಷೆಗೆ ಸಾಧ್ಯವೇ?

2) ತರಗತಿಯ ಪಾಠಕ್ರಮಕ್ಕನುಸಾರವಾಗಿ ಇಂಗ್ಲೀಷಿನ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿದರೆ ಸಾಕೇ? ಕನ್ನಡದಲ್ಲೇ ಓದಿ ಕಲಿತು ಜ್ಞಾನವನ್ನು ಹೆಚ್ಚಿಸಿ ಕೊಳ್ಳಲು ಎಂಥ ಪಠ್ಯಗಳು ಬೇಕು? ಮಾನವಿಕ ಶಾಸ್ತ್ರಗಳನ್ನು ಹೀಗೆ ಕನ್ನಡಿಸುವುದರಲ್ಲಿ ಪಠ್ಯಪುಸ್ತಕಗಳ ಪಾತ್ರವೇನು?

3) ಕನ್ನಡ ಭಾಷೆ ಬೆಳೆಯದೆ ವಿಶ್ವದ ಆಧುನಿಕ ಜ್ಞಾನವನ್ನು ಅದರಲ್ಲಿ ವಿವರಿಸುವುದು ಸಾಧ್ಯವಿಲ್ಲ; ಸಾಕಷ್ಟು ಗ್ರಂಥಗಳು ಬಾರದೆ ಭಾಷೆ ಬೆಳೆಯುವಂತಿಲ್ಲ ಎಂಬ ಈ ವಿಷವರ್ತುಲವನ್ನು ಪರಿಹರಿಸುವುದರಲ್ಲಿ ಪಠ್ಯಪುಸ್ತಕಗಳು ಎಷ್ಟು ಸಹಕಾರಿ ಯಾಗಬಲ್ಲವು? ಈ ದಿಸೆಯಲ್ಲಿ ಮಾನವಿಕ ಶಾಸ್ತ್ರಗಳಲ್ಲಿ ಹೆಚ್ಚಿನ ಅನುಕೂಲತೆಗಳಿವೆಯೇ?

4) ಪಾರಿಭಾಷಿಕ ಪದಗಳನ್ನು ಸರಿಯಾಗಿ ಅಳವಡಿಸಿಕೊಳ್ಳಲು ಮಾನವಿಕ ಪಠ್ಯಗಳಲ್ಲಿ ಇರಬಹುದಾದ ಅನುಕೂಲತೆ ಅನಾನುಕೂಲತೆಗಳು ಯಾವುವು? ಅನಾನು ಕೂಲತೆಗಳನ್ನು ಎಷ್ಟರಮಟ್ಟಿಗೆ ಪರಿಹರಿಸಿಕೊಳ್ಳಬಹುದು?

5) ನಮ್ಮ ವಿಶ್ವವಿದ್ಯಾನಿಲಯಗಳು ಮಾನವಿಕ ಶಾಸ್ತ್ರಗಳ ಅಧ್ಯಯನ ಕ್ರಮ ದಲ್ಲಿ ಕೆಲವು ಸೂಕ್ತ ಬದಲಾವಣೆಗಳನ್ನು ಮಾಡಿ ಆ ಪಠ್ಯಗಳ ಉಪಯುಕ್ತತೆಯನ್ನು ಹೆಚ್ಚಿಸಲು ಸಾಧ್ಯವೇ?

ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಈ ಬರಹ ಕೊಡಲಾರ ದಾದರೂ ಸಮಸ್ಯೆಯ ಒಳರೂಪವನ್ನು ತೋರಿಸುವುದಕ್ಕಾಗಿ ಪ್ರಶ್ನೆಗಳನ್ನು ಕೇಳಿಕೊಳ್ಳ ಬೇಕಾಯಿತು.

ಒಂದು ಕಡೆಯಲ್ಲಿ ಉಗಮವಾಗಿ ಊರೆಲ್ಲ ಹರಿವ ನದಿಯಂತೆ ಹರಿಯುವಂ ತಾದ್ದು ವಿಜ್ಞಾನ. ಉದಾಹರಣೆಗೆ ವಿದ್ಯುಚ್ಛಕ್ತಿ ಎಲ್ಲ ಕಡೆಯಲ್ಲೂ ಇದೆ. ಆದರೆ ಇದನ್ನು ಮೊದಲು ಜಗತ್ತಿನ ಒಂದು ಭಾಗದಲ್ಲಿ ಒಬ್ಬ ವಿಜ್ಞಾನಿಯೋ ಅಥವಾ ವಿಜ್ಞಾನಿಗಳ ಗುಂಪೋ ಕಂಡುಹುಡುಕಿ ಅದು ಸಾರ್ವತ್ರಿಕ ಬಳಕೆಗೆ ಬರುವಂತಾಯಿತು. ಆದರೆ ನಾವು ಯಾವುದನ್ನು ಮಾನವಿಕ ಎನ್ನುತ್ತೇವೆಯೋ ಅದು ಮನುಷ್ಯನ ಬದುಕಿನ ಮೂಲಭೂತ ಅಂಗವಾಗಿ ಆತನ ಇರುವಿಕೆಯ ಪ್ರಾರಂಭದ ದಿನದಿಂದ ಇಂದಿನ ವರೆಗೆ ಹರಿದುಬಂದಿದೆ. ಅರ್ಥಶಾಸ್ತ್ರವು ಆಸೆಗಳ ವಿವರಣೆಗಳನ್ನು ಕೊಡುವ ಮೊದಲೂ ಆಸೆಗಳ ಸಮಸ್ಯೆಗಳನ್ನು ಮನುಷ್ಯ ಅರಿತಿದ್ದ. ಜಾನ್ ಲಾಕ್, ರುಸೋ, ಥೋಮಸ್ ಹಾಬ್ಸ್, ಇವರುಗಳು ರಾಜ್ಯಪದ್ಧತಿಯ ಬಗ್ಗೆ ವಿವರಣೆ ನಡೆಸುವ ಮೊದಲೂ ರಾಜ್ಯಾಡಳಿತ ಕ್ರಮ ಒಂದಲ್ಲ ಒಂದು ರೀತಿಯಲ್ಲಿ ಈ ಜಗತ್ತಿನಲ್ಲಿತ್ತು. ವಿಜ್ಞಾನ

ಸಂಶೋಧನೆಯ ಫಲವಾದರೆ ಮಾನವಿಕ ಜ್ಞಾನ ಮನುಷ್ಯನ ಬದುಕಿನ ಒಟ್ಟು ಅನುಭವದ ಒಂದು ಅಂಗ. ಈ ಅನುಭವಗಳನ್ನು ವಿಶ್ಲೇಷಣೆ ನಡೆಸಿ ಕೆಲವು ಮಾನವಿಕ ಶಾಸ್ತ್ರಗಳು ಬೆಳಕಿಗೆ ಬಂದವು. ಆಡಂಸ್ಮಿತ್ 'ರಾಷ್ಟ್ರಗಳ ಸಂಪತ್ತು' ಎಂಬ ಹೊತ್ತಗೆಯನ್ನು ಬರೆಯುವ ಮೊದಲು ಅರ್ಥಶಾಸ್ತ್ರ ಒಂದು ಪ್ರತ್ಯೇಕ ಶಾಸ್ತ್ರವೆಂದು ಪರಿಗಣಿಸಲ್ಪಟ್ಟಿರಲಿಲ್ಲ. ಇಲ್ಲಿ ನಾವು ಮುಖ್ಯವಾಗಿ ತಿಳಿಯಬೇಕಾದ ವಿಚಾರವೆಂದರೆ ಮಾನವಿಕ ಶಾಸ್ತ್ರಗಳ ಬೆಳವಣಿಗೆಗೆ ಎಲ್ಲ ಕಡೆಗಳಲ್ಲಿ ಸಾಮೂಹಿಕವಾಗಿ ಅವಕಾಶವಿದೆ, ಎಂಬುದನ್ನು. ಇದರಿಂದಾಗಿ ವೈಚಾರಿಕ ಮನೋವೃತ್ತಿಯುಳ್ಳ ಎಲ್ಲ ಜನಾಂಗಗಳಿಗೆ ಸಾಕಷ್ಟು ಪ್ರಮಾಣದಲ್ಲಿ ತಮ್ಮ ಭಾಷೆಯಲ್ಲಿ ಚಿಂತನೆ ಮಾಡಲು ಸಾಧ್ಯವಿದೆ. ಹೀಗೆ ಚಿಂತಿಸಿ, ವಿಶ್ಲೇಷಿಸಿ, ಚರ್ಚಿಸಿ ಮಾನವಿಕ ಪಠ್ಯಗಳನ್ನು ಪಶ್ಚಿಮದಲ್ಲಿ ಪ್ರಕಟಿಸಿದ್ದಾರೆ. ಹೆಚ್ಚಿನ ಪಾಶ್ಚಿಮಾತ್ಯ ಪಠ್ಯಗಳು ಬರಿಯ ಪಾಠಗಳ ಅನುಕ್ರಮಣಿಕೆಗೆ ಸರಿಯಾಗಿ ಬರೆಯಲ್ಪಟ್ಟ ವಿಷಯ ಸಂಗ್ರಹಗಳಲ್ಲ. ಆದರೆ ಈಗ ನಮ್ಮಲ್ಲಿ ಬರೆಯಲ್ಪಟ್ಟ ಮಾನವಿಕ ಪಠ್ಯಗಳಲ್ಲಿ ಈ ಕೊರತೆ ಎದ್ದು ಕಾಣಿಸುತ್ತದೆ. ಇದನ್ನು ನಿವಾರಿಸಲು ನಾವು ಅಭಿಮಾನದ ಆವೇಶವನ್ನು ಕಡಿಮೆ ಮಾಡಿಕೊಂಡು ವೈಚಾರಿಕತೆಯ ಪುನರುಜ್ಜೀವನ ಕಾರ್ಯದಲ್ಲಿ ತೊಡಗಬೇಕು. ಇದು ಎಷ್ಟು ಬೇಗವಾಯಿತೋ ಅಷ್ಟು ಒಳ್ಳೆಯದು; ಆದರೆ ಅಷ್ಟೇ ಆಳವಾಗಿ ಪ್ರಾಮಾಣಿಕವಾಗಿ ಆಗಬೇಕು. ಅಂದರೆ ತಾನು ಆರಿಸಿಕೊಂಡ ವಿಷಯದಲ್ಲಿ ಪ್ರಭುತ್ವವನ್ನು ಪಡೆದು, ಅದರ ಬೆಳವಣಿಗೆಯ ಎಲ್ಲ ಹಂತಗಳನ್ನು ಗುರುತಿಸಿ, ಕನ್ನಡದಲ್ಲಿ ಆ ಯಾವತ್ತು ವಿಚಾರಗಳನ್ನು ಸ್ವಯಂ ಚಿಂತನೆ ಮಾಡುವ ಶಕ್ತಿಯನ್ನು ಹೊಂದಿ ಮತ್ತೆ ಬರೆಯಲು ತೊಡಗಿದರೆ ಮಾತ್ರ ಅದು ನಿಜವಾದ ಕೊಡುಗೆಯಾದೀತು. ಇದರ ಬದಲು ಬಳಕೆಯಲ್ಲಿರುವ ಇಂಗ್ಲೀಷಿನ ಪಠ್ಯವನ್ನು ಹತ್ತಿರವಿಟ್ಟುಕೊಂಡು ಶಬ್ದಕೋಶದಿಂದ ಅರ್ಥವನ್ನು ಹುಡುಕಿ ಬರೆಯ ಹೊರಟರೆ ಸಾಧನೆ ಅಪೂರ್ಣವಾದೀತು. ಕನ್ನಡದಲ್ಲಿ ಆ ಶಾಸ್ತ್ರ ಬೆಳೆಯಲಾರದೆ ಹೋದೀತು. ಅಷ್ಟು ಮಾತ್ರವಲ್ಲ, ಕನ್ನಡ ಭಾಷೆಯ ಶಕ್ತಿಯೂ ಕುಂದಿಹೋದೀತು. ಅಂದರೆ ಮಾನವಿಕ ಪಠ್ಯಗಳು ಬರಿಯ ವಿಶ್ವವಿದ್ಯಾನಿಲಯದ ಪದವಿಯ ಶಿಕ್ಷಣಕ್ಕೆ ಮಾತ್ರ ಸಾಧನಗಳಾಗದೆ, ನಮ್ಮವೇ ಆದ ಸಾಮಾಜಿಕ, ವ್ಯಾವಹಾರಿಕ, ಆರ್ಥಿಕ, ರಾಜಕೀಯ, ಮಾನಸಿಕ, ಭಾವುಕ ಸಮಸ್ಯೆಗಳನ್ನು ವ್ಯವಸ್ಥಿತ ರೀತಿಯಲ್ಲಿ ಅರಿತುಕೊಳ್ಳಲು ಮಾರ್ಗದರ್ಶಿಗಳಾಗಬೇಕು; ವಿಶ್ವಜ್ಞಾನವನ್ನು ನಮ್ಮ ನೆಲದಲ್ಲಿ ನಮ್ಮದಾಗಿ ಮಾಡಿಕೊಳ್ಳಲು ಸಾಧನಗಳಾಗಬೇಕು. ಕನ್ನಡ ಭಾಷೆಗೆ ಆ ಶಕ್ತಿ ಇದೆ. ಈ ಶಕ್ತಿಯನ್ನು ಉಳಿಸಿಕೊಳ್ಳಲು ಪಠ್ಯಗಳು ಎಷ್ಟು ಸಾಧ್ಯವೋ ಅಷ್ಟು ಗಟ್ಟಿಯಾಗಿರಬೇಕು. ಬುದ್ಧಿ ವಿಚಾರಗಳನ್ನು ವಿಮರ್ಶಿಸಲು ಕನ್ನಡಕ್ಕೆ ಶಕ್ತಿ ಇಲ್ಲ ಎನ್ನುವ ವಾದವನ್ನು ಚರ್ಚಿಸದೆ ಆ ಶಕ್ತಿಯನ್ನು ಬೆಳೆಸಿಕೊಳ್ಳಲು, 34ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಂಜೇಶ್ವರ ಗೋವಿಂದ ಪೈಗಳವರು ಸೂಚಿಸಿದ ಒಂದು ವಿಚಾರವನ್ನು ನಾವಿಲ್ಲಿ ನೆನೆಸಿಕೊಳ್ಳಬಹುದು: "ಕೈಲಾದ ಮಟ್ಟಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸಿ ನಮ್ಮ ಶಬ್ದಸ್ತೋಮವನ್ನು ಹೆಚ್ಚಿಸಬೇಕು. ಏಕೆಂದರೆ ಈಗ ಹೊಸಹೊಸ ಭಾವನೆಗಳು ಹುಟ್ಟುತ್ತಿರುವಲ್ಲಿ ಅವುಗಳನ್ನು ಯಥಾವತ್ತಾಗಿ ಮೂಡಿಸಲಿಕ್ಕೆ ಹಳೆಯ ಶಬ್ದ ಸಂಗ್ರಹ ಸಾಲದು". ಅವರು ಸೂಚಿಸಿದ ಮೊದಲ ಹೆಜ್ಜೆ

ಗಳು: 1) ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯುಗಳನ್ನು ಜೋಡಿಸುವುದು. ಉದಾ: ಸಮ್ರಾಜಿಕೆ ( empire, imperialism ) (2) ಕನ್ನಡ ಶಬ್ದಗಳಿಗೆ ಕನ್ನಡ ಪ್ರತ್ಯಯುಗಳನ್ನು ಜೋಡಿಸುವುದು. (3) ನಿದ್ರೆ ಮಾಡಿರುವ ಕನ್ನಡ ಶಬ್ದಗಳನ್ನು ಎಚ್ಚರಿಸುವುದು. (4) ಇನ್ನೂ ಕಷ್ಟವಾದರೆ ಬೇರೆ ಭಾಷೆಗಳಿಂದ ಪದಗಳನ್ನು ಎರವಲು ಪಡೆದು ಕನ್ನಡಿಸುವುದು. (ಹೀಗೆ ಬಳಕೆಗೆ ಬಂದ ಶಬ್ದ ಸುಮಾರು; ಪೌಜು ಇತ್ಯಾದಿ) ಮಾನವಿಕ ಪಠ್ಯಗಳ ತೂಕ ಕನ್ನಡದಲ್ಲಿ ಹೆಚ್ಚಬೇಕಾದರೆ ಇಂಥ ಸೂಚನೆಗಳ ಆಧಾರದ ಮೇಲೆ ನಮ್ಮ ಭಾಷಾ ಸಂಪತ್ತು ಹೆಚ್ಚಬೇಕು. ಇಲ್ಲಿ ನಾವು ಗೋವಿಂದ ಪೈಗಳವರ ಮತ್ತು ಶಂ.ಭಾ. ಜೋಷಿಯವರ ಸಂಶೋಧನೆಗಳನ್ನು ನೆನಪಿಗೆ ತಂದುಕೊಳ್ಳಬೇಕು.

ಕನ್ನಡದಲ್ಲಿ ಮಾನವಿಕ ಪಠ್ಯಗಳ ರಚನೆಗೆ ಸುಲಭವಾದ ದಾರಿ 'ಅನುವಾದ' ಎಂಬುದಾಗಿ ನಾವು ತಿಳಿದಿದ್ದೇವೆ. ಅನುವಾದದ ಕ್ರಮದಲ್ಲಿ ಮುಖ್ಯವಾಗಿ ಎರಡು ಅನುಕೂಲತೆಗಳಿವೆ. (1) ಪಠ್ಯಗಳ ರಚನೆಯ ಕಾರ್ಯವನ್ನು ಬಹಳಬೇಗ ಮುಗಿಸಬಹುದು. (2) ಮೂಲ ವಿಷಯಗಳ ಬಗ್ಗೆ ಹುಡುಕಾಡಬೇಕಾಗಿಲ್ಲ; ವಿಮರ್ಶಿಸಬೇಕಾಗಿಲ್ಲ. ಈ ರೀತಿಯ ಪಠ್ಯಗಳು ಈಗ ಪ್ರಕಟವಾಗಿವೆ. ಆದರೆ ಇವೇ ಎರಡು ಅನುಕೂಲತೆಗಳೇ ನಮ್ಮ ಮುಖ್ಯವಾದ ಉದ್ದೇಶದ ಸಾಧನೆಗೆ ಅನಾನುಕೂಲತೆಗಳೂ ಹೌದು. ಕಾರಣ ಬರಿಯ ಅನುವಾದಗಳು ಒಂದು ಉತ್ತಮ ಪಠ್ಯ ಸಾಧಿಸುವ ಗುರಿಯನ್ನು ಹೊಂದಲಾರದೆ ಹೋದಾವು. ಒಂದು ಉತ್ತಮ ಮಾನವಿಕ ಪಠ್ಯ ಎರಡು ಅನುಕೂಲತೆಗಳನ್ನು ಒದಗಿಸಬೇಕು. (1) ವಿದ್ಯಾರ್ಥಿ ಪಠ್ಯವನ್ನು ಓದುವಾಗ ಅದರಲ್ಲಿಯ ವಿಚಾರಗಳು ಸರಳವಾಗಿ ನೇರವಾಗಿ ಅವನ ಮನಸ್ಸಿನ ಸಂಪರ್ಕವನ್ನು ಹೊಂದುವ ಅನುಕೂಲತೆ. (2) ಆ ಪಠ್ಯ ಬರಿಯ ವಿವರಣೆಯಾಗದೆ ವಿಷಯವನ್ನು ಹಿಗ್ಗಿಸಿ ವಿದ್ಯಾರ್ಥಿಯ ಆಲೋಚನಾ ಶಕ್ತಿಯನ್ನು ಹೆಚ್ಚಿಸುವ ಸಾಮರ್ಥ್ಯವನ್ನು ಹೊಂದಿರಬೇಕು. ಅಂದರೆ ಈಗ ಇಂಗ್ಲೀಷಿನಲ್ಲಿ ಯಾವುದನ್ನು ಆತ ಸುಲಭವಾಗಿ, ಆಳವಾಗಿ ಗ್ರಹಿಸಲಾರನೋ ಅದನ್ನು ಕನ್ನಡ ಪಠ್ಯಗಳಿಂದ ತನ್ನ ಮನಸ್ಸಿನ ವಿಚಾರಗಳೋ ಎಂಬ ರೀತಿಯಲ್ಲಿ ಸ್ವೀಕರಿಸುವಂತಿರಬೇಕು. ಎಲ್ಲಾ ವಿಷಯಗಳನ್ನು ತಿಳಿದುಕೊಳ್ಳುವುದು ಮಾತ್ರ ವಿದ್ಯೆಯ ಗುರಿಯಲ್ಲ, ಬದಲು ಅವುಗಳಲ್ಲಿ ಎಷ್ಟು ಅಂಶವನ್ನು ಪ್ರಸ್ತುತ ನಮ್ಮ ಬದುಕಿನ ವ್ಯವಸ್ಥೆಗಾಗಿ ಅಳವಡಿಸಿಕೊಳ್ಳಲು ಸಾಧ್ಯ ಎಂಬುದನ್ನು ತಿಳಿಯುವುದೂ ನಿಜವಾದ ವಿದ್ಯೆಯ ಗುರಿಯಾದರೆ ಆ ಗುರಿಯನ್ನು ಮುಟ್ಟಲು ಅನುವಾದಿಸಲ್ಪಟ್ಟ ಪಠ್ಯ ಪುಸ್ತಕಗಳು ಸಾಕಾಗುವುದಿಲ್ಲ. ಪಠ್ಯಪುಸ್ತಕಗಳು ಬರಿಯ ಪರೀಕ್ಷೆಯ ಮಾರ್ಗದರ್ಶಿಗಳಾಗದೆ ಮಾನವಿಕ ಪ್ರಜ್ಞೆಯನ್ನು ವಿದ್ಯಾರ್ಥಿಯಲ್ಲಿ ಬೆಳೆಸುವ ಅದಮ್ಯ ಶಕ್ತಿಯೂ ಆಗಬೇಕು ಎಂಬುದು ಇದರ ಅರ್ಥ. ಮೊದಲ ಹೆಜ್ಜೆಗಳನ್ನು ಇಡುವ ಮಗುವಿಗೆ ತಾಯಿ ತನ್ನ ಕೈಗಳನ್ನು ಆಧಾರವಾಗಿ ಕೊಡುತ್ತಾಳೆ. ಅಂದರೆ ಆ ಮಗುವಿನಲ್ಲಿ ಸುಪ್ತವಾಗಿರುವ ತಾನು ನಡೆಯಬಲ್ಲೆ ಎಂಬ ವಿಶ್ವಾಸವನ್ನು ಬಡಿದೆಬ್ಬಿಸುವುದು ಆ ಆಧಾರದ ಉದ್ದೇಶ. ಮಾನವಿಕ ವಿಷಯಗಳು ನಮ್ಮ ಜೀವನದ ದಾರಿಗಳೂ ಹೌದು; ಗುರಿಯೂ ಹೌದು. ಹಳತಾಗದೆ ಸಮಕಾಲೀನವಾದಷ್ಟು ಮಾನವಿಕ ಪಠ್ಯಗಳ ಉಪಯೋಗ ಜಾಸ್ತಿ.

ಕೊನೆಯದಾಗಿ, ನಮ್ಮದು ಸುಧಾರಣೆಯ ಕಾಲ. ಹೊಸ ಅಂಗಿಯನ್ನು ಹೊಲಿಸುವಾಗ ಸಾಧ್ಯವಾದಷ್ಟು ಮಟ್ಟಿಗೆ ಹೊಸ ಸೂಚನೆಗಳನ್ನು ನಾವು ಕೊಟ್ಟೇ ಕೊಡುತ್ತೇವೆ; ತೋಳು ಇಷ್ಟಗಲ ಇರಲಿ; ಜೇಬು ಬೇಡ ಇತ್ಯಾದಿ. ಕನ್ನಡದಲ್ಲಿ ಮಾನವಿಕ ಪಠ್ಯಗಳು ಎಂಬ ಕುರಿತು ಯೋಜನೆ ಮಾಡಲಿಕ್ಕೆ ಕಾರಣ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಕನ್ನಡ ಕಲಿಸುವ ಭಾಷೆಯಾಗಬೇಕು ಎಂಬ ತವಕ. ಸ್ವಲ್ಪ ಮಟ್ಟಿಗೆ ನೆಂಟರು ಬಂದಾಗ ಅಕ್ಕಿಯ ಆಲೋಚನೆ ಬಂದ ಹಾಗೆ ಈ ಯೋಚನೆ ಬಂದಿದೆ. ಈ ದಿಸೆಯಲ್ಲಿ ವಿಶ್ವವಿದ್ಯಾನಿಲಯಗಳ ಪಾತ್ರ ದೊಡ್ಡದು. ನಾವು ನಮ್ಮ ಪಾಠಕ್ರಮದಲ್ಲಿ, ಪರೀಕ್ಷಾ ಕ್ರಮದಲ್ಲಿ, ಒಟ್ಟಿನಲ್ಲಿ ವಿದ್ಯಾಪದ್ಧತಿಯಲ್ಲಿ ಏನೆಲ್ಲ ಕುಂದುಕೊರತೆಗಳಿವೆ ಎಂದು ವಿಮರ್ಶಿಸುತ್ತಿದ್ದೇವೆಯೋ ಅವುಗಳನ್ನೆಲ್ಲ ತಿದ್ದಿಕೊಳ್ಳಲು ಇದು ಪರ್ವಕಾಲ. ಮೇಲೆ ಹೇಳಿದ ಎಲ್ಲ ಕಾರಣಗಳಿಗಾಗಿ ಮಾನವಿಕ ಶಾಸ್ತ್ರಗಳ ವಿಭಾಗದಲ್ಲಿ ಈ ತಿದ್ದುಪಡಿಯನ್ನು ಸುಲಭವಾಗಿ ಮಾಡಿಕೊಳ್ಳಬಹುದು. ಅವಸರಕ್ಕೆ ಎಡೆಕೊಡದೆ, ಹಂತಹಂತವಾಗಿ ಪಠ್ಯಗಳ ಮೂಲಕ ಹೊಸ ಮತ್ತು ಅನುಕೂಲವಾದ ಪದ್ಧತಿಯನ್ನು ಅಳವಡಿಸಿಕೊಳ್ಳಬಹುದು. ಇದೇ ಕಾರಣಕ್ಕಾಗಿ ಅನುವಾದಗಳು ಮಾತ್ರ ಸಾಲದು ಎಂದು ಹಿಂದೆ ಸೂಚಿಸಿದ್ದು. ಮಾನವಿಕ ಶಾಸ್ತ್ರಗಳ ವಿದ್ಯಾರ್ಥಿಗೆ ಜಗತ್ತೇ ಪ್ರಯೋಗ ಶಾಲೆ. ಮಾನವಿಕ ಪಠ್ಯಗಳಲ್ಲಿರುವ ಸಿದ್ಧಾಂತಗಳೆಲ್ಲ ತಮ್ಮ ವಿಮರ್ಶೆಗೆ ಈ ಪ್ರಯೋಗ ಶಾಲೆಗೆ ಬರಬೇಕು. ಆದುದರಿಂದ ಎಷ್ಟಕ್ಕೆಷ್ಟು ಕ್ರಿಯಾತ್ಮಕ ಸುಧಾರಣೆಗಳನ್ನು ನಾವೀ ಶಾಸ್ತ್ರಗಳಲ್ಲಿ ತರಬಲ್ಲೆವೋ ಅಷ್ಟಕ್ಕಷ್ಟು ನಮ್ಮ ಮನಸ್ಸಿನ ಪ್ರಪಂಚ ಬೆಳೆಯುತ್ತದೆ. ಅಂದರೆ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಮಾನವಿಕ ಪಠ್ಯಗಳು ನಾಡಿನ ವಿಚಾರವಂತರ ಸಮಗ್ರ ಚಿಂತನೆಯ ಫಲವಾಗಿ ಬಂದರೆ ಮಾತ್ರ ಈ ಸುಧಾರಣೆಗಳು ನಿಜವಾದ ಸುಧಾರಣೆಗಳಾದಾವು. ಇದಕ್ಕೆ ಮುಖ್ಯವಾದ ದಾರಿ ಒಂದೇ. ಮಾನವಿಕ ಶಾಸ್ತ್ರಗಳು ಪ್ರತಿಯೊಬ್ಬ ವ್ಯಕ್ತಿಯ ಬದುಕಿನಲ್ಲಿ ಬೆರೆತುಬಂದ ಶಾಸ್ತ್ರಗಳು. ಆದುದರಿಂದ ಮಾಧ್ಯಮದ ಉದ್ದೇಶವನ್ನು ಬಿಟ್ಟು, ವಿಶ್ವವಿದ್ಯಾನಿಲಯದ ವಿದ್ಯೆಯ ಹಂತಕ್ಕೆ ಎನ್ನದೆ, ಯಾವ ಪದವಿಗಾಗಿ, ಯಾವ ತರಗತಿಗಾಗಿ ಎಂದು ಚಿಂತಿಸದೆ ನಮ್ಮ ನುಡಿಯಲ್ಲಿ ಮಾನವೀಯ ಸಮಸ್ಯೆಗಳ ಕುರಿತು, ಮೌಲ್ಯಗಳ ಕುರಿತು ಚಿಂತಿಸಿ ಬರೆದು ಪ್ರಕಟಿಸುವ ಎದೆಗಾರಿಕೆಯನ್ನು ನಾವು ತೋರಿಸುವಂತಾಗಬೇಕು. ಇಲ್ಲಿ ಮುಖ್ಯವಾಗಿ ಬರಬಹುದಾದ ಪ್ರಶ್ನೆ ಆ ಪ್ರಕಟಣೆಗಳ ಮಾರಾಟದ ಕುರಿತು. ಮಾಧ್ಯಮವಾದರೆ ವಿದ್ಯಾರ್ಥಿಗಳಾದರೂ ಕೊಂಡಾರು; ಮಾಧ್ಯಮವಾಗದಿದ್ದರೆ ಯಾರು ಕೊಂಡು ಓದುವವರು? ಇದು ನಮ್ಮದೇ ಪ್ರಶ್ನೆ; ಇದಕ್ಕೆ ಉತ್ತರವೂ ನಾವೇ! ಪ್ರತಿಯೊಂದು ವಿದ್ಯಾಸಂಸ್ಥೆಯೂ ಪ್ರಕಟಣ ವಿಭಾಗವನ್ನು ತೆರೆದು ವಿಚಾರವಂತ ಪ್ರಾಧ್ಯಾಪಕರುಗಳಿಂದ ಬರೆಸಿ ಪ್ರಕಟಿಸುವ ಕ್ರಮ ಬಂದುದಾದರೆ ಅವುಗಳನ್ನು ಓದುವವರ ಸಂಖ್ಯೆಯೂ ಬೆಳೆದೀತು ಎಂದಷ್ಟೇ ಹೇಳಬಹುದು. ಈ ರೀತಿಯಲ್ಲಿ ವಿಪುಲವಾಗಿ ಕನ್ನಡದಲ್ಲಿ ವಿಚಾರಸಾಹಿತ್ಯ ಬೆಳೆಯದೆ ಮಾನವಿಕ ಪಠ್ಯಗಳು ಮಾತ್ರ ಬರೆಯಲ್ಪಟ್ಟರೆ ಕನ್ನಡ ಮಾಧ್ಯಮದ ಉದ್ದೇಶಸಾಧನೆಯಾಗದು.

ಇದರ ಅರ್ಥ ಇಷ್ಟರವರೆಗೆ ಏನೂ ಆಗಿಲ್ಲ ಎಂಬುದಲ್ಲ. ಮೇಲೆ ಹೇಳಿದ ವಿಶ್ವವಿದ್ಯಾನಿಲಯಗಳು, ಮಿಂಚಿನ ಬಳ್ಳಿಯಂಥ ಪ್ರಕಾಶನಸಂಸ್ಥೆಗಳು ತಮ್ಮ ಪಾಲಿನ

ಪ್ರಯತ್ನಗಳನ್ನು ನಡೆಸುತ್ತಿವೆ. ಡಿ. ವಿ. ಜಿ, ಶಿವರಾಮ ಕಾರಂತರು ಮತ್ತು ಇನ್ನೆಷ್ಟೋ ವಿಚಾರವಂತ ಸಾಹಿತಿಗಳು ಬೌದ್ಧಿಕ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ಸಲ್ಲಿಸಿದ್ದಾರೆ. ಸ್ನಾತಕ ಮತ್ತು ಸ್ನಾತಕೋತ್ತರ ಮಟ್ಟದಲ್ಲಿ ಮಾನವಿಕ ವಿಷಯಗಳನ್ನು ನಮ್ಮ ಭಾಷೆಯಲ್ಲಿ ಕಲಿಸುವುದರಲ್ಲಿ ಮಾನವಿಕ ಪಠ್ಯಗಳ ಸ್ಥಾನದ ಕುರಿತು ಚಿಂತಿಸುವಾಗ ಈ ಆವಶ್ಯಕತೆಗಳನ್ನು ಪುನಃ ಚರ್ಚಿಸಬೇಕಾಯಿತು. ಕಲಿಯುವವನ ದೃಷ್ಟಿಯಲ್ಲಿ ಮಾತ್ರವಲ್ಲ, ಕಲಿಸುವವನ ದೃಷ್ಟಿಯಲ್ಲೂ ಈ ಪಠ್ಯಗಳ ಕುರಿತು ಚಿಂತನೆ ಅಗತ್ಯ. ಕನ್ನಡದಲ್ಲಿ ಪಠ್ಯಕ್ಕಿಂತ ಹೆಚ್ಚು ಕಲಿಸುವವರ ಅವಶ್ಯಕತೆಯೂ ಇದೆ. ಈ ಬಗ್ಗೆ ಬಹಳ ಹಿಂದೆ ಮಾಸ್ತಿಯವರು ಆತ್ಮ ವಿಶ್ವಾಸದ ಮಾತನ್ನು ತಮ್ಮ ಒಂದು ಪ್ರಬಂಧದಲ್ಲಿ ಬರೆದಿದ್ದಾರೆ. ಸಂಬಳಕ್ಕಾಗಿ ಇಂಗ್ಲೀಷನ್ನು ಕಲಿತ ಕನ್ನಡಿಗ ಕನ್ನಡವನ್ನು ಕಲಿಯಲಾರನೆ ಎಂದು.

ಇಷ್ಟರವರೆಗೆ ಬಂದ ಮಾನವಿಕ ಪಠ್ಯಗಳ ಕುರಿತು ಇನ್ನೊಂದು ಸೂಚನೆಯನ್ನು ನಾವಿಲ್ಲಿ ತೆಗೆದುಕೊಳ್ಳಬಹುದು. ಇದು ಮುಖ್ಯವಾಗಿ ಪಾರಿಭಾಷಿಕ ಪದಗಳಿಗೆ ಸಂಬಂಧ ಪಟ್ಟದ್ದು. ಇಂಗ್ಲೀಷಿನಲ್ಲಿ ನಾವು ಯಾವ ಮಾನವಿಕ ಶಾಸ್ತ್ರಗಳನ್ನು ಕಲಿಯುತ್ತಿದ್ದೇವೆಯೋ ಅವುಗಳಲ್ಲಿರುವ ಕೆಲವು ಮುಖ್ಯ ಪದಗಳು ಕೆಲವು ಭಾಷೆಗಳಿಂದ ರೂಪಾಂತರ ಹೊಂದಿಯೋ ಅಥವಾ ನೇರವಾಗಿಯೋ ಬಂದವುಗಳು. ಕನ್ನಡದಲ್ಲಿ ಸರಿಸಮಾನವಾದ ಪದಗಳನ್ನು ಬಳಸಿಕೊಳ್ಳುವುದು ಕಷ್ಟವಲ್ಲ; ಸುಲಭವೂ ಅಲ್ಲ. ಉದಾಹರಣೆಗೆ ವಿನಿಮಯದ ಕುರಿತು ಹೇಳುವಾಗ ಅರ್ಥಶಾಸ್ತ್ರದಲ್ಲಿ ಒಂದು ವಿಷಯ ಬರುತ್ತದೆ: Double Coincidence of Wants . ಈಗ ಪ್ರಕಟವಾದ ನಮ್ಮ ಪಠ್ಯಗಳಲ್ಲಿ ಇದನ್ನು ಅವಶ್ಯಕತೆಗಳ ದ್ವಿವಿಧ ಸಮ್ಮಿಲನ ಎಂದು ಕರೆದಿದ್ದಾರೆ. ಕನ್ನಡದಲ್ಲಿ ಆ ಅರ್ಥ ಬರುವಂತೆ ಮಾಡಲು ಎಷ್ಟು ಕಷ್ಟಪಟ್ಟಿದ್ದಾರೆ ಎಂಬುದು ಇದರಿಂದ ತಿಳಿಯುತ್ತದೆ. ಇದೇ ರೀತಿ ಇನ್ನೊಂದು ಪದ – Utility ಎಂಬುದು. ಕೆಲವರು ಇದನ್ನು ತುಷ್ಟಿ ಗುಣ ಎಂದು ಕರೆದಿದ್ದಾರೆ; ಉಪಭೋಗ ಎಂದು ಕರೆದಿದ್ದಾರೆ. ಇದರ ಬದಲು ಇಂಥ ಸಂದರ್ಭಗಳಲ್ಲಿ ಸಮಾನಪದಗಳನ್ನು ಜೋಡಿಸುವ ಬದಲು ಸರಳವಾದ ಮಾತಿನಲ್ಲಿ ವಿವರಣೆ ಕೊಡುವುದೇ ಒಳ್ಳೆಯದಲ್ಲವೇ ? ಜೆ. ಹನುಮಂತರಾಯರು 'ಕುಟುಂಬ ಜೀವನ' ಎಂಬ ತಮ್ಮ ಹೊತ್ತಗೆಯಲ್ಲಿ personal right ಎಂಬುದಕ್ಕೆ ವ್ಯಕ್ತಿತ್ವವನ್ನು ಬೆಳೆಸಿ ಕಾಪಾಡಿಕೊಳ್ಳುವ ಹಕ್ಕು' ಎಂಬ ವಿವರಣೆ ಕೊಟ್ಟಿರುವುದು ಈ ಉದ್ದೇಶದಿಂದಲೇ. ಕುಟುಂಬದ ವೈಶಿಷ್ಟ್ಯಗಳ ಕುರಿತು ಬರೆಯುವ ಆ ಸಂದರ್ಭದಲ್ಲಿ ಅವರು ಬರಿದೆ "ವೈಯಕ್ತಿಕ ಹಕ್ಕು" ಎಂದಷ್ಟೆ ಬಳಸಿದ್ದರೆ ನಿಜವಾಗಿ ಸರಳವಾಗಿ ನಮಗೆ ಅರ್ಥವಾಗುವುದು ಕಷ್ಟವಾಗುತ್ತಿತ್ತು. ವಿಷಯಗಳನ್ನು ನಮ್ಮದಾಗಿ ಮಾಡಿಕೊಂಡಷ್ಟು ಪಾರಿಭಾಷಿಕ ಪದಗಳ ಜೋಡಣೆಯು ಕೆಲಸ ಸುಲಭವಾಗುತ್ತದೆ. ಅಂದರೆ ಇದೂ ಹಿಂದೆ ಹೇಳಿದಂತೆ ಒಂದು ಸೃಷ್ಟಿ ಕಾರ್ಯವಾಗಬೇಕು. ಮಾನವಿಕ ಪಠ್ಯಗಳ ಕುರಿತು ಹೇಳುವಾಗ ಒಂದು ಸಮಾಧಾನದ ಸಂಗತಿ ಏನೆಂದರೆ ಅವುಗಳಲ್ಲಿ ಬರುವ ಹೆಚ್ಚಿನ ವಿಷಯಗಳು ನಮ್ಮ ದೈನಂದಿನ ಬದುಕಿನ ವಿಷಯಗಳು. ಇಂಗ್ಲೀಷಿನಲ್ಲಿರುವ ಮಾನವಿಕ ಶಾಸ್ತ್ರಗಳ ಪುಸ್ತಕಗಳಲ್ಲಿ ಹೆಚ್ಚಾಗಿ ಹೊಸಹೊಸ ತಾಂತ್ರಿಕ ಪದಗಳು ರಚಿಸಲ್ಪಟ್ಟಿಲ್ಲ.

ಆದುದರಿಂದ ನಮ್ಮ ಭಾಷೆಯಲ್ಲಿ ಸಂಶೋಧನೆ ಮಾಡಿ ಆದಷ್ಟು ಸಮಾನ ಪದಗಳನ್ನು ಬಳಸಬಹುದು. ಮುಖ್ಯವಾಗಿ ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ತತ್ವಶಾಸ್ತ್ರ, ತರ್ಕ ಶಾಸ್ತ್ರ ಮುಂತಾದುವುಗಳಲ್ಲಿ ಇದು ಹೆಚ್ಚು ಸುಲಭ. ಯಾವ ವಿಷಯದ ಕುರಿತು ಈಗಾಗಲೇ ಕನ್ನಡದಲ್ಲಿ ಹೆಚ್ಚು ಗ್ರಂಥಗಳ ರಚನೆಯಾಗಿದೆಯೋ ಆ ವಿಷಯುಗಳ ಪಠ್ಯಗಳು ಸರಳವಾಗಿ ಹೊರಬರಬಲ್ಲವು. ಇದಕ್ಕೆ ಉದಾಹರಣೆ ನಮ್ಮ ಎರಡೂ ವಿಶ್ವ ವಿದ್ಯಾನಿಲಯದವರು ಪ್ರಕಟಿಸಿದ ರಾಜ್ಯಶಾಸ್ತ್ರದ ಪಠ್ಯಗಳು. ಕಾರಣ ರಾಜ್ಯಶಾಸ್ತ್ರದ ಬಗ್ಗೆ ಮುಖ್ಯವಾಗಿ ಮಿಂಚಿನಬಳ್ಳಿ 12 ಪುಸ್ತಕಗಳನ್ನು ಪ್ರಕಟಿಸಿದೆ. ಎಚ್. ಆರ್. ದಾಸೇಗೌಡ ಮತ್ತು ಎಂ. ಎ. ಸಂಗಮ್ಮಾಳ್ ಬರೆದ 'ರಾಜ್ಯ ಶಾಸ್ತ್ರ ಪ್ರವೇಶಿಕೆ' ಎಂಬ ಪಠ್ಯದಲ್ಲಿ ಸಾಧಾರಣ 25ಕ್ಕೂ ಮಿಕ್ಕಿ ಕನ್ನಡ ಆಧಾರಗ್ರಂಥಗಳ ಹೆಸರುಗಳನ್ನು ಸೂಚಿಸಿದ್ದಾರೆ. ಆದರೆ ವಾಣಿಜ್ಯ, ಲೆಕ್ಕ ಮತ್ತು ಅರ್ಥಶಾಸ್ತ್ರದ ಹೆಚ್ಚಿನ ವಿಷಯಗಳಲ್ಲಿ ಇದು ಸ್ವಲ್ಪ ಕಷ್ಟಸಾಧ್ಯ. ಅಂಥ ಸಂದರ್ಭದಲ್ಲಿ ಕೆಲವು ಪದಗಳನ್ನು ಎರವಲು ಪಡೆಯು ವುದು ಒಳ್ಳೆಯ ಕ್ರಮ. ಇಲ್ಲಿ ವಿಶ್ವವಿದ್ಯಾನಿಲಯಗಳು ಮಾಡಬೇಕಾದ ಒಂದು ಮುಖ್ಯ ಕೆಲಸವಿದೆ. ಈಗಾಗಲೇ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದವುಗಳ ಕುರಿತು ಒಂದ ಕ್ಕಿಂತ ಹೆಚ್ಚಿಗೆ ಪುಸ್ತಕಗಳು ನಮ್ಮಲ್ಲಿ ಬರೆಯಲ್ಪಟ್ಟಿವೆ. ಒಂದೇ ವಿಷಯದ ಕುರಿತು ಬರೆಯಲ್ಪಟ್ಟ ವಿವಿಧ ಪುಸ್ತಕಗಳನ್ನು ಪರಿಶೀಲಿಸುವಾಗ ಕೆಲವು ಮುಖ್ಯವಾದ ಇಂಗ್ಲೀಷಿನ ಪದಗಳಿಗೆ ಸಮಾನವಾಗಿ ಬೇರೆ ಬೇರೆ ಪದಗಳನ್ನು ಬಳಸಿರುವುದನ್ನು ಕಾಣಬಹುದು. ವಿದ್ಯೆಯ ವ್ಯಾಪ್ತಿಯ ಮತ್ತು ನಾಡಿನ ಐಕ್ಯತೆಯ ದೃಷ್ಟಿಯಲ್ಲಿ ಈ ವೈವಿಧ್ಯ ಒಳ್ಳೆಯದೇ ಎಂಬುದು ಮುಖ್ಯವಾದ ಪ್ರಶ್ನೆ. ಇದನ್ನು ಹೋಗಲಾಡಿಸಲು ಈಗಾಗಲೇ ಬರೆದ ಲೇಖಕರನ್ನು ಮತ್ತು ಇನ್ನು ಬರೆಯುವ ಲೇಖಕರನ್ನು ಆಗಾಗ್ಗೆ ಒಂದೆಡೆ ಸೇರುವಂತೆ ಮಾಡಿ ಮುಂದಿನ ಆವೃತ್ತಿಗಳಲ್ಲಿ ಆ ಕೊರತೆಗಳನ್ನು ನೀಗಿಸುವ ಸುಲಭ ಮಾರ್ಗವನ್ನು ಹುಡುಕುವುದು ಸಾಧ್ಯವಿದೆ. ಮೈಸೂರು ವಿಶ್ವವಿದ್ಯಾನಿಲಯದವರಿಂದ ಬರಲಿರುವ "ಮಾನವಿಕ ಕರ್ಣಾಟಕ"ದಲ್ಲಿ ಇದಕ್ಕೆಲ್ಲ ಎಡೆ ಇದೆ.

ವಿದ್ಯೆ ಒಂದು ಪ್ರಯತ್ನ. ವಿದ್ಯಾರ್ಥಿಯ ಮಾನಸಿಕ ಆಳ ಮತ್ತು ಆರೋಗ್ಯ ನಿಜವಾದ ವಿದ್ಯೆಯನ್ನು ಹೊಂದಲು ಸಾಧನ. ಅವಕ್ಕೆ ಪೂರಕ ಒಳ್ಳೆಯ ಪಠ್ಯಗಳು; ಒಳ್ಳೆಯ ಆಹಾರದಂತೆ. ಈ ಪಠ್ಯಗಳು ವಿದ್ಯಾಪದ್ಧತಿಯ ಕ್ರಿಯಾತ್ಮಕ ಚೈತನ್ಯದ ಪ್ರತೀಕಗಳು. ಮಾನವಿಕ ಪಠ್ಯಗಳು ನಮ್ಮೊಳಗಿರುವ ವಿದ್ಯೆಯನ್ನು ಪ್ರಚೋದಿಸುವ ಸಾಧನಗಳೆಂದರೆ ತಪ್ಪಾಗಲಾರದು. ಅವುಗಳ ಮುಖ್ಯ ವಿಷಯ ವ್ಯಕ್ತಿ ವ್ಯಕ್ತಿಯೊಳಗಣ ಸಂಬಂಧಗಳ ವಿವೇಚನೆ. ಈ ಸಂಬಂಧದ ಕುರಿತು ಮಾರ್ಕ್ಸ್ ಮೊದಲಾದ ಪಶ್ಚಿಮ ವಿದ್ವಾಂಸರ ವಿಚಾರಗಳನ್ನೆಲ್ಲ ನಾವು ನಮ್ಮದಾಗಿ ಮಾಡಿಕೊಂಡಿದ್ದೇವೆ. ಪರಿಪೂರ್ಣ ವಲ್ಲದ ಈ ಪ್ರಬಂಧದಲ್ಲಿ ಕೊನೆಯದಾಗಿ ಒಂದೇ ಒಂದು ಮಾತು: ಅಂಥ ವಿದ್ವಾಂಸರ ಸೃಷ್ಟಿಗೆ ನಮ್ಮ ಪಠ್ಯಗಳೂ ಕಾರಣವಾಗಲಿ ಎಂಬುದು. ಇದು ಬರಿಯ ಆದರ್ಶದ ಮಾತಾಗಲಿಕ್ಕಿಲ್ಲವಷ್ಟೆ?

# ವೈಜ್ಞಾನಿಕ ಪಠ್ಯಗಳು

ಪ್ರಬಂಧ

ಜಿ. ಆರ್. ಲಕ್ಷ್ಮಣರಾವ್

ಸ್ನೇಹಿತರೇ,

ವ್ಯವಸ್ಥಾಪಕರ ಆದೇಶದ ಮೇರೆಗೆ ನಾನು ನಿಮ್ಮ ಮುಂದೆ ಈಗ ಮಂಡಿಸು ತ್ತಿರುವ ಪ್ರಬಂಧದಲ್ಲಿ ವಿಶ್ವವಿದ್ಯಾನಿಲಯ ಮಟ್ಟದ ಕನ್ನಡ ವೈಜ್ಞಾನಿಕ ಪಠ್ಯಪುಸ್ತಕ ಗಳನ್ನು ಕುರಿತು ಚರ್ಚಿಸಲು ಯತ್ನಿಸಿದ್ದೇನೆ. ಶಿಕ್ಷಣದಲ್ಲಿ ಪಠ್ಯಪುಸ್ತಕಗಳ ಪಾತ್ರವೇನು? ಯಶಸ್ವಿಯಾಗಿ ನಿರ್ವಹಿಸಬೇಕಾದರೆ ಪಠ್ಯ ಪುಸ್ತಕಗಳು ಹೇಗಿರಬೇಕು? ಅವುಗಳನ್ನು ಆ ಪಾತ್ರವನ್ನು ಶಿಕ್ಷಣ ಕ್ರಮದಲ್ಲಿ ಹೇಗೆ ಉಪಯೋಗಿಸಬೇಕು? ಇವೇ ಮುಂತಾದ ಸಮ ಸ್ಯೆಗಳ ಚರ್ಚೆಗೆ ನಾನು ಕೈಹಾಕುವುದಿಲ್ಲ. ಶಿಕ್ಷಣ ತಜ್ಞರೇ ಭಾಗವಹಿಸುವ ಗೋಷ್ಠಿಯಲ್ಲಿ ಈ ಸಮಸ್ಯೆಗಳನ್ನು ಚರ್ಚಿಸುವುದು ಸೂಕ್ತ. ಇಂದಿನ ವಿಚಾರ ಗೋಷ್ಠಿಯಲ್ಲಿ ಸಮ ಸ್ಯೆಯ ಬೇರೊಂದು ಮುಖ ಪ್ರಾಮುಖ್ಯತೆ ಪಡೆಯುತ್ತದೆ. ವಿಚಾರ ಗೋಷ್ಠಿಯ ಪ್ರಧಾನ ಶಿರೋನಾಮೆಯನ್ನು ಪರಿಶೀಲಿಸಿದರೆ ಅದೇನೆಂಬುದು ಸ್ಪಷ್ಟವಾಗುತ್ತದೆ. ವಿಚಾರ ಗೋಷ್ಠಿಯ ವಿಷಯ "ಕನ್ನಡ ಪಠ್ಯ ಪುಸ್ತಕಗಳು" ಎಂದಿದೆ. ಇಲ್ಲಿ "ಕನ್ನಡ" ಎಂಬ ಪದಕ್ಕೆ ಪ್ರಾಶಸ್ತ್ಯ ನೀಡಬೇಕು. ಕನ್ನಡದಲ್ಲಿ ವೈಜ್ಞಾನಿಕ ಪಠ್ಯ ಪುಸ್ತಕಗಳ ಆವಶ್ಯ ಕತೆ ಇದೆಯೆ? ಇರುವುದಾದರೆ ಅದನ್ನು ಪೂರೈಸುವುದು ಹೇಗೆ? ಈ ಮಾರ್ಗದಲ್ಲಿ ಉ ದ್ಭವಿಸುವ ಸಮಸ್ಯೆಗಳು ಯಾವುವು? ಇವೇ ಮುಂತಾದ ಪ್ರಶ್ನೆಗಳನ್ನು ನಾವು ಇಂದು ಪರಿಶೀಲಿಸೋಣ.

ಈ ವಿಚಾರಗೋಷ್ಠಿಯಲ್ಲಿ ಕನ್ನಡ ವೈಜ್ಞಾನಿಕ ಪಠ್ಯ ಪುಸ್ತಕಗಳನ್ನು ಕುರಿತು ಚರ್ಚೆಗೆ ಅವಕಾಶ ನೀಡುವುದನ್ನು ನೋಡಿದರೆ ಇದು ಈಗ ಒಂದು ಜೀವಂತ ಪ್ರಶ್ನೆ ಎಂಬುದು ಸ್ಪಷ್ಟ. ಕನ್ನಡದಲ್ಲಿ ಬೋಧನೆ ನಡೆದರೆ ತಾನೆ, ಕನ್ನಡ ಪಠ್ಯ ಪುಸ್ತಕಗಳು ಅವ ಶ್ಯಕ? ಇಂದು ನಮ್ಮ ರಾಜ್ಯದ ಮೂರು ವಿಶ್ವ ವಿದ್ಯಾಲಯಗಳ ವ್ಯಾಪ್ತಿಗೊಳಪಟ್ಟ ಯಾವ ಕಾಲೇಜಿನಲ್ಲಿಯೂ ಸ್ನಾತಕ ಮಟ್ಟದಲ್ಲಿ ಕನ್ನಡ ಮಾಧ್ಯಮ ಆಚರಣೆಯಲ್ಲಿಲ್ಲ. ಪ್ರೀಯೂನಿವರ್ಸಿಟಿ ತರಗತಿಗಳಲ್ಲಿ ಮಾತ್ರ, ಅದೂ ಕೆಲವು ಕಾಲೇಜುಗಳಲ್ಲಿ, ಕನ್ನಡ ಮಾಧ್ಯಮ ಬಳಕೆಯಲ್ಲಿದೆ. ಆದರೂ, ಈ ಸಮಸ್ಯೆ – ಕನ್ನಡ ವೈಜ್ಞಾನಿಕ ಪಠ್ಯ ಪುಸ್ತಕಗಳ ಸಮಸ್ಯೆ ಜನರ ಗಮನವನ್ನು ಸೆಳೆಯುತ್ತಿರುವುದೇಕೆ? ಅದಕ್ಕೆ ಕಾರಣಗಳಿವೆ. ವಿಶ್ವವಿದ್ಯಾನಿಲಯವನ್ನು ಪ್ರವೇಶಿಸುವ ವಿದ್ಯಾರ್ಥಿಗಳ ಇಂಗ್ಲಿಷ್ ಜ್ಞಾನದ ಮಟ್ಟ

ಬಹಳವಾಗಿ ಇಳಿದು ಹೋಗಿರುವುದರಿಂದ ಕಾರ್ಯತಃ ಇಂಗ್ಲಿಷ್ ಮಾಧ್ಯಮ ನಿಷ್ಪ್ರಯೋಜಕವಾಗಿ ಮುರಿದುಬಿದ್ದು, ಅಧ್ಯಾಪಕರು ಗತ್ಯಂತರವಿಲ್ಲದೆ ತರಗತಿಗಳಲ್ಲಿ ಹೆಚ್ಚು ಹೆಚ್ಚಾಗಿ ಕನ್ನಡವನ್ನು ಬಳಸಲು ಪ್ರಾರಂಭಿಸಿದ್ದಾರೆ. ಯಥಾವತ್ತಾಗಿ ಪೋಷಿಸದೆ ಕನ್ನಡ ಮಾಧ್ಯಮ ಜಾರಿಗೆ ಬರುತ್ತಿದೆ. ನಮ್ಮ ತಲೆಮಾರಿನವರು ವಿದ್ಯಾರ್ಥಿಗಳಾಗಿದ್ದಾಗ ಹೈಸ್ಕೂಲು ತರಗತಿಗಳಲ್ಲೂ ವಿದ್ಯಾರ್ಥಿಯು ಅಪ್ಪಿತಪ್ಪಿ ಒಂದು ಕನ್ನಡ ವಾಕ್ಯ ಮಾತನಾಡಿದರೆ ಉಪಾಧ್ಯಾಯರು ಕೂಡಲೇ "Speak in English"ಎಂದು ಗದರಿಸುತ್ತಿದ್ದುದುಂಟು. ಈಗಲಾದರೋ ಕಾಲೇಜು ಅಧ್ಯಾಪಕರೇ ತಮ್ಮ ಇಂಗಿತವನ್ನು ಸಮರ್ಪಕವಾಗಿ ತಿಳಿಯಪಡಿಸುವ ಯತ್ನದಲ್ಲಿ ಸ್ವಭಾಷೆಯ ನೆರವು ಕೋರುತ್ತಿದ್ದಾರೆ. ಸಾರ್ವಜನಿಕರಲ್ಲಿ ಶಾಸ್ತ್ರ ವಿಷಯಗಳನ್ನು ಕುರಿತು ಲೇಖನಗಳಿಗೆ, ಪುಸ್ತಕಗಳಿಗೆ ಬೇಡಿಕೆ ಕ್ರಮೇಣ ಹೆಚ್ಚಾಗತೊಡಗಿದೆ. ಕನ್ನಡ ಮಾಧ್ಯಮದ ಪರ ಜನಾಭಿಪ್ರಾಯ ಬಲಗೊಳ್ಳುತ್ತಿದೆ. ಈ ಎಲ್ಲ ಕಾರಣಗಳಿಂದ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಇಂದಲ್ಲ, ನಾಳೆ ಕನ್ನಡ ಮಾಧ್ಯಮ ಆಚರಣೆಗೆ ಬರುವುದು ಖಂಡಿತ; ಯಾರಿಗೆ ಬೇಕಿರಲಿ, ಯಾರಿಗೆ ಬೇಡದಿರಲಿ, ಅದನ್ನು ಲೆಕ್ಕಿಸದೆ ಕನ್ನಡ ಮಾಧ್ಯಮ ಅಸ್ತಿತ್ವಕ್ಕೆ ಬಂದೇ ತೀರುವುದೆಂಬ ಕೆಲವರ ಹಾರೈಕೆ, ಮತ್ತೆ ಕೆಲವರ ಭಯ, ಇವು ಈ ಸಮಸ್ಯೆಗೆ ದೊರೆಯುತ್ತಿರುವ ಪ್ರಾಶಸ್ತ್ಯಕ್ಕೆ ಕಾರಣ.

ಸ್ವಭಾಷಾ ಮಾಧ್ಯಮದ ಅಂಗೀಕಾರಕ್ಕೆ ವಿರೋಧ ವ್ಯಕ್ತಪಡಿಸುವವರು ಸಾಮಾನ್ಯವಾಗಿ ಮುಂದೊಡ್ಡುವ ಕಾರಣಗಳು ಹಲವು. ವಿವಿಧ ಶಾಸ್ತ್ರಗಳನ್ನು ಕುರಿತು ಪಠ್ಯ ಪುಸ್ತಕಗಳು ನಮ್ಮ ಭಾಷೆಯಲ್ಲಿಲ್ಲ ಎಂಬುದು ಅವುಗಳಲ್ಲೊಂದು. ಈ ವಾದವನ್ನು ಮುಂದಿಡುವಾಗ "ಪಠ್ಯಪುಸ್ತಕ" ಎಂಬ ಶಬ್ದವನ್ನು ಅವರು ಉಪಯೋಗಿಸಿದರೂ ಅದನ್ನು ಬಹುವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ಇಂಗ್ಲಿಷ್ ಭಾಷೆಯಲ್ಲಿ ದೊರೆಯುವಂತೆ ಶಬ್ದಕೋಶಗಳು, ವಿಶ್ವಕೋಶಗಳಂಥ ಪರಾಮರ್ಶನ ಗ್ರಂಥಗಳು, ನಿಯತಕಾಲಿಕ ಪ್ರಕಟಣೆಗಳು, ವಿವಿಧ ಮಟ್ಟದ ಪಠ್ಯಪುಸ್ತಕಗಳು, ಇವೆಲ್ಲವೂ ಕನ್ನಡದಲ್ಲಿ ದೊರೆಯದಿದ್ದ ಮೇಲೆ ಆ ಭಾಷೆಯನ್ನು ಬೋಧನ ಮಾಧ್ಯಮವಾಗಿ ಬಳಸುವುದು ಸಾಧುವಲ್ಲ, ಅಷ್ಟೇ ಏಕೆ, ಅದು ಸಾಧ್ಯವೂ ಇಲ್ಲ ಎಂಬುದು ಅವರ ಭಾವನೆ. ಇದರಲ್ಲಿ ಒಂದು ಕೌತುಕ ವಿಷಯವಿದೆ. ಪರೀಕ್ಷೆಯೇ ಪ್ರಧಾನವಾಗಿರುವ ನಮ್ಮ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಪುಸ್ತಕಗಳನ್ನು ಬಳಸುವ ವಿದ್ಯಾರ್ಥಿಗಳೇ ದುರ್ಲಭ. ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಪಠ್ಯಪುಸ್ತಕಗಳು ಯಾಕೆ ಬೇಕು? ಅಧ್ಯಾಪಕರು ತರಗತಿಯಲ್ಲಿ ಬರೆಸಿದ ನೋಟ್ಸ್ ಸಾಕು. ಅಲ್ಲದೆ ಪರೀಕ್ಷೆಗಳಿಗಾಗಿಯೇ ತಯಾರಿಸಿದ ಗೈಡ್‌ಗಳು ಮಾರುಕಟ್ಟೆಯಲ್ಲಿ ಹೇರಳವಾಗಿ ದೊರೆಯುತ್ತವೆ. ಇಂಗ್ಲಿಷ್ ಭಾಷೆಯಲ್ಲಿ ಪಠ್ಯ ಪುಸ್ತಕಗಳೇನೋ ಹೇರಳವಾಗಿವೆ, ನಿಜ. ಆದರೆ ಆ ಪುಸ್ತಕಗಳನ್ನು ಇಂದು ಯಾರೂ ಉಪಯೋಗಿಸುತ್ತಿಲ್ಲ. ನಮ್ಮ ವಿದ್ಯಾರ್ಥಿಗಳಿಗೆ ಆ ಪುಸ್ತಕಗಳ ಆವಶ್ಯಕತೆಯೇ ಕಂಡು ಬಂದಿಲ್ಲ. ಬೋಧನ ಮಾಧ್ಯಮ ಬದಲಾಯಿಸಬೇಕೆಂದಾಗ ಮಾತ್ರ ಪಠ್ಯಪುಸ್ತಕಗಳು ಮಾತ್ರವಲ್ಲ, ಪುಸ್ತಕ ಭಂಡಾರದಲ್ಲಿರುವ ಪುಸ್ತಕಗಳನ್ನೆಲ್ಲಾ ಅನುವಾದಿಸಿ ನಮ್ಮ ಭಾಷೆಯಲ್ಲಿ ಒದಗಿಸುವವರೆಗೂ ಮಾಧ್ಯಮದ ಬದಲಾವಣೆ ಸಾಧ್ಯವಿಲ್ಲ ಎಂದು ವಾದಿಸುತ್ತಾರೆ.

ಒಂದು ದೃಷ್ಟಿಯಿಂದ ಈ ವಾದ ಸರಿಯೆಂದೇ ತೋರುತ್ತದೆ. ಏಕೆಂದರೆ, ಇಂದಿನ ಗಿಳಿಪಾಠದ ಶಿಕ್ಷಣ ವ್ಯವಸ್ಥೆಯನ್ನು ಸರಿಪಡಿಸಿ ಕಲಿಕೆ ಯಥಾರ್ಥವಾಗುವಂತೆ ಮಾಡಲು ಅಗತ್ಯವಾಗುವ ಕ್ರಮಗಳಲ್ಲಿ ಒಂದಾದ ಶಿಕ್ಷಣ ಮಾಧ್ಯಮದ ಬದಲಾವಣೆಯನ್ನು ನಾವು ಕೈಗೊಂಡದ್ದೇ ಆದರೆ, ನಿಜವಾದ ಕಲಿಕೆಯ ಸ್ವಾರಸ್ಯವನ್ನು ಕಂಡ ವಿದ್ಯಾರ್ಥಿಗಳು ಹೆಚ್ಚುಹೆಚ್ಚಾಗಿ ಓದುವ ಸಾಮಗ್ರಿಯನ್ನು ಅಪೇಕ್ಷಿಸಿಯಾರು. ಆಗ ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯಕ್ಕೆ ಹೆಚ್ಚಿನ ಬೇಡಿಕೆ ಬಂದೀತು.

ಆದರೂ ನಾವು ಒಂದು ವಿಷಯವನ್ನು ಗಮನದಲ್ಲಿಡಬೇಕು. ಇಂಗ್ಲಿಷ್ ಭಾಷೆಯಲ್ಲಿ ದೊರೆಯುವ ವಿಪುಲವಾದ ವಿಜ್ಞಾನಸಾಹಿತ್ಯ ಬೇರಾವ ಭಾಷೆಯಲ್ಲಿಯೂ ದೊರೆಯುವುದಿಲ್ಲ. ಫ್ರೆಂಚ್, ಜರ್ಮನ್, ರಷ್ಯನ್, ಬಹುಶಃ ಸ್ಪಾನಿಷ್ ಭಾಷೆಗಳಲ್ಲಿ ತಕ್ಕಮಟ್ಟಿನ ಸಾಮಗ್ರಿ ದೊರೆತೀತು. ಉಳಿದ ಅಪ್ರಧಾನ ಐರೋಪ್ಯ ಭಾಷೆಗಳಾದ ಸ್ವೀಡಿಷ್, ನಾರ್ವೇಜಿಯನ್, ಡೇನಿಷ್, ಡಚ್ ಭಾಷೆಗಳಲ್ಲಿ, ಜಪಾನೀ ಮತ್ತು ಚೀನೀ ಭಾಷೆಗಳಲ್ಲಿ ಅಷ್ಟು ಹೇರಳವಾದ ಶಾಸ್ತ್ರಸಾಹಿತ್ಯ ದೊರೆಯುವುದಿಲ್ಲ. ಆದಾಗ್ಯೂ ಆ ಭಾಷೆಗಳನ್ನು ಆಯಾ ದೇಶಗಳಲ್ಲಿ ಶಿಕ್ಷಣ ಮಾಧ್ಯಮವನ್ನಾಗಿ ಬಳಸುತ್ತಿದ್ದಾರೆ, ಎಲ್ಲ ಹಂತಗಳಲ್ಲೂ ಬಳಸುತ್ತಿದ್ದಾರೆ.

ಬೆಲ್ಜಿಯಂ, ಹಾಲೆಂಡ್, ಸ್ವಿಟ್ಸರ್ಲೆಂಡ್, ಡೆನ್ಮಾರ್ಕ್, ಸ್ವೀಡನ್, ಮುಂತಾದ ಚಿಕ್ಕ ಚಿಕ್ಕ ಐರೋಪ್ಯ ರಾಷ್ಟ್ರಗಳಲ್ಲಿ ನಾಲ್ಕಾರು ವರ್ಷಗಳಿದ್ದು, ಅಲ್ಲಿನ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ, ಸಂಶೋಧನೆ ನಡೆಸಿ ಬಂದಿರುವ ನನ್ನ ಸ್ನೇಹಿತರು ಹೇಳುವುದನ್ನು ಕೇಳಿದ್ದೇನೆ: ಬೋಧನೆ ಮತ್ತು ಕಲಿಕೆ ಸಮರ್ಪಕವಾಗಬೇಕೆಂಬ ಉದ್ದೇಶದಿಂದ ಆ ದೇಶಗಳಲ್ಲಿ ಎಲ್ಲ ಹಂತಗಳಲ್ಲೂ ಬೋಧನೆ ಆಯಾ ಭಾಷೆಗಳಲ್ಲೇ ನಡೆಸುತ್ತಿದ್ದಾರೆ. ಆದರೂ ಆ ಭಾಷೆಗಳ ವೈಜ್ಞಾನಿಕ ಗ್ರಂಥಗಳು ವಿಶ್ವವಿದ್ಯಾನಿಲಯಗಳ ಪುಸ್ತಕ ಭಂಡಾರಗಳಲ್ಲಿ ಸಹ ಹೇರಳವಾಗಿ ದೊರೆಯುವುದಿಲ್ಲ. ತರಗತಿಗಳಿಗೆ ನಿಗದಿಯಾಗಿರುವ ಪಠ್ಯಕ್ರಮವನ್ನು ಆಧರಿಸಿ ತಯಾರಿಸಿದ ಪಠ್ಯಪುಸ್ತಕಗಳಲ್ಲದೆ ಒಂದೊಂದು ಶಾಸ್ತ್ರವಿಭಾಗದಲ್ಲೂ ವಿಷಯ ಸಂಗ್ರಹಣೆಗೆ ಅನುಕೂಲವಾಗುವಂಥ ಹಲವಾರು ಗ್ರಂಥಗಳು ಸಿಕ್ಕುತ್ತವೆ. ಅಷ್ಟು ಬಿಟ್ಟರೆ ಆ ಭಾಷೆಯ ಪುಸ್ತಕಗಳಿಗಿಂತಲೂ ಅಲ್ಲಿನ ಪುಸ್ತಕ ಭಂಡಾರಗಳಲ್ಲಿ ಇಂಗ್ಲಿಷ್, ಜರ್ಮನ್, ಮುಂತಾದ ಅನ್ಯ ಭಾಷೆಗಳ ಪುಸ್ತಕಗಳೇ ಹೆಚ್ಚಾಗಿರುತ್ತವೆ. ತಮ್ಮ ಭಾಷೆಯಲ್ಲಿ ದೊರೆಯದ ವಿಷಯಗಳನ್ನು ಸಂಗ್ರಹಿಸಲು ವಿದ್ಯಾರ್ಥಿಗಳೂ ಅಧ್ಯಾಪಕರೂ ಅನ್ಯಭಾಷೆಗಳ ಪುಸ್ತಕಗಳನ್ನೇ ಆಶ್ರಯಿಸುತ್ತಾರೆ. ಅನ್ಯಭಾಷೆಯ ಮೇಲೆ ಅವರಿಗೆ ಹೆಚ್ಚಿನ ಪ್ರಭುತ್ವವಿಲ್ಲದಿದ್ದರೂ ನಿರ್ದಿಷ್ಟ ಶಾಸ್ತ್ರ ವಿಭಾಗದಲ್ಲಿ ಪರಿಶ್ರಮವಿರುವುದರಿಂದ ಮತ್ತು ಆ ಶಾಸ್ತ್ರದ ಅಧ್ಯಯನಕ್ಕೆಂದೇ ಗೊತ್ತುಮಾಡಿದ ವಿಶಿಷ್ಟ ಕ್ರಮದಲ್ಲಿ ಆ ಭಾಷೆಯನ್ನು ಒಂದೆರಡು ವರ್ಷಕಾಲ ಕಲಿತಿರುವುದರಿಂದ ಹೆಚ್ಚು ತೊಂದರೆ ಇಲ್ಲದೆ ಆ ಭಾಷೆಯ ಶಾಸ್ತ್ರ ಗ್ರಂಥಗಳನ್ನು ಮಾತ್ರ ಓದಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನು ಅವರು ಪಡೆದಿರುತ್ತಾರೆ. ವಿಜ್ಞಾನಿಗಳಿಗೆ ನಿರ್ದಿಷ್ಟ ನಿಯತಕಾಲಿಕಗಳಲ್ಲಿ ಪ್ರಕಟವಾದ ಸಂಶೋಧನ ಪ್ರಬಂಧಗಳು ಬೇಕೆನಿಸಿದರೆ ಅವುಗಳನ್ನು ಅನುವಾದಮಾಡಿ ಒದಗಿಸುವ ನಮ್ಮ INSDOC

(Indian National Scientific Documentation Centre) ನಂಥ ಸಂಸ್ಥೆಗಳು ಆ ದೇಶದಲ್ಲಿವೆ.

ನಮ್ಮ ದೇಶದಲ್ಲಿ ಯಶಸ್ವಿಯಾಗಿ ಸ್ವಭಾಷಾ ಮಾಧ್ಯಮವನ್ನು ಆಚರಣೆಗೆ ತಂದು ಆ ಮೂಲಕ ಶಿಕ್ಷಣಮಟ್ಟವನ್ನು ಮೇಲೆತ್ತಬೇಕಾದರೆ ನಮಗೆ ಯಾವ ಪುಸ್ತಕ ಗಳು ನಮ್ಮ ಭಾಷೆಯಲ್ಲಿ ಅತ್ಯಾವಶ್ಯಕ, ಅವುಗಳನ್ನು ಹೇಗೆ ಒದಗಿಸಿಕೊಳ್ಳುವುದು, ಪ್ರೌಢ ವ್ಯಾಸಂಗ, ಸಂಶೋಧನೆಗಳಿಗೆ ಅನುಕೂಲವಾಗುವಂತೆ ಎಂತೆಂತಹ ವ್ಯವಸ್ಥೆ ಗಳನ್ನು ಮಾಡಿಕೊಳ್ಳಬೇಕು, ಎಂಬ ಬಗ್ಗೆ ನಮಗೊಂದು ಮಾದರಿ ಬೇಕೆನಿಸಿದರೆ, ವಿಜ್ಞಾನ ಮತ್ತು ಯಂತ್ರಕಲೆಗಳಲ್ಲಿ ಪ್ರಗತಿ ಸಾಧಿಸಿರುವ, ಆದರೆ ಅವರದೇ ಭಾಷೆಯನ್ನು ಬಳಸುತ್ತಿರುವ ಸ್ವೀಡನ್, ಡೆನ್ಮಾರ್ಕ್, ಜಪಾನ್ ಮುಂತಾದ ಅಪ್ರಧಾನ ರಾಷ್ಟ್ರಗಳನ್ನು ಬಹುಶಃ ನಾವು ಮಾದರಿಯಾಗಿ ತೆಗೆದುಕೊಳ್ಳಬೇಕಾದೀತು.

ಜನಸಾಮಾನ್ಯರಿಗಾಗಿ ರಚಿಸಿದ ಜನಪ್ರಿಯ ವಿಜ್ಞಾನ ಸಾಹಿತ್ಯವನ್ನು ಬಿಟ್ಟು ವಿಜ್ಞಾನದ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ಮತ್ತು ಸಂಶೋಧಕ ವಿಜ್ಞಾನಿಗಳಿಗೆ ಬೇಕಾಗುವ ವಿಜ್ಞಾನ ಸಾಹಿತ್ಯವನ್ನು ಗಣನೆಗೆ ತೆಗೆದುಕೊಂಡರೆ, ಅವುಗಳಲ್ಲಿ ಮುಖ್ಯವಾಗಿ ಕೆಲವು ಪ್ರಕಾರಗಳನ್ನು ಗುರುತಿಸಬಹುದು.

ಮೊದಲನೆಯದಾಗಿ, ಸಂಶೋಧನಾ ಪ್ರಬಂಧಗಳನ್ನೂ, ವರದಿಗಳನ್ನೂ ಪ್ರಕ ಟಿಸುವ ನಿಯತಕಾಲಿಕಗಳು. ಒಂದು ರಾಷ್ಟ್ರದ ಅಥವಾ ಒಂದು ಭಾಷೆಯ ಪ್ರತಿಷ್ಠೆ, ಘನತೆಗಳನ್ನು ಮೆರೆಯಿಸುವುದಕ್ಕೆ ವಿನಾ ಈ ಬಗೆಯ ಸಾಹಿತ್ಯ ಪ್ರತಿಯೊಂದು ಭಾಷೆಯಲ್ಲಿಯೂ ಬೆಳೆಯಲೇಬೇಕೆಂದು ಹೇಳುವಂತಿಲ್ಲ. ಸಂಶೋಧಕರು ತಮ್ಮ ಸಂಶೋ ಧನೆಯ ಫಲಿತಾಂಶಗಳನ್ನು ಪ್ರಕಟಿಸುವಾಗ ಅದೇ ಕ್ಷೇತ್ರದಲ್ಲಿ ದುಡಿಯುತ್ತಿರುವ ಇತರ ವಿಜ್ಞಾನಿಗಳ ಗಮನಕ್ಕೆ ತಮ್ಮ ಫಲಿತಾಂಶಗಳನ್ನು ತರುವುದಷ್ಟೇ ಅವರ ಮುಖ್ಯ ಉದ್ದೇಶ. ಆದುದರಿಂದ ನಿರ್ದಿಷ್ಟ ಶಾಖೆಗೆ ಮೀಸಲಾದ ಜರ್ಮನ್ ಪತ್ರಿಕೆಯೊಂದು ಹೆಚ್ಚಿನ ಮಾನ್ಯತೆ ಪಡೆದಿದ್ದರೆ ಇಂಗ್ಲೀಷ್ ಭಾಷೆಯನ್ನಾಡುವ ರಾಷ್ಟ್ರಗಳ ವಿಜ್ಞಾನಿಗಳೂ ತಮ್ಮ ಸಂಶೋಧನಾ ಪ್ರಬಂಧಗಳನ್ನು ಆ ಜರ್ಮನ್ ಪತ್ರಿಕೆಯಲ್ಲೇ ಪ್ರಕಟಿಸಲು ಇಷ್ಟಪಡುತ್ತಾರೆ. ಮೇಲಾಗಿ, ಅವಶ್ಯವಾದಾಗ ಯಾವ ಭಾಷೆಯ ಪತ್ರಿಕೆಯಲ್ಲಿನ ಲೇಖನವನ್ನೇ ಆಗಲಿ ಬೇಕಾದ ಭಾಷೆಗೆ ತರ್ಜುಮೆ ಮಾಡಿ ಒದಗಿಸುವಂಥ ವ್ಯವಸ್ಥೆ ಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಕೆಲಸಮಾಡುತ್ತಿವೆ. ಆದುದರಿಂದ ನಿಯತಕಾಲಿಕ ಗಳ ಬಗ್ಗೆ ಹೆಚ್ಚಿನ ಚರ್ಚೆ ಇಲ್ಲಿ ಅನಗತ್ಯ.

ವೈಜ್ಞಾನಿಕ ಶಬ್ದಕೋಶಗಳು, ವಿಶ್ವಕೋಶಗಳು, ಕೈಪಿಡಿಗಳು, ಮುಂತಾದ ಪರಾ ಮರ್ಶನ ಗ್ರಂಥಗಳು ಎರಡನೆಯ ಗುಂಪಿಗೆ ಸೇರಿದವು. ವಿದ್ಯಾರ್ಥಿಗಳು, ಅಧ್ಯಾಪಕರು, ಸಂಶೋಧಕರು, ಮುಂತಾದ ಎಲ್ಲ ವರ್ಗದವರಿಗೂ ಈ ಬಗೆಯ ಗ್ರಂಥಗಳು ಅಗತ್ಯ. ಇವುಗಳನ್ನು ನಮ್ಮ ಭಾಷೆಯಲ್ಲಿ ಒದಗಿಸುವುದು ಅತ್ಯಾವಶ್ಯಕ. ಆದರೆ ಇವುಗಳಿಗಾಗಿ ಕಾದು ಕುಳಿತಿರಬೇಕಾದ ಪ್ರಮೇಯವಿಲ್ಲ. ವಿದ್ಯಾರ್ಥಿಗಳ ನಿತ್ಯ ಬಳಕೆಗೆ ಇವು ಬೇಕಾಗು ವುದಿಲ್ಲವಾದುದರಿಂದ ಇವುಗಳ ಅಗತ್ಯತೆಯನ್ನು ಇಂಗ್ಲೀಷ್ ಭಾಷೆಯಲ್ಲಿ ಹೇರಳವಾಗಿ ದೊರೆಯುವ ಈ ವಿಧವಾದ ಗ್ರಂಥಗಳು ಸದ್ಯಕ್ಕೆ ಪೂರೈಸಬಲ್ಲವು.

ಪ್ರೌಢವ್ಯಾಸಂಗ ಕೈಗೊಳ್ಳುವವರಿಗೆ ಆಕರಗ್ರಂಥಗಳಾಗುವ ಪ್ರಕರಣ ಗ್ರಂಥಗಳು (Treatises) ಮತ್ತು ಏಕ ಪ್ರಬಂಧಗಳನ್ನು (Monographs) ಮೂರನೆಯ ಗುಂಪಿಗೆ ಸೇರಿಸಬಹುದು. ಯಾವುದೇ ವಿಜ್ಞಾನ ವಿಭಾಗವನ್ನು ಆರಿಸಿಕೊಂಡು ಅದರ ಎಲ್ಲ ಭಾಗಗಳನ್ನೂ ವಿಸ್ತಾರವಾಗಿ ನಿರೂಪಿಸುವ ಗ್ರಂಥಗಳನ್ನು ಪ್ರಕರಣ ಗ್ರಂಥಗಳು (Treatises) ಎಂದು ಕರೆಯುತ್ತಾರೆ. ಅನೇಕ ವರ್ಷಗಳ ಅಧ್ಯಯನ, ಅಧ್ಯಾಪನ ಗಳಿಂದ ನಿರ್ದಿಷ್ಟ ವಿಜ್ಞಾನ ವಿಭಾಗದಲ್ಲಿ ವಿಶೇಷ ಪರಿಶ್ರಮ ಪಡೆದ ಹಿರಿಯ ವಿಜ್ಞಾನಿ ಗಳು ಸಾಮಾನ್ಯವಾಗಿ ಇಂತಹ ಗ್ರಂಥಗಳ ರಚನೆಯನ್ನು ಕೈಗೊಳ್ಳುತ್ತಾರೆ. ಯಾವುದೇ ವಿಜ್ಞಾನ ವಿಭಾಗಕ್ಕೆ ಸೇರಿದ ಅಲ್ಪವ್ಯಾಪ್ತಿಯ ವಿಷಯ ಒಂದನ್ನು ಆರಿಸಿಕೊಂಡು ಅದರ ಎಲ್ಲಾ ಮುಖಗಳನ್ನೂ ಸವಿಸ್ತಾರವಾಗಿ ಮತ್ತು ವಿಮರ್ಶಾತ್ಮಕವಾಗಿ ಚರ್ಚಿಸುವ ಪುಸ್ತಕಗಳನ್ನು ಏಕಪ್ರಬಂಧಗಳು (Monographs) ಎಂದು ಕರೆಯುತ್ತಾರೆ. ಈ ಬಗೆಯ ಪುಸ್ತಕಗಳನ್ನು ರಚಿಸುವವರು ಯಾವಾಗ್ಲೂ ಆ ವಿಷಯಕ್ಕೆ ಸಂಬಂಧಿಸಿದಂತೆ ವಿಶೇಷ ಸಂಶೋಧನೆ ನಡೆಸಿ ಪರಿಣತಿ ಪಡೆದ ವಿಜ್ಞಾನಿಗಳು. ಈ ಬಗೆಯ ಗ್ರಂಥಗಳನ್ನು ರಚಿಸಬಲ್ಲ ವಿಜ್ಞಾನಿಗಳು ನಮ್ಮಲ್ಲಿದ್ದರೆ ಅಂತಹ ಪುಸ್ತಕಗಳು ನಮ್ಮ ಭಾಷೆಯಲ್ಲಿ ಬೆಳಕು ಕಂಡಾವು. ಬೇರೆ ಭಾಷೆಯಲ್ಲಿ ಪ್ರಕಟವಾದ ಇಂತಹ ಗ್ರಂಥಗಳು ಬಹಳ ಉತ್ಕೃಷ್ಟವಾಗಿದ್ದು, ಅವು ನಮ್ಮ ಭಾಷೆಯಲ್ಲಿ ದೊರೆತರೆ ಹೆಚ್ಚು ಉಪಯುಕ್ತವಾಗು ವುವು ಎನಿಸಿದರೆ, ಅಂಥವನ್ನು ಅನುವಾದಿಸಿಕೊಳ್ಳಬಹುದು. ಏಷ್ಟೇ ಆದರೂ ಈ ಗ್ರಂಥಗಳು ಪ್ರೌಢವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ, ಕಾರ್ಯನಿರತ ವಿಜ್ಞಾನಿಗಳಿಗೆ ಮಾತ್ರ ಬೇಕಾಗುವುದರಿಂದ ಇವುಗಳನ್ನು ನಮ್ಮ ಭಾಷೆಯಲ್ಲಿ ಒದಗಿಸುವ ಕಾರ್ಯವೂ ತುರ್ತಾದುದೇನಲ್ಲ.

ಪಠ್ಯ ಪುಸ್ತಕಗಳು ಮೇಲೆ ಹೇಳಿದ ಯಾವ ಗುಂಪಿಗೂ ಸೇರುವುದಿಲ್ಲ. ಕನ್ನಡದಲ್ಲಿ ಇದೀಗ ಅತ್ಯಗತ್ಯವಾಗಿ ಒದಗಿಸಬೇಕಾಗಿರುವುದು ಈ ನಾಲ್ಕನೆಯ ಗುಂಪಿಗೆ ಸೇರಿದ ಪುಸ್ತಕಗಳನ್ನು. ಪಠ್ಯಪುಸ್ತಕಗಳಲ್ಲಿಯೂ ಎರಡು ವಿಧ. ಒಂದು ನಿರ್ದಿಷ್ಟ ವಿಶ್ವವಿದ್ಯಾ ನಿಲಯದ ನಿರ್ದಿಷ್ಟ ತರಗತಿಯೊಂದನ್ನು ಗಮನದಲ್ಲಿಟ್ಟುಕೊಳ್ಳದೆ, ಸರಿಸುಮಾರಾಗಿ ಒಂದು ಮಟ್ಟದ ವಿದ್ಯಾರ್ಥಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರ ಅಧ್ಯಯನಕ್ಕೆ ಅನುಕೂಲವಾದ ಯಾವುದೇ ಶಾಸ್ತ್ರವನ್ನು ಕ್ರಮಬದ್ಧವಾಗಿ, ಹಂತಹಂತವಾಗಿ ವಿಶ ದೀಕರಿಸುವ ಪಠ್ಯಪುಸ್ತಕಗಳು ಒಂದು ವಿಧ. ತರಗತಿಗೆ ನಿಗದಿಮಾಡಿದ ಪಠ್ಯ ಕ್ರಮದ ಚೌಕಟ್ಟಿನಲ್ಲೇ ಉಳಿದು ಕೂಪಕೂರ್ಮಗಳಾಗಿರದಂತೆ ವಿದ್ಯಾರ್ಥಿಗಳು ಬೇರೆ ಬೇರೆ ನಿರೂಪಣಾ ವಿಧಾನಗಳು, ಬೇರೆ ಬೇರೆ ದೃಷ್ಟಿಕೋನಗಳನ್ನು ಪರಿಚಯ ಮಾಡಿ ಕೊಳ್ಳಲು ಇಂತಹ ಪಠ್ಯಪುಸ್ತಕಗಳು ಅವಶ್ಯ. ನಮ್ಮ ವಿದ್ವಾಂಸರು ಈ ಬಗೆಯ ಪಠ್ಯ ಪುಸ್ತಕಗಳನ್ನು ರಚಿಸಲು ಯಾವ ಬಗೆಯ ಅಡ್ಡಿ ಇಲ್ಲವಾದರೂ ಪ್ರತಿಯೊಂದು ಶಾಸ್ತ್ರದಲ್ಲಿಯೂ ಜಗತ್ತಿನ ಹಲವಾರು ಕಡೆ ಜನಪ್ರಿಯತೆ ಗಳಿಸಿರುವ ಪ್ರಸಿದ್ಧ ಪಠ್ಯ ಪುಸ್ತಕಗಳನ್ನು ಆಯ್ದುಕೊಂಡು ಅನುವಾದಿಸಿ, ಒಂದೊಂದು ಶಾಸ್ತ್ರ ವಿಭಾಗದಲ್ಲಿಯೂ ಅಂತಹ ನಾಲ್ಕಾರು ಉತ್ಕೃಷ್ಟ ಪುಸ್ತಕಗಳು ದೊರೆಯುವಂತೆ ವ್ಯವಸ್ಥೆ ಮಾಡುವುದು ಉತ್ತಮ ಮಾರ್ಗ.

ಯಾವುದೇ ತರಗತಿಯ ಪಾಠಕ್ರಮವನ್ನು ಆಧಾರವಾಗಿಟ್ಟುಕೊಂಡು ಅದರ ವ್ಯಾಸಂಗಕ್ಕೆ ಅನುಕೂಲವಾಗುವಂತೆ ಅಭ್ಯಾಸಗಳೇ ಮುಂತಾದುವನ್ನು ಸೇರಿಸಿ ತಯಾರಿಸಿರುವ ಪಠ್ಯಪುಸ್ತಕಗಳು ಇನ್ನೊಂದು ವಿಧ. ಇವುಗಳನ್ನು ತಯಾರಿಸುವುದರಲ್ಲಿ ಹೊರಗಿನವರು ಯಾರೂ ನಮ್ಮ ನೆರವಿಗೆ ಬರುವುದಿಲ್ಲ. ಈ ಬಗೆಯ ಪಠ್ಯ ಪುಸ್ತಕಗಳನ್ನು ತಯಾರಿಸಬೇಕಾದವರು ನಮ್ಮ ಅಧ್ಯಾಪಕ ಮಿತ್ರರೇ.

ಪಠ್ಯ ಪುಸ್ತಕಗಳನ್ನು ಅನುವಾದ ಮಾಡುವಾಗ, ಇಲ್ಲವೇ ಸ್ವತಹ ಬರೆಯುವಾಗ ಉದ್ಭವಿಸುವ ಬಹುಮುಖ್ಯ ಪ್ರಶ್ನೆ ಪಾರಿಭಾಷಿಕ ಶಬ್ದಗಳಿಗೆ ಸಂಬಂಧಿಸಿದ್ದು. ಐರೋಪ್ಯ ರಾಷ್ಟ್ರಗಳ ಇತಿಹಾಸದಲ್ಲಿ ವಿಜ್ಞಾನ ಮತ್ತು ಭಾಷೆಗಳು ಒಂದರೊಡನೊಂದು ಸ್ವಾಭಾವಿಕವಾಗಿ ಮತ್ತು ಸಾವಕಾಶವಾಗಿ ಬೆಳೆದು ಬಂದಂತೆ ನಮ್ಮಲ್ಲೂ ಬೆಳೆದುಬಂದಿದ್ದರೆ ಈ ಸಮಸ್ಯೆಯೇ ನಮ್ಮಲ್ಲಿ ಉದ್ಭವಿಸುತ್ತಿರಲಿಲ್ಲ. ಅಗಾಧವಾಗಿ ಬೆಳೆದು ನಿಂತಿರುವ ವಿಜ್ಞಾನದ ಪರಿಭಾಷೆಯನ್ನು ಒಮ್ಮೆಗೇ ನಮ್ಮ ಭಾಷೆಗೆ ಹೊಂದಿಸಿಕೊಳ್ಳಬೇಕಾಗಿ ಬಂದಿದೆ. ಈ ಪರಿಸ್ಥಿತಿಯಲ್ಲಿ ನಾವು ಪಾರಿಭಾಷಿಕ ಶಬ್ದಗಳನ್ನು ಸೃಷ್ಟಿಸುವಾಗ ಭಾಷೆಯ ವಿಷಯದಲ್ಲಿ ಒಂದು ನಿಯಮವನ್ನು ಚಾಚೂ ತಪ್ಪದೆ ಪಾಲಿಸಬೇಕಾದುದು ಅಗತ್ಯ. ಅದು ಯಾವುದೆಂದರೆ ಯಾವ ನಿಷ್ಠುರ ನಿಯಮಕ್ಕೂ ಬಿಗಿಯಾಗಿ ಅಂಟಿಕೊಳ್ಳಬಾರದೆಂಬುದು. ಇಂಗ್ಲಿಷ್ ಭಾಷೆಯಲ್ಲಿ ವಿಜ್ಞಾನದ ಪರಿಭಾಷೆಯನ್ನು ಸಾವಕಾಶವಾಗಿ, ನಿರಾತಂಕವಾಗಿ ಬೆಳೆಸಿಕೊಂಡು ಬಂದವರೇ ಕಠಿನವಾದ ಯಾವ ನಿಯಮವನ್ನೂ ಹಾಕಿಕೊಳ್ಳದೆ, ವೈಜ್ಞಾನಿಕ ನಿಷ್ಕೃಷ್ಟತೆ ಮತ್ತು ವಿಷಯ ನಿರೂಪಣೆಯ ಅನುಕೂಲಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಭಾಷಾ ಮಡಿವಂತಿಕೆಯನ್ನು ಮೂಲೆಗೊತ್ತಿರುವಾಗ ಇನ್ನೂ ಕಷ್ಟದ ಪರಿಸ್ಥಿತಿಯಲ್ಲಿ ನಮ್ಮ ಪರಿಭಾಷೆಯನ್ನು ತಯಾರಿಸುತ್ತಿರುವ ನಮಗೇಕೆ ಅಂತಹ ಮಡಿವಂತಿಕೆ ಬೇಕೋ ತಿಳಿಯದು.

ಇಂಗ್ಲೀಷ್ ಪಾರಿಭಾಷಿಕ ಶಬ್ದಗಳನ್ನು ಸ್ವಲ್ಪ ಪರೀಕ್ಷಿಸಿ ನೋಡೋಣ. ಸ್ಥೂಲವಾಗಿ ಅವುಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು.

ಜನಸಾಮಾನ್ಯರ ಭಾಷೆಯಿಂದ ಕೆಲವು ಶಬ್ದಗಳನ್ನು ಆರಿಸಿಕೊಂಡು ಅವುಗಳಿಗೆ ನಿರ್ದಿಷ್ಟ ಅರ್ಥವನ್ನು ತುಂಬಿ ಬಳಸಿಕೊಂಡಿದ್ದಾರೆ. work, force, power, salt, base, fruit, ಇವು ಈ ವರ್ಗಕ್ಕೆ ಸೇರಿದ ಶಬ್ದಗಳು.

ಅನ್ಯಭಾಷೆಗಳಿಂದ ಶಬ್ದಗಳನ್ನು ಹಾಗೆ ಹಾಗೇ ತೆಗೆದುಕೊಂಡಿರುವ ನಿದರ್ಶನಗಳು ಕೆಲವು: Fulcrum, radius, larva, cortex, ಮುಂತಾದ ಲ್ಯಾಟಿನ್ ಶಬ್ದಗಳೂ helix, thorax, iris ಮುಂತಾದ ಗ್ರೀಕ್ ಶಬ್ದಗಳೂ ಈ ವರ್ಗಕ್ಕೆ ಸೇರಿದವು.

ಮೂರನೆಯ ವರ್ಗದ ಶಬ್ದಗಳು ಉದ್ದೇಶಪೂರ್ವಕವಾಗಿ ಸೃಷ್ಟಿಮಾಡಿದವು. ಶಬ್ದಕಾಂಡಗಳನ್ನೂ ಪ್ರತ್ಯಯಗಳನ್ನೂ ಸೇರಿಸಿ ಬೇಕುಬೇಕಾದಂತೆ ಶಬ್ದಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಗ್ರೀಕ್ ಭಾಷೆಯಿಂದ Cephalo, (ತಲೆ) ಮತ್ತು pod, (ಪಾದ) ಇವುಗಳನ್ನು ಸೇರಿಸಿ Cephalopod, ಸೃಷ್ಟಿಸಿದ್ದಾರೆ. ತಲೆಯ ಭಾಗದಲ್ಲಿಯೇ ಪಾದಗಳಿರುವ ಜಂತುಗಳಿಗೆ ಈ ಹೆಸರು. ಲ್ಯಾಟಿನ್‌ನಿಂದ Super, (ಮೇಲೆ) ಮತ್ತು son, (ಶಬ್ದ) ಇವುಗಳನ್ನು ಆರಿಸಿಕೊಂಡು ಅವಕ್ಕೆ ic, ಪ್ರತ್ಯಯ ಸೇರಿಸಿ Supersonic,

ಸೃಷ್ಟಿಸಿದ್ದಾರೆ. ಮಡಿವಂತಿಕೆ ಬಿಟ್ಟು ಎರಡು ಭಾಷೆಗಳನ್ನು ಬೆರಸಿರುವುದೂ ಉಂಟು. ಗ್ರೀಕ್ ಭಾಷೆಯ tele, ಮತ್ತು ಲ್ಯಾಟಿನ್‌ನ vis ಸೇರಿ television ಆಗಿದೆ, ಅದೇ ಅರ್ಥ ಬರುವ ಮಡಿ ಶಬ್ದ telcoroma, ಮಡಿವಂತರಿಗೆ ಹೆಚ್ಚು ಪ್ರಿಯ ವಾದದ್ದು. ಆದರೆ ಅದಕ್ಕೆ ಮಾನ್ಯತೆ ದೊರೆತಿಲ್ಲ. Television, ಭದ್ರವಾಗಿ ಬೇರೂರಿ ಬಿಟ್ಟಿದೆ.

ಒಂದು ದೃಷ್ಟಿಯಲ್ಲಿ ನಮ್ಮ ಪರಿಸ್ಥಿತಿ ಅವರಿಗಿಂತ ಉತ್ತಮ. ನಮಗೆ ಸಂಸ್ಕೃತ ಶಬ್ದಗಳ ಜೊತೆಗೆ ಇಂಗ್ಲೀಷ್ ಮತ್ತು ಆ ಮೂಲಕ ಬಂದಿರುವ ಗ್ರೀಕ್, ಲ್ಯಾಟಿನ್ ಶಬ್ದಗಳೂ ದೊರೆತಿವೆ. ಲ್ಯಾಟಿನ್ ಭಾಷೆಯ Valens ಇಂಗ್ಲಿಷಿನಲ್ಲಿ Valency ಆಗಿದೆ. ಅದಕ್ಕೆ ಹಿಂದೆ ಮುಂದೆ ಸಂಸ್ಕೃತ ಪ್ರತ್ಯಯಗಳನ್ನು ಹಚ್ಚಿ ತ್ರಿವೇಲೆನ್ಸೀಯ ಎಂದರೆ 'ಮೂರು ವೇಲೆನ್ಸಿ ಉಳ್ಳ' ಎಂಬ ಪದ ಸೃಷ್ಟಿಸಿದರೆ ಅದಕ್ಕೆ ಆಕ್ಷೇಪಣೆ ಇರಬಾರದು. ಹಾಗೆಯೇ radiometerಗೆ ರೇಡಿಯೋಮಾಪಕ, ಮತ್ತು aromatizationಗೆ ಆರೊಮೆಟೀಕರಣ ಎಂಬ ಶಬ್ದಗಳನ್ನು ಬಳಸುವುದಾದರೆ ಅದಕ್ಕೆ ಯಾವ ಅಡ್ಡಿಯೂ ಇರಬಾರದು.

ಪಾರಿಭಾಷಿಕ ಪದಗಳನ್ನು ಸೃಷ್ಟಿಸುವಾಗ ಕೆಲವು ಪೂರ್ವಾಗ್ರಹಗಳು ಅನೇಕರನ್ನು ಪೀಡಿಸುತ್ತವೆ. ಪದದ ಅರ್ಥ ಸಂಪೂರ್ಣವಾಗಿ ಆ ಪದದಲ್ಲಿರಬೇಕೆಂಬುದು ಅಂತಹ ಪೂರ್ವಾಗ್ರಹಗಳಲ್ಲಿ ಒಂದು. ಅದು ಸಾಧ್ಯವಾದರೇನೋ ಒಳ್ಳೆಯದೇ; ಆದರೆ ಅಂತಹ ಕಟ್ಟುನಿಟ್ಟಾದ ನಿರ್ಬಂಧ ಅನಗತ್ಯ. Supersonic ಎಂಬ ಶಬ್ದದಲ್ಲಿ ವೇಗ ಎಂದು ಅರ್ಥ ಬರುವ ಯಾವ ಪ್ರತ್ಯಯವೂ ಇಲ್ಲ. ಆದರೆ ಆ ಪದದ ಅರ್ಥ 'ಶಬ್ದಕ್ಕಿಂತ ಹೆಚ್ಚು ವೇಗದ, ಎಂದು. ಅರ್ಥವೆಲ್ಲವನ್ನೂ ಪದದಲ್ಲಿ ತುರುಕಲು ಪ್ರಯತ್ನಿಸುವುದರಿಂದ ಅನಾವಶ್ಯಕವಾಗಿ ಪದ ಕ್ಲಿಷ್ಟವಾಗುತ್ತದೆ. ಇನ್ನೊಂದು ಪೂರ್ವಾಗ್ರಹವನ್ನು ಕೆಲವರಲ್ಲಿ ಕಾಣಬಹುದು. ಶಬ್ದವು ತನ್ನ ಅರ್ಥವನ್ನು ಜನಸಾಮಾನ್ಯರ ಮನಸ್ಸಿಗೂ ಸೂಚಿಸ ಬೇಕು ಎಂಬುದು. ಇಲ್ಲಿಯೂ ಅಷ್ಟೆ; ಅದು ಸಾಧ್ಯವಾದರೇನೋ ಸರಿಯೆ; ಆದರೆ ಅನೇಕ ವೇಳೆ ನಿಷ್ಕೃಷ್ಟತೆ ಮತ್ತು ಇತರ ಅನುಕೂಲಗಳಿಗಾಗಿ ಅಪರಿಚಿತ ಪದಗಳನ್ನಿಟ್ಟು ಕೊಳ್ಳಬೇಕಾಗುತ್ತದೆ. ಅವು ಎಷ್ಟೇ ಆಗಲಿ ಪಾರಿಭಾಷಿಕ ಶಬ್ದಗಳಲ್ಲವೆ? Ulorrhage ಎಂದರೆ ಯಾರಿಗೆ ತಾನೇ ಅರ್ಥವಾದೀತು? Ulo ಎಂದರೆ ಒಸಡು, rhage ಎಂದರೆ ಒಡೆತ ಎಂಬುದು ತಿಳಿದವರಿಗೆ ಮಾತ್ರ ಅರ್ಥವಾಗುತ್ತದೆ; Ulorrhage ಎಂದರೆ ಒಸದು ಒಡೆದು ರಕ್ತ ಸುರಿಯುವುದು ಎಂದು. ಹಾಗೆಯೇ ಕನ್ನಡದಲ್ಲಿಯೂ ಕೆಲವು ವೇಳೆ ಸಂಪೂರ್ಣ ಅಪರಿಚಿತ ಪದಗಳ ಸೃಷ್ಟನೆ ಅನಿವಾರ್ಯವಾಗಬಹುದು. ಮೂರನೆ ಯದಾಗಿ ಪದ ಮೊಟಕಾಗಿರಬೇಕು ಎಂಬುದೊಂದು ಪೂರ್ವಾಗ್ರಹ. ಅದೂ ಒಪ್ಪ ತಕ್ಕದ್ದೇ. ಯಾರು ತಾನೇ ಉದ್ದವಾದ ತೊಡಕು ತೊಡಕಾದ ಪದಗಳನ್ನು ಸೃಷ್ಟಿಸಿ ನಾಲಿಗೆಗೆ ತೊಂದರೆ ಕೊಡಲು ಇಚ್ಛಿಸುತ್ತಾರೆ! ಆದರೆ ವಿಜ್ಞಾನದಲ್ಲಿ ನಿಷ್ಕೃಷ್ಟತೆ ಬಹುಮುಖ್ಯ. ಆ ದೃಷ್ಟಿಯಿಂದ ಉದ್ದವಾದ ಪದಗಳು ಕೆಲವು ವೇಳೆ ಅನಿವಾರ್ಯ ವಾಗಬಹುದು. ಹಾಗಿಲ್ಲದಿದ್ದರೆ otorhinolaryngology, tetrahydronaphthylamine ಮುಂತಾದ ಪದಗಳನ್ನು ಏಕೆ ಸೃಷ್ಟಿಸಬೇಕಿತ್ತು?

ಹೀಗೆ ಯಾವ ಪೂರ್ವಾಗ್ರಹಕ್ಕೂ ಒಳಗಾಗದೆ, ಯಾವ ನಿಷ್ಠುರವಾದ ನಿಯಮ ಕ್ಕೂ ಕಟ್ಟುಬೀಳದೆ ನಿಷ್ಪಕ್ಷಪಾತೆ ಮತ್ತು ವಿಷಯ ನಿರೂಪಣೆಯ ಸೌಲಭ್ಯಗಳನ್ನೇ ಗಮನದಲ್ಲಿಟ್ಟುಕೊಂಡು ನಮ್ಮ ಪಾರಿಭಾಷಿಕ ಶಬ್ದಕೋಶವನ್ನು ತಯಾರಿಸಬೇಕು. ಆದರೆ ಕನ್ನಡ ಭಾಷೆ ಬಳಸುವವರೆಲ್ಲರೂ ಒಂದೇ ಪರಿಭಾಷೆಯನ್ನು ಉಪಯೋಗಿಸುವುದು ಅಗತ್ಯ. ಇದು ಸಾಧ್ಯವಾಗಬೇಕಾದರೆ ಕನ್ನಡನಾಡಿನ ಬೇರೆಬೇರೆ ಪ್ರಾಂತದವರು, ಬೇರೆ ಬೇರೆ ವಿಶ್ವವಿದ್ಯಾನಿಲಯಗಳವರು, ಶಿಕ್ಷಣ ಇಲಾಖೆಯವರು, ಎಲ್ಲರೂ ಸಹಕರಿಸಿ, ಒಮ್ಮತದಿಂದ ಒಂದು ಪಾರಿಭಾಷಿಕ ಶಬ್ದಕೋಶವನ್ನು ತಯಾರಿಸಿ ಅದಕ್ಕೆ ಮನ್ನಣೆ ಕೊಡಬೇಕು. ನಮ್ಮ ರಾಜ್ಯದ ಶಿಕ್ಷಣ ಸಚಿವಾಲಯವು ಆಸಕ್ತಿವಹಿಸಿ ಈ ದಿಕ್ಕಿನಲ್ಲಿ ಉಪಕ್ರಮಿಸುವುದು ಸೂಕ್ತ.

# ವಿದ್ಯೆ ಕಲಿತದ್ದು ಸಾರ್ಥಕವಾಗಬೇಕಾದರೆ

ಚರ್ಚೆಯವೇಳೆ

ಶಿವರಾಮ ಕಾರಂತ

ಸ್ನೇಹಿತರೇ, ಈ ವಿಷಯದಲ್ಲಿ ನನ್ನ ಮನಸ್ಸಿನಲ್ಲಿರುವ ಸಂಶಯವನ್ನು ಹೇಳುತ್ತೇನೆ. ನಾವು ಮಾತನಾಡುವ ಕನ್ನಡ ಭಾಷೆಯಲ್ಲಿ ಬರತಕ್ಕಂತಹ ಧ್ವನಿ, ವ್ಯಂಜನ, ಸ್ವರಗಳು ಬಹಳ ಕೆಲವು. ಇಂಗ್ಲೀಷಿನಲ್ಲಿ 26 ಆಲ್ಫಬೆಟ್ಸ್, 35 ಧ್ವನಿ ಇದ್ದರೆ, ಹುಟ್ಟಿಕೊಂಡಿರತಕ್ಕ ಶಬ್ದಗಳು ಸಾವಿರಾರು. 50–51½ ಲಕ್ಷ. ಧ್ವನಿ, ಆಲ್ಫಬೆಟ್ಸ್, ಸ್ವರಗಳ ಸಂಖ್ಯೆ ಕಡಿಮೆಯಾಗಿರುವುದರಿಂದ 50 ಸಾವಿರ ಶಬ್ದಗಳ ಅರ್ಥ ಕಲಿತುಕೊಳ್ಳುವುದು ಸುಲಭವಾಗುವುದಿಲ್ಲ. ಅದರಂತೆ ಮೂಲಭೂತ ಪ್ರೇರಕಗಳು 150 ಇದ್ದರೂ ಕೂಡ ಅವುಗಳನ್ನು ಹಿಡಿದಂತಹ 50 ಸಾವಿರ ಶಬ್ದಗಳನ್ನು ಅರ್ಥ ಮಾಡುವುದು ಸುಲಭವಾಗುವುದಿಲ್ಲ. ಅದನ್ನು ಪಂಡಿತರ ಹತ್ತಿರ ಬಂದು, ಇಂಗ್ಲೀಷ್ ಪದಗಳ ಜಗತ್ತು ಹುಟ್ಟಿದ್ದು ಹೇಗೆ ಎಂದು ಕೇಳಿದರೆ ತಿಳಿಯುವುದಿಲ್ಲ. ಜಗತ್ತಿನಲ್ಲಿರುವ ಎಲಿಮೆಂಟ್ಸ್ ಮತ್ತು ವಿಶ್ಲೇಷಣೆಯಿಂದ ಬರುವ 95 ಧಾತುಗಳು – ಈ ಧಾತುಗಳನ್ನು ಕಂಡಾಗ ಈ ಕಲ್ಪನೆ ಬರುವುದಿಲ್ಲ. ಆದ್ದರಿಂದ ಯಾವುದೇ ವೈಜ್ಞಾನಿಕ ಪದ ಬಂದಾಗ ಅದಕ್ಕೆ ಪಂಡಿತರನ್ನು ಕಂಡು ಅದರ ಮೂಲಭೂತ ಅರ್ಥವನ್ನು ಕಂಡುಹಿಡಿಯಲು ಹೋದರೆ ಇದರ ಸಮಸ್ಯೆ ಬಗೆಹರಿಯುವುದಿಲ್ಲ. ಎರಡನೇಯದು – ಮೂಲ ಶಬ್ದಗಳು ಕೆಲವು ಪಂಡಿತರಿಗೆ ಮಾತ್ರ ಗೊತ್ತು. ಮೂಲ ಶಬ್ದಗಳ ಅರ್ಥ, ಧಾತುಗಳ ಉಗಮವನ್ನು ಪಂಡಿತರು ಒಪ್ಪಿಕೊಳ್ಳಬೇಕಾಗುತ್ತದೆ. ಉತ್ಪನ್ನ ಪದಗಳ ಸಹಾಯದಿಂದ ನಾವು ಒಂದು ಪಾರಿಭಾಷಿಕ ಶಬ್ದವನ್ನು ಬಳಕೆಗೆ ತೆಗೆದುಕೊಂಡಾಗ ನಮ್ಮ ಮನಸ್ಸಿನಲ್ಲಿ ರುವ ವೈಜ್ಞಾನಿಕ ವಿಷಯಗಳ ಅರ್ಥ ಇನ್ನೊಬ್ಬರಿಗೆ ಎಷ್ಟು ಆಗುತ್ತದೆ, ಎಷ್ಟು ಆಗಬೇಕು, ಅದನ್ನು ನೋಡಿ ಒಂದು ಮಾನದಂಡವಾಗಿ ಹಿಡಿದುಕೊಳ್ಳಬೇಕು. ನಾನು ವಿಜ್ಞಾನಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಬರೆಯುವುದಕ್ಕೆ ಪ್ರಯತ್ನಮಾಡಿದಾಗ ನನಗೆ ಬಂದ ತೊಡಕು ಹೇಳಬೇಕಾಗಿದೆ. ಅದಕ್ಕಾಗಿ ನಾನು ನೂರಾರು ಉಪಾಧ್ಯಾಯರೊಡನೆ ಓಡಾಡಿದ್ದೇನೆ, ನೂರಾರು ಮಕ್ಕಳೊಡನೆ ಆಟವಾಡಿದ್ದೇನೆ, ಹೊರಗಿನ ಅನೇಕ ಗ್ರಂಥ ಗಳನ್ನು ನೋಡಿದ್ದೇನೆ. ನಮ್ಮ ಶಾಲೆಯಲ್ಲಿ ನಾಲ್ಕು ವಿಷಯಗಳ ಬಗ್ಗೆ ಪಠ್ಯದ ಹೊರತು ಬೇರೆ ಪುಸ್ತಕಗಳಿರಲಿಲ್ಲ. ಆದುದರಿಂದ ಮಕ್ಕಳಿಗೆ ಪಠ್ಯಕ್ಕೆ ಸಂಬಂಧಪಟ್ಟ ಹಾಗೆ ಏನಾದರೂ ವಿಷಯ ಒದಗಿಸಬೇಕೆಂದು ಪ್ರಯತ್ನಪಟ್ಟೆ. ನಾನು ಸಾಮಾನ್ಯವಾಗಿ

ಕಥೆ–ಕಾದಂಬರಿ ಬರೆದವನು, ಸೇರಿದ ಆರು ತಿಂಗಳಲ್ಲೇ ಕಾಲೇಜನ್ನು ಬಿಟ್ಟವನು. ನನ್ನ ಆಸೆ- ಮಕ್ಕಳಲ್ಲಿ ಜ್ಞಾನ ತುಂಬಿಸಬೇಕೆಂಬುದು. ಅದಕ್ಕಾಗಿ ನಾನು ವಿಜ್ಞಾನ, ಚರಿತ್ರೆ, ಮುಂತಾದ ಎಲ್ಲಾ ಪುಸ್ತಕಗಳನ್ನೂ ನೋಡಿದೆ. ನನಗೆ ಬಂದ ಸಮಸ್ಯೆ ಇದು: ಒಳ್ಳೆಯ ರಸವತ್ತಾದ ವಿಷಯವೇನೋ ಇದೆ. ಆದರೆ ಇದು ಮಕ್ಕಳಿಗೆ ತಿಳಿಯುವಂತೆ ನಿರೂಪಿಸಬೇಕು. ನಾನು ತಿಳಿಸಿದ್ದನ್ನು ಅವರು ಖುಷಿಯಿಂದ ತೆಗೆದುಕೊಳ್ಳಬೇಕು. ಹಣಕೊಟ್ಟು ಪುಸ್ತಕ ತೆಗೆದುಕೊಂಡ ಮೇಲೆ ನೋಡಿ ಸಂತೋಷಪಡುವಂತಿರಬೇಕು. ಓದಿ ವಿಷಯಗ್ರಹಣ ಸುಲಭ ಸಾಧ್ಯವಾಗಬೇಕು. ಏನು ಬರೆದಿದ್ದಾರೋ ಎಂದು ಬೇಜಾರುಪಡುವಂತಿರ ಬಾರದು. ಈ ಕೆಲಸದಲ್ಲಿ ನನಗೆ ಯಶಸ್ಸು ದೊರೆಯಬೇಕಾದರೆ ನನ್ನ ಮನಸ್ಸಿನಲ್ಲಿರುವ ವಿಷಯಗಳು ಇನ್ನೊಬ್ಬರಿಗೆ ತಿಳಿಯುವಂತಾಗಬೇಕು. ಅದಕ್ಕೆ ತಕ್ಕಂತೆ ನಿರೂಪಿಸಬೇಕು. ಸುಮ್ಮನೆ ಅಧಿಕಾರವಿದೆ, ಬೇಕಾದ ಶಬ್ದ ಹಾಕಬಹುದು ಎಂದು ಭಾವಿಸಿ ಪಠ್ಯ ಪುಸ್ತಕ ರಚಿಸಿದರೆ ಮಕ್ಕಳಿಗೆ ಹಿಡಿಸಲಾರದು. ಓದುವವರಿಗೆ ಅರ್ಥವಾಗುವಂತೆ, ಓದುವ ವಿಷಯದಲ್ಲಿ ರುಚಿ ಹುಟ್ಟುವಂತೆ ಪುಸ್ತಕಗಳನ್ನು ರಚಿಸುವುದು ಅವಶ್ಯಕ. ವಿದ್ಯೆ ಕಲಿತದ್ದು ಸಾರ್ಥಕವಾಗಬೇಕಾದರೆ ಮಕ್ಕಳಿಗೆ ಓದಿದ ವಿಷಯದಲ್ಲಿ ಆಸಕ್ತಿ ಹುಟ್ಟು ವಂತಿರಬೇಕು. ಇಂಥ ಯೋಗ್ಯತೆ ನಮ್ಮ ಪುಸ್ತಕಗಳಿಗಿಲ್ಲದಿದ್ದರೆ ಅವನ್ನು ಒಲೆಗೆ ಹಾಕಬೇಕು. ವಿಶ್ವಾಸವಿಲ್ಲದೆ ಈ ಕೆಲಸವನ್ನು ಮಾಡುವುದಕ್ಕಾಗುವುದಿಲ್ಲ. ಈಗ ಆಫ್ರಿಕ, ಮಲಯಾ ಮತ್ತು ಹಿಂದೂ ದೇಶಗಳಂಥ ನಾಡುಗಳಿಗೆ ಸ್ವಾತಂತ್ರ್ಯ ಸಿಕ್ಕಿದೆ. ಜತೆಗೆ ಎಷ್ಟೋ ಸಮಸ್ಯೆಗಳು ಬಂದಿವೆ. ಹಾಗೆಯೇ ವಿಜ್ಞಾನಕ್ಕೆ ಸಂಬಂಧಪಟ್ಟ ಬರವಣಿಗೆ ಯಲ್ಲೂ ಅಷ್ಟೇ ಸಮಸ್ಯೆಗಳುಂಟು, ಎಲ್ಲ ಜನರಿಗೂ ಅವರವರ ಮಾತೃಭಾಷೆಯಲ್ಲೇ ಎಷ್ಟು ಸಾಧ್ಯವೋ ಅಷ್ಟು ಶಿಕ್ಷಣ ಕೊಡಬೇಕು. ಆದರೆ ನಮ್ಮ ಕರ್ನಾಟಕದಲ್ಲಿ ಇನ್ನೊಂದು ತಾಪತ್ರಯವಿದೆ. ಪುಸ್ತಕದ ಕನ್ನಡ ಮಕ್ಕಳಿಗೆ ಸುಲಭವಾಗಿ ತಿಳಿಯುತ್ತದೆಯೆ ಎಂಬ ಪ್ರಶ್ನೆ. ಮಂಗಳೂರು, ಧಾರವಾಡ ಮತ್ತು ಮೈಸೂರು ಭಾಗಗಳಲ್ಲಿ ಒಂದೇ ವಸ್ತುವಿಗೆ ಬೇರೆ ಬೇರೆ ಶಬ್ದಗಳನ್ನು ಉಪಯೋಗಿಸುತ್ತಾರೆ. ಆಗ ಸಮಾನವಾಗಿ ನಾವು ಬಳಸುವ ಪದಗಳನ್ನು ನಿರ್ದಿಷ್ಟಪಡಿಸಬೇಕು. ಒಂದು ಭಾಗದವರಿಗೆ ಮಾತ್ರ ಅರ್ಥವಾದರೆ ಸಾಲದು. ಇತರರಿಗೂ ಅರ್ಥವಾಗುವಂತಿರಬೇಕು. ಅರ್ಥವಿಲ್ಲದಿರುವ ಶಬ್ದಗಳನ್ನು ಹಾಕಿ ಬಾಯಿಪಾಠ ಮಾಡಿಸುವುದಕ್ಕೆ ಸಾಧ್ಯವೇ? ಸಂಸ್ಕೃತದ ಶ್ಲೋಕಗಳನ್ನು ಹಿಂದೆ ಅರ್ಥವಾಗದಿದ್ದರೂ ಬಾಯಿಪಾಠ ಮಾಡಿಸುತ್ತಿದ್ದರು. ಕಮ್ಯುನಿಕೇಷನ್ – ಉಪಾಧ್ಯಾ ಯರ ಮನಸ್ಸಿನಲ್ಲಿರುವ ಅರ್ಥ ವಿದ್ಯಾರ್ಥಿಗಳಿಗೆ ತಟ್ಟಬೇಕು, ಮನದಟ್ಟಾಗಬೇಕು – ಇದು ಪಠ್ಯಪುಸ್ತಕ ಬರವಣಿಗೆಯ ಮೂಲೋದ್ದೇಶವೆಂಬುದನ್ನು ರಚಕರು ಮರೆಯ ಬಾರದು. ಬರವಣಿಗೆಯಿಂದ ಕುತೂಹಲ ಹುಟ್ಟಿಸಲು ಸಾಧ್ಯವಾಗದಿದ್ದರೆ ಈ ವಿಷಯ ದಲ್ಲಿ ಪ್ರಗತಿ ಅಸಾಧ್ಯ.

ಇನ್ನು ಎರಡನೆಯ ಅಂಶ: ವಿಷಯ ಗೊತ್ತಿರಬೇಕು. ವೈಜ್ಞಾನಿಕ ಕೋಶಗಳನ್ನು ನಾನು ಬರೆದ ಕಾಲದಲ್ಲಿ ಅನೇಕ ಗ್ರಂಥಗಳನ್ನೋದಿದೆ. ಬರೆದಮೇಲೆ ಹತ್ತು ಜನ ಪಂಡಿತರ ಹತ್ತಿರ ಓದಿ ತಪ್ಪುಗಳಿದ್ದರೆ ಹೇಳಿ ಎಂದು ಕೇಳಿದೆ. ಅಚ್ಚಾದ ಮೇಲೆ ತಪ್ಪುಗಳಿರಬಾರದೆಂದು ಹಾಗೆ ಮಾಡಿದೆ. ಆದರೂ ಕೂಡ ತಪ್ಪು ಉಳಿದದ್ದುಂಟು.

ವಿಷಯ ಗೊತ್ತಿದ್ದರೂ ಕೆಲವರು ಬರೆದು ಹೇಳಿಯಾರು. ಬಾಯಿಯಲ್ಲಿ ಹೇಳಲಾರರು. ಮನೆಯಲ್ಲಿ ಕನ್ನಡದಲ್ಲಿ ಮಾತನಾಡಿದರೂ ಭಾಷೆಯಮೇಲೆ ಹತೋಟಿ ಇರಲೇಬೇಕು. ಇಲ್ಲದಿದ್ದರೆ ಬರೆಯುವ ಕನ್ನಡ ಅರ್ಥವಾಗುವುದು ಸ್ವಲ್ಪ ಕಷ್ಟವಾಗುತ್ತದೆ. ನನ್ನ ಗೆಳೆಯರೊಬ್ಬರು ಪಿ.ಯು.ಸಿ.ಗೆ ಗಣಿತದ ಪತ್ರ ಬರೆದಿದ್ದಾರೆ. ಇಂಗ್ಲೀಷು ಮತ್ತು ಕನ್ನಡ ಉಭಯ ಭಾಷೆಗಳಲ್ಲೂ ಅಚ್ಚಾಗಿದೆ. ಮೂಲದಲ್ಲಿ 'ಕಾಮನ್ ಕ್ಯಾರೆಕ್ಟರಿಸ್ಟಿಕ್ಸ್' ಎಂದಿರುವುದಕ್ಕೆ ಸಮಾನ ಲಕ್ಷಣ, ಸಾಮಾನ್ಯ ಲಕ್ಷಣ ಎಂದು ಬರೆಯಲಾಗಿದೆ. ಸಮಾನ ಎಂಬ ಪದಕ್ಕೆ ಸಾಮಾನ್ಯ ಎಂದೂ ಹಾಕಿದೆ. ಇದರಿಂದ ತೊಂದರೆಯಾಗುವುದಿಲ್ಲವೆ? ಹೆಜ್ಜೆ ಇಡುವಾಗ ಹುಷಾರಾಗಿಡುವುದು ಆವಶ್ಯಕ, ಎಂದು ಇಂಥ 'ಸಾಮಾನ್ಯ' ಉದಾಹರಣೆಯಿಂದ ತಿಳಿಯಬಹುದು. ಇನ್ನೊಂದು ಪತ್ರದಲ್ಲಿ ಹೈಡ್ರೋಜನ್‌ಗೆ ಜಲಜನಕ ಎಂದು ಕರೆದಿದ್ದಾರೆ, ಸೀತಜನಕ ಎಂದೂ ಹೇಳಿದ್ದಾರೆ. ಆದರೆ ಸೀತಜನಕ ಎಂದಾಗ ಜನಕಮಹಾರಾಜನ ನೆನಪು ಬಂದೀತು. ಯಾವ 'ಸೀತ' ಇದು ಎಂದು ಅನುಮಾನ ಹುಟ್ಟೀತು. ಇಂಥ ಶಬ್ದಗಳಿಂದ ಗೊಂದಲ ಹುಟ್ಟುವುದು. ಸರಕಾರ ಟೆಕ್ಸ್ಟ್‌ಬುಕ್ ನಿಗದಿಮಾಡಬೇಕು, ಅದನ್ನು ಶಿಕ್ಷಣಕ್ಕೆ ಉಪಯೋಗ ಮಾಡಬಹುದು. ಶಿಕ್ಷಣದಿಂದ ಭಾಷೆ ಬೆಳೆಯುವುದಿಲ್ಲ. ಯಾವ ನಿರಂಕುಶ ಪ್ರಭುತ್ವದಿಂದಲೂ ಭಾಷೆಯನ್ನು ಬೆಳೆಸಲಿಕ್ಕಾಗುವುದಿಲ್ಲ. ಕನ್ನಡದಲ್ಲಿ ಮಾತನಾಡುವುದಕ್ಕೆ ಬಾರದಿರುವವರೂ ಪುಸ್ತಕ ಬರೆಯಲು ಹೊರಟಾರು. ಸರಿಯಾದ ಯೋಗ್ಯತೆಯಿರುವವರನ್ನು ನೋಡಿ ಅವರಿಗೆ ಪುಸ್ತಕದ ಕೆಲಸ ವಹಿಸಬೇಕು. ಈ ಬರವಣಿಗೆ ಕೆಲಸದಲ್ಲಿ ದುಡ್ಡಿದೆ. ನನ್ನ ಊರಿನಿಂದ ಬೇಕಾದರೆ ನೂರು ಅರ್ಜಿ ತರಿಸಿಕೊಡುವೆನು ಎಂದರೆ ನೂರಾರು ಜನ ಅರ್ಜಿದಾರರು ತಯಾರಾದಾರು. ಅವರಲ್ಲಿ ಆಯುವುದು ಹೇಗೆ?

ಮೂರನೆಯದಾಗಿ ಅಖಿಲ ಕನ್ನಡನಾಡು ಎಂಬ ಮಾತನ್ನು ಹೇಳುತ್ತೇವೆ. ನಾಡು ಒಂದಾದರೂ ನಾವು ಬಳಸುವ ಭಾಷೆ ಒಂದಾಗಿದೆಯೆ ? ಈಗಾಗಲೇ ಹೈಸ್ಕೂಲಿನ ವರೆಗೆ ಬಳಸಿದ ಕನ್ನಡ ಶಬ್ದಗಳನ್ನು ನೋಡಿದರೆ ದಕ್ಷಿಣ ಕನ್ನಡದಲ್ಲಿ ಒಂದು, ಮೈಸೂರಿನಲ್ಲೊಂದು ಮತ್ತು ಧಾರವಾಡದಲ್ಲೊಂದು – ಈ ರೀತಿ ಇದೆ. ವಿಜ್ಞಾನಕ್ಕೆ ಸಂಬಂಧಪಟ್ಟಂತೆ ಮೈಸೂರು ಯುನಿವರ್ಸಿಟಿ ಪ್ರಕಟಿಸಿದ ಕೆಲಗ್ರಂಥಗಳಲ್ಲಿ ಕೆಮಿಸ್ಟ್ರಿಯಲ್ಲಿ ಒಂದು ಅರ್ಥ, ಪ್ರಾಣಿಶಾಸ್ತ್ರದಲ್ಲಿ ಒಂದು ಅರ್ಥ ಇರುವುದನ್ನು ಕಾಣಬಹುದು. ಏಕೆಂದರೆ ಈ ಇಬ್ಬರೊಳಗೆ – ಒಂದೇ ಸ್ಥಳದಲ್ಲಿದ್ದರೂ ಸಂಪರ್ಕವಿಲ್ಲ, ವಿನಿಮಯವಿಲ್ಲ. ಪ್ರಾಥಮಿಕ ವಿಜ್ಞಾನದಲ್ಲಿ ಬರುವ ಸಸಾರಜನಕ ಆಮೇಲೆ ಸಾರಜನಕವಾದದ್ದು ಏತಕ್ಕೆ ? ಕಾರಣ ತಿಳಿಯದೆ ಸ್ವೇಚ್ಛೆಯಿಂದ ಶಬ್ದಗಳನ್ನು ಬಳಸುವುದಕ್ಕಾಗುವುದಿಲ್ಲ. ಬಳಸುವುದು ಯಾರ ಸಲುವಾಗಿ ಎಂಬುದು ನೆನಪಿರಬೇಕು. ಇದು ಮಕ್ಕಳ ಸಲುವಾಗಿ, ಕನ್ನಡ ಜನರ ಸಲುವಾಗಿ. ಮುಂದೆ ಜಗತ್ತಿನಲ್ಲಿ ಬಾಳಬೇಕಾದ ಕನ್ನಡದ ಪ್ರಾಣಿಗಳಿಗೂ ವಿಜ್ಞಾನದ ಹಿನ್ನೆಲೆಯಿರಬೇಕು. ಅದಿಲ್ಲದೆ ಬದುಕುವುದಕ್ಕೆ ಸಾಧ್ಯವಿಲ್ಲ. ಬರೆಯುವವರಿಗೆ ಉತ್ಸಾಹವಿದ್ದು ಚೆನ್ನಾಗಿ ಬರೆಯಬೇಕು. ಬರೆದ ಮೇಲೆ ಹುಡುಗರಿಗೆ ಕೊಟ್ಟು ಅವರಿಗೆ ತಿಳಿಯುವಂತಿದೆಯೇ ಎಂಬುದನ್ನು ಪರೀಕ್ಷೆ ಮಾಡಬೇಕು. ಪಾರಿಭಾಷಿಕ ಪದಗಳನ್ನು ವಿವೇಚನೆಯಿಂದ ಆರಿಸದಿದ್ದರೆ ಮುಂದೆ ಕಷ್ಟ ಎಂಬುದರ ಎಚ್ಚರ ಇರಬೇಕು.

ಆಸಕ್ತಿಯಿಂದ ಉತ್ಸಾಹದಿಂದ, ಶ್ರದ್ಧೆಯಿಂದ ಕೆಲಸ ಮಾಡಿದರೆ ಅಸಾಧ್ಯವಾದ್ದು ಯಾವುದೂ ಇಲ್ಲ.

ಪಠ್ಯಪುಸ್ತಕ ಬರೆಯುವವರಿಗೆ ಪ್ರತಿ ವಿಷಯದ ಮಿತಿಯನ್ನು ಯಾವುದೋ ಸಮಿತಿ ತಿಳಿಸುವಂತೆ ಇರಬೇಕು. ಹಿಂದೆ ಹಿಂದೂಸ್ಥಾನದ ಚರಿತ್ರೆ, ಭೂ ಗೋಳ, ಸಾಮಾನ್ಯ ವಿಜ್ಞಾನ ಹೀಗೆ ಪಾಠ ಕ್ರಮ ಇತ್ತು. ಈಗ ಅದನ್ನೆಲ್ಲ ತೆಗೆದು ಹಾಕಿ ಸೋಷಿಯಲ್ ಸೈನ್ಸ್ ಎಂದಿಟ್ಟರು. ಅದರಲ್ಲಿ ಪಟೇಲ, ಮ್ಯಾಜಿಸ್ಟ್ರೇಟ್, ಯುನೆಸ್ಕೋ, ವಿಶ್ವಸಂಸ್ಥೆ ಮುಂತಾದ್ದೆಲ್ಲಾ ಸರಕೂ ತುಂಬಿದೆ: ಈ ದಿವಸ ಯುನೆಸ್ಕೋ, ನಾಳೆ ಬಾವಿ ವಿಚಾರ, ನಾಡಿದ್ದು ಅಶೋಕನ ಸಾಮ್ರಾಜ್ಯದಲ್ಲಿ ಶಾಂತಿ ನೆಲಸಿದ ವಿಚಾರ – ಹೀಗೆ ಹೇಳುತ್ತಿದ್ದರೆ ಇದೆಂಥ ಪಾಠ? ಇದನ್ನು ವಿಜ್ಞಾನವೆಂದು ಮಕ್ಕಳು ಒಪ್ಪಿಕೊಳ್ಳುವುದಕ್ಕೆ ತಯಾರಾಗಿಲ್ಲ. ಮಕ್ಕಳ ವಯಸ್ಸಿಗೆ ಎಷ್ಟು ಅವಶ್ಯಕ, ಯಾವುದು ಅವಶ್ಯಕ ಎಂಬುದನ್ನು ಗಮನಿಸಬೇಕು. ಅಮೇರಿಕಾದ ಹೈಸ್ಕೂಲು ಪುಸ್ತಕ ಗಳಲ್ಲಿ ಬಿ ಎ. ತರಗತಿಯ ವಿಷಯವೂ ಸೇರಿದೆ: ರೇಡಿಯೋ, ರಾಡಾರ್ ಮುಂತಾದವು ಗಳು. ಆದರೆ ಇವನ್ನು ಮಕ್ಕಳ ವಯೋಗುಣದ ಅನುಭವಕ್ಕೆ ಅಳವಡಿಸಿ ಹೇಳುತ್ತಾರೆ. ಒಂದು ಪುಸ್ತಕದ ವಿಷಯಗಳಿಗೂ ಮುಂದಿನ ಪುಸ್ತಕದ ಬೆಳವಣಿಗೆಗೂ ಸಂಬಂಧವಿದೆ. ಎಲ್ಲಿಂದಲೋ ತೆಗೆದುಕೊಂಡು ಒಟ್ಟಾರೆ ವಿಷಯಗಳನ್ನು ಯದ್ವಾತದ್ವಾ ಸೇರಿಸು ವುದಿಲ್ಲ. ಹೊಸ ಸಂಶೋಧನೆ ಯಾವುದೂ ಇಲ್ಲದೆ ಇರುವಾಗಲೂ ಪುಸ್ತಕದ ವಿಷಯ ವಿದ್ಯಾರ್ಥಿಯ ಜೀವನಕ್ಕೂ ಮತ್ತು ಪಾಠಪ್ರವಚನಕ್ಕೂ ಸಂಬಂಧ ಕಲ್ಪಿಸುವಂತಿದ್ದರೆ ಉಪಾಧ್ಯಾಯ ಉತ್ಸಾಹದಿಂದ ಪಾಠ ಮಾಡಿಯಾನು.

# ಕನ್ನಡ ಕಾದಂಬರಿಗಳು

ಉದ್ಘಾಟನ: ರಾವಬಹಾದ್ದೂರ

ಪ್ರಬಂಧಗಳು: ಜಿ. ಎಸ್. ಆಮೂರ

ಬನ್ನಂಜೆ ಗೋವಿಂದಾಚಾರ್ಯ

ವಿಚಾರಗೋಷ್ಠಿ – ೨

# ವಾಸ್ತವಿಕತೆ ಸಮಗ್ರ ಸತ್ಯವಲ್ಲ

ಉದ್ಘಾಟನದಲ್ಲಿ

ರಾವ ಬಹಾದ್ದೂರ

ಅಧ್ಯಕ್ಷರೇ, ಸಾಹಿತ್ಯ ಸೂರಿಗಳೇ, ಸ್ನೇಹಿತರೇ,

ಕನ್ನಡದ ಜನಪದವನ್ನು ವ್ಯಾಪಿಸಿ, ಜನಮನವನ್ನು ಸೂರೆಗೊಂಡ ಕಾದಂಬರಿ ಸಾಹಿತ್ಯಕ್ಕೆ ಲೋಕದಲ್ಲಿ ಬಹುಮಾನ, ಅಗ್ರಪೂಜೆಗಳು ಸಲ್ಲುವದು ಈಗ ಉಪಕ್ರಮವಾಗಿದೆ. ಮೆಚ್ಚಿಗೆ, ಅರ್ಚನೆಗಳು ನಮ್ಮ ಅನುಮೋದನೆ ಆಮೋದಗಳ ಫಲವಾಗಿವೆ.

ನಾನು ಗ್ರಾಮಾಯಣ ಬರೆದು ಕಾದಂಬರಿಕಾರನಾಗಿ ನಿಮ್ಮೆದುರು ಒಡಮೂಡಿದೆ. ಸಾರಸ್ವತ ಜಗತ್ತಿನ ಆದರಾಭಿಮಾನಗಳು ನನ್ನ ಹೆಮ್ಮೆ, ಆಸ್ತಿಗಳಾಗಿದ್ದು ಆಶ್ಚರ್ಯವಲ್ಲ. ಕನ್ನಡದಲ್ಲಿ ಜೀವಂತ ಬರೆಹ ಬರೆಯುವಲ್ಲಿ ಹಿರಿಯರಾದ ಪೂಜ್ಯ ಕಾರಂತರು ಎತ್ತಿದ ಕೈ. ಅವರ ಕೃತಿರತ್ನಗಳು ಕನ್ನಡ ಸರಸ್ವತಿಯ ಮುಕುಟವನ್ನು ಅಲಂಕರಿಸಿವೆ. ನನ್ನನ್ನೂ ಜೀವಂತ ಸಾಹಿತ್ಯ ಬರೆಯುವವರಲ್ಲಿ ಒಬ್ಬನೆಂದು ವಿಸ್ತಾರ ಓದುಗ ಪ್ರಪಂಚ ಹೇಳಿದ್ದು ಓದುಗರ ಔದಾರ್ಯವಾಗಿದ್ದರೆ ನನ್ನ ಕೃತಾರ್ಥತೆಯ ಕುರುಹೂ ಆಗಿದೆ.

ಕಾದಂಬರಿಗಳು ಜೀವನದ ಚಿನ್ನದ, ಲೋಹದ, ವಜ್ರದ, ಪ್ರತಿಮೆಗಳಲ್ಲ. ಅವು ಜೀವಂತವಾದ ಅವ್ಯಂಗ ಜ್ವಲಂತವಾದ ಕೃತಿಗಳು. ಕಾದಂಬರಿ ಬರಿ ನಡೆದ ಜೀವನವಲ್ಲ; ನಡೆಯಬೇಕಾದ ಜೀವನವೂ ಸೈ.

ಕಾದಂಬರಿಕಾರ ಬರಿ ವರದಿಗಾರನಲ್ಲ. ಕಾದಂಬರಿಯು ಜೀವನದ ಭೂತಪುರಾಣವಲ್ಲ. ಗತಕಾಲದ ಇತಿಹಾಸವಲ್ಲ. ಅದು ಉತ್ತರೋತ್ತರವಾದ ಭವಿಷ್ಯನಿರಂತರವಾಗಿದೆ. ಕಾದಂಬರಿ ಪ್ರಪಂಚ ಕ್ಷೇಮಕರವಾಗಿ ಬೆಳೆಯುತ್ತಿರುವಾಗಲೇ ಅದರ ಆದಿಪುರುಷ, ಸೀಮಾ ಪುರುಷ, ಕಾರಣಪುರುಷರಾರು ? ಎಂಬ ಭೂಕಂಪ ನಡೆದುದು ಜ್ವಾಲಾಮುಖಿಗೆ ಆಹ್ವಾನವಾಗಿದೆ.

ನಮ್ಮ ರಾಜ್ಯದಲ್ಲಿ, ದೇಶದಲ್ಲಿ ನಡೆಯುವ ಹೊಲಸಿಗೆ ಸಾಹಿತ್ಯದಲ್ಲಿಯೂ ಎಡೆ ಮಾಡಿಕೊಡುವ ಅನಿವಾರ್ಯ ಕೆಲಸ ಕೆಲವರಿಗಿರಬಹುದು. ಆದರೆ ತಲೆಗೆ ವಿವೇಕ ಚೂಡಾಮಣಿ ಇದ್ದ ಹಿರಿಯರೂ ಸ್ನೇಹಿತರೂ ಸಾಹಿತ್ಯವನ್ನು ರಣರಂಗಮಾಡಿ ಗಾಯಾಳುಗಳಾದ ಊನ ಲೇಖಕರ ಸಾಂತ್ವನ ನಿರಾಕರಣಗಳನ್ನು ನಡೆಸುವದನ್ನು ತಡೆದರೆ ಯೋಗ್ಯ. ಕಾದಂಬರಿ ಪ್ರಪಂಚದಿಂದ ನಾವು ದೊಡ್ಡ ಹೊಣೆ ನಿರ್ವಹಿಸುವವರು ಹೊಣೆಗೇಡಿತನ ತಪ್ಪಿಸಿದರೆ ಸಾಕು.

ತಮ್ಮ ಮುಂದೆ ನಿಂತುಕೊಂಡ ಈ ವ್ಯಕ್ತಿ ಸಾಹಿತ್ಯ ಕ್ಷೇತ್ರದಲ್ಲಿಯ ಸಿದ್ಧಪುರುಷನೂ ಅಲ್ಲ; ಖ್ಯಾತನಾಮನೂ ಅಲ್ಲ. ಕಾದಂಬರಿದೇವಿಯ ಮುಡಿಯನ್ನು ಸಿಂಗರಿಸಲು ಮಾಲೆ ನೆಯ್ಯುವ ಸಾಧಕನು ಮಾತ್ರ. ಇಂಥವನು ಕಾದಂಬರಿ ಗೋಷ್ಠಿಯಲ್ಲಿ ನಡೆಯಬೇಕಾದ ಚರ್ಚೆಯ ದಿಕ್‌ಸೂಚಿಯನ್ನು ಮಾಡಲು ಸಮರ್ಥನೆಂದು ಭಾವಿಸಬೇಕಿಲ್ಲ. ಹಿರಿಯರಾದ ಕಾರಂತರ ಬಗ್ಗೆ ಇರುವ ಅಭಿಮಾನ; ಹಿರಿಯರ ಆಜ್ಞೆಯನ್ನು ಪಾಲಿಸಬೇಕೆಂಬ ಮನೋವೃತ್ತಿ ನನ್ನನ್ನು ಇಲ್ಲಿಗೆ ತಂದು ನಿಲ್ಲಿಸಿವೆ.

ಈಗ ನಾವೆಲ್ಲ ಇಲ್ಲಿ ಕೂಡಿರುವದು ಕಾದಂಬರಿಗೋಷ್ಠಿಗಾಗಿ. ಕಾದಂಬರಿಯನ್ನು ಬರೆದವನೊಬ್ಬನು ಕಾದಂಬರಿ ಎಂಬ ಸಾಹಿತ್ಯ ಪ್ರಕಾರದ ಬಗ್ಗೆ ಇರಿಸಿಕೊಂಡ ವಿಚಾರ ಗಳನ್ನು ತಿಳಿಸಲು ಅವಕಾಶ ಕೊಟ್ಟ ಈ ವಿಚಾರಗೋಷ್ಠಿಯ ಸಂಘಟಕರಿಗೆ ನಾನು ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಆರಂಭದಲ್ಲಿಯೇ ಸಲ್ಲಿಸುವೆನು.

ಕಾದಂಬರಿಗೋಷ್ಠಿಯಲ್ಲಿ ಭಾಗವಹಿಸುವ ನನ್ನ ಮಿತ್ರರಿಗೆ ಕಾದಂಬರಿ ಸಾಹಿತ್ಯದ ವಿಷಯದಲ್ಲಿ ಹೆಚ್ಚು ಆಳವಾದ ಜ್ಞಾನವಿರುವದು ಸಹಜ. ಅವರು ಸಾಹಿತ್ಯದಲ್ಲಿ ಸತತಾಭ್ಯಾಸದಿಂದ ಕೃಷಿಮಾಡಿ ಪರಿಣತರಾದವರು. ಕಾದಂಬರಿಯ ಸ್ವರೂಪದ ಬಗ್ಗೆ ಅವರು ಕೂಲಂಕಷವಾಗಿ ಮಾತನಾಡಬಲ್ಲರು. ನಾನೋ ಭೂಮಿಯನ್ನು ಉತ್ತು ಬಿಡುವ ಕೃಷಿಕನಾಗಿ ಜೀವಿಸುವವನು. ಭೂಮಿಯಲ್ಲಿ ಬಿತ್ತಿದ ಸಸಿ ಬೆಳೆದುದನ್ನು ಕಂಡು ಸಂತಸಬಡುವವನು. ಸಾಹಿತ್ಯಕ್ಷೇತ್ರದಲ್ಲಿಯೂ ನನ್ನ ಸ್ಥಿತಿ ಭಿನ್ನವಿಲ್ಲ. ಭೂಮಿ ಯಲ್ಲಿ ಬಿತ್ತಿದ ಬೀಜ ಬೆಳೆದುನಿಂತಾಗ ಅದನ್ನು ಕಂಡು ನನಗಾದ ಆನಂದವನ್ನು ನೆರೆಹೊರೆಯವರಿಗೂ ಉಣಬಡಿಸಲು ಅವರನ್ನು ಕರೆದುತಂದು ಬೆಳೆದು ನಿಂತ ಪೈರು ತೋರಿಸುವ ಚಪಲ. ಈ ಚಪಲವೇ ಕಾದಂಬರಿ ಬರೆಯಲು ನನ್ನ ಪ್ರೇರಕ ಶಕ್ತಿ ಎಂದು ನನ್ನ ಎಣಿಕೆ.

ಈಗ ನಡೆಯಲಿರುವ ಕಾದಂಬರಿಗೋಷ್ಠಿಯಲ್ಲಿ ಸಾಹಿತ್ಯ ತಜ್ಞರ ಗಮನವನ್ನು ನನ್ನ 'ಗ್ರಾಮಾಯಣ' ಕಾದಂಬರಿಯು ಸೆಳೆಯುವದೆಂಬ ವಿಚಾರದಿಂದ ನನಗೆ ಮಹ ದಾನಂದವೆನಿಸಿದೆ. ತನ್ನ ಕೂಸು ಪ್ರತಿಷ್ಠಿತರ ಗಮನ ಸೆಳೆದಾಗ ಯಾವ ತಾಯಿಯ ಹೃದಯ ಅಭಿಮಾನದಿಂದ ತುಂಬಿಬರಲಿಕ್ಕಿಲ್ಲ! ಗ್ರಾಮಾಯಣವು ನನ್ನ ಚೊಚ್ಚಿಲು ಮಗು. ಅದರ ಗುಣದೋಷ ಏನೇ ಇದ್ದರೂ ಹಡೆದವರಿಗೆ ಹೆಗ್ಗಣ ಮುದ್ದು ಅನ್ನುವ ಗಾದೆ ಮಾತಿನಂತೆ ಅದು ನನ್ನ ಚೊಚ್ಚಿಲು ಮಗುವಿನ ಪ್ರೀತಿಗೆ ಪಾತ್ರವಾದದ್ದು.

ಈ ಸಂದರ್ಭದಲ್ಲಿ ಕಾದಂಬರಿಕಾರನಾದ ನಾನು ಗಮನದಲ್ಲಿಟ್ಟುಕೊಂಡಿದ್ದ ಕೆಲ ಅಂಶಗಳನ್ನು ಮಾತ್ರ ಇಲ್ಲಿ ಹೇಳಬಯಸುವೆ. ಕಾದಂಬರಿಗೋಷ್ಠಿಯಲ್ಲಿ ನಡೆಯಲಿರುವ ಚರ್ಚೆಗೆ ಅನುಕೂಲವಾಗಲೆಂದು ಕಾದಂಬರಿ ಸಾಹಿತ್ಯದ ಬಗ್ಗೆ ನಾನು ತಿಳಿದುಕೊಂಡ ಕೆಲ ಅಂಶಗಳನ್ನು ಇಲ್ಲಿ ಹೇಳುವುದು ಉಪಯುಕ್ತವಾದೀತೆಂದು ನನ್ನ ವಿಚಾರಗಳನ್ನು ಸೂತ್ರರೂಪದಲ್ಲಿ ಹೇಳಬಯಸುವೆ.

ಕಾದಂಬರಿಗೋಷ್ಠಿಯಲ್ಲಿ ಭಾಗವಹಿಸುವ ನಮಗೆ ಕಾದಂಬರಿಯ ಸ್ವರೂಪ ಗುಣಧರ್ಮಗಳ ಇತಿಮಿತಿಯ ಕಲ್ಪನೆ ಅಗತ್ಯವಿದೆ ಎಂದು ಅನಿಸುವುದು. ಉತ್ತೇಜಕ ಮದ್ಯ, ಕಾದಂಬರಿಗೆ ಇರುವ ಸುಸಂಸ್ಕೃತ ಅರ್ಥ; ನಾವು ಓದುವ ಬರೆಯುವ ಕಾದಂಬರಿ

ಎಂಬ ಜಾತಿಯ ಸಾಹಿತ್ಯದ ಗುಣಧರ್ಮವೂ ಅಷ್ಟೇ. ಉತ್ತೇಜಕತೆ! ಹೀಗೆ ಕಾದಂಬರಿಯ ಧರ್ಮ–ಅರ್ಥಗಳು ಉತ್ತೇಜನಶೀಲವಾಗಿವೆ.

ಭಾರತೀಯ ಸಾಹಿತ್ಯದಲ್ಲಿ ಬಹಳ ಹಿಂದೆ ಕಾದಂಬರಿ ಎಂಬುದು ಮದ್ಯಾರ್ಥಕ ಶಬ್ದ. ಅನಂತರ ದಣಿವು ಇಲ್ಲದೆ ಶಬ್ದಗಳನ್ನು ಚೆಲ್ಲುತ್ತ ಓಡಾಡುವ ಹುಚ್ಚು ಹತ್ತಿದ ಒಬ್ಬ ಕವಿಯ ಒಂದು ಗ್ರಂಥ.

ಇಂದೋ! ಜಗತ್ತಿನ ಎಲ್ಲ ಮಾತಿನಲ್ಲಿ ಬೆಟ್ಟದೆತ್ತರ ಸಮುದ್ರದಗಲ ಬೆಳೆದು ನಿಂತ ಒಂದು ಸಾಹಿತ್ಯದ ಜಾತಿ! ಈ ಜಾತಿಗೆ ಈಗ ಸಾಹಿತ್ಯದಲ್ಲಿ ಸಾರ್ವಭೌಮ ಪಟ್ಟ. ಮಾತ್ರವಲ್ಲ ಉಚ್ಛೃಂಖಲ ಅಧಿಕಾರ. ಪ್ರಶ್ನಾತೀತವಾದ ಜನಾನುರಾಗ ಈ ಸಾಹಿತ್ಯರಾಮನಿಗೆ. ಒಂದು ಕ್ಷಣ ಸಾಹಿತ್ಯ ಭೂತನಿರ್ಮಿತಿಯ ಬೆಟ್ಟದ ಕಡೆಗೆ ಕಣ್ಣು ಹಾಯಿಸಿದರೆ ಅಲ್ಲಿ ಕಂಡುದಕ್ಕಿಂತಲೂ ಕಣ್ಣು ತಿವಿಯುವಷ್ಟು–ಕೋರೈಸುವಷ್ಟು ಆಕರ್ಷಣೆ ಭವಿಷ್ಯದತ್ತ ಧೀಂಕಿಡುತ್ತ ನಡೆದ ಕಾದಂಬರಿಗೇ ಇದೆ ಎಂದು ಕಾಣುತ್ತಿದೆ.

ಕಾದಂಬರಿ ಎಂಬುದು ಸಾಹಿತ್ಯದಲ್ಲಿ ಇಂದೇ ಒಡಮೂಡಿನಿಂತ ಪವಾಡವಲ್ಲ. ಅದರ ಬೇರುಗಳು ನಮ್ಮ ವೇದಗಳಲ್ಲಿ, ಪಶ್ಚಿಮದ ಬೈಬಲ್ಲಿನಲ್ಲಿ ಕುರಾನಗಳಲ್ಲಿ. ಹಳೆಯ ಹುದುಲಿನಲ್ಲಿಯೂ ಈ ಬೀಜಮೊಳೆತಿತ್ತು ಎನ್ನುವವರಿರಲಿ! ಇಲ್ಲೆಂದರೆ ಅವರಿಗೆ ಅಸಮಾಧಾನವಾಗುವದಾದರೆ ಬೇಡ. ಆದರೆ ಇಂದು ಕಾದಂಬರಿ ಎಂದು ಸ್ಥೂಲವಾಗಿ ಕರೆಯಿಸಿಕೊಳ್ಳುವುದರ ಸೂಕ್ಷ್ಮದ್ರವ್ಯ ಗುಣಗಳು ಅದರ ಪರಮಾಣುಗಳು ಕೇವಲ ಆಧುನಿಕ ಜೀವನ ಪ್ರಯೋಗಾಲಯದ ಸಂಶೋಧನೆಯ ಫಲವೇ ಆಗಿದೆ.

ಮಾನವ ಜೀವನವು ದೇಶಕಾಲಗಳಿಂದ ಉತ್ತೇಜಿತವೂ ಆಗಿದೆ, ತ್ರಸ್ತವೂ ಆಗಿದೆ. ಜೀವನದ ಬಿನ್ನಹಕ್ಕೆ ಬಾಯಿ ಬಂದಾಗ, ಜೀವಾಣುಗಳ ಪ್ರಚಂಡತೆ ಕವಚವನ್ನು ತೆಗೆದೊಗೆದು ಹೊರನುಗ್ಗಿ ಬಂದಾಗ ಸಾಹಿತ್ಯವಾಗಿವೆ.

ಸಾಹಿತ್ಯವನ್ನು ನಿರ್ಮಿಸುವದು ವ್ಯಕ್ತಿಯಾಗಿದ್ದರೂ ದೇಶದ ಹೊಟ್ಟೆಯಿಂದ ಕಾಲನ ಬಾಯಿಯಿಂದ ಅದು ಹೊಮ್ಮುತ್ತಿದೆ. ದೇಶ ಎಂದರೆ ಭೌಗೋಲಿಕ ಮರ್‍ಯಾದೆಯಲ್ಲ. ಕಾಲ ಎಂದರೆ ಗಡಿಯಾರದ ದುಂಡುಸುತ್ತುವ ಮುಳ್ಳಿನ ಪ್ರಮಾಣವಲ್ಲ.

ಸಾಹಿತ್ಯ ಎಷ್ಟೋ ಸುತ್ತಿ ಇಂದು ಕಾದಂಬರಿಯ ನಿಲ್ದಾಣಕ್ಕೆ ಬಂದಿದೆ. ಇಂದಿನ ಕಾದಂಬರಿಯಿಂದ ಸಾಹಿತ್ಯ ಸಾಧಿಸಬೇಕಾದ ತನ್ಮಯತೆ–ಪರವಶತೆಗಳು ಬೇಗನೇ ಸಿಕ್ಕಬಲ್ಲವು.

ಪೇಯದಲ್ಲಿ ಹಲವು ವಿಧ. ಪಾನದಲ್ಲಿ ವಿವಿಧ ತರ. ಕುಡಿಯುವ ಜೀವನಗಳಲ್ಲಿಯೂ ಭಿನ್ನ ಗುಣ, ಭಿನ್ನ ಗಣ. ಕಾದಂಬರಿ ಪ್ರಪಂಚವೆಲ್ಲ ಉತ್ತೇಜನಶೀಲವಾಗಿದೆ. ಮೈಮರೆ ಕಾದಂಬರಿಯ ಪ್ರತಿಕ್ರಿಯೆಯಾಗಿದೆ.

ತನ್ಮಯತೆ ಎಂಬುವುದು ರೊಮ್ಯಾಂಟಿಕ್ ಇಲ್ಲವೆ ಸವಕಳಿಯಾದ ಶಬ್ದ. ಅದು ಅಲಂಕಾರಿಕಯುಗದ ಮ್ಯೂಜಿಯಂದಲ್ಲಿನ ನಾಣ್ಯ. ಈಗ ಹದಿನೈದೇ ವರುಷಗಳಲ್ಲಿ ಕಾದಂಬರಿಯನ್ನು ಕುರಿತು ಈ ವಿಜ್ಞಾನಿಗಳು ಹಲವು ಅನ್ವೇಷಣೆ, ಪ್ರಯೋಗ ನಡೆಸಿದರು. ವ್ಯಕ್ತಿಯ ಕೃತಿಯೊಂದಕ್ಕೆ ವಿಶಿಷ್ಟ, ನಿರ್ದಿಷ್ಟ ಬೆಲೆ ಇರದಿದ್ದರೂ ಪ್ರಯೋಗ ಪ್ರಪಂಚದಲ್ಲಿ ಅವೆಲ್ಲವುಗಳಿಗೂ ಒಂದು ಪ್ರಮಾಣ ನ್ಯಾಯದ ಬೆಲೆ. ಉಪಯುಕ್ತತೆ

ಘೋಷಿತವಾಗಬೇಕಾದಾಗ ನಿರುಪಯುಕ್ತತೆಯೂ ಅಗತ್ಯ ವಸ್ತುವಾಗುವಂತೆ ಯೋಗ್ಯತೆ ತೀರ್ಮಾನವಾಗುವಾಗ ಅಯೋಗ್ಯವೂ ಎದುರು ನಿಲ್ಲುವದು ಆವಶ್ಯಕ.

ಈ ಅಗತ್ಯವರಿತೇ ಇಂದು ಕಾದಂಬರಿಯಲ್ಲಿ ವೈಯಕ್ತಿಕ – ಗುಣಮಟ್ಟದ ನಿರ್ಣಯ ದುಡುಕಿನದಾದೀತು. ಕಾಲದೇಶ ತನ್ನ ಲೆಕ್ಕದಲ್ಲಿ ಅದನ್ನು ನಿರ್ಣಯಿಸುತ್ತದೆ.

ಒಳ್ಳೆಯ ಮದ್ಯ ದೇಹಕ್ಕೆ ಹಿತವಾಗಿ ಮನಸ್ಸಿಗೆ ಉತ್ತೇಜನ ನೀಡುತ್ತದೆ. ಹೌದು. ಕಾದಂಬರಿ ಮಾಡುವ ಕೆಲಸವೂ ಇದೇ. ಕೆಟ್ಟ ಮದ್ಯ ಹುಟ್ಟಿಸಬಾರದೆಂದು ಕಾನೂನು ಹೇಳುತ್ತದೆ. ನೀತಿಯೂ ಸಾರುತ್ತದೆ. ಧರ್ಮವೂ ಅರಚುತ್ತಿದೆ. ಆದರೆ ಕೆಟ್ಟದು ಎಂಬುದರ ಹುಟ್ಟಡಗಿದೆಯೆ? ಒಂದು ಅರ್ಥದಲ್ಲಿ ನಾವೆಲ್ಲ ಒಪ್ಪುತ್ತೇವೆ: ಕೆಡುಕು ಎಂಬುದೇ ಅಬ್ಬರದಿಂದ ಬಂದು ಅಪ್ಪಳಿಸುತ್ತಿದೆ.

ಹಾಗಾದರೆ ಏಕೆ ಈ ಅಬ್ಬರ? ಬೇಡಿಕೆ ಇಲ್ಲದೆ ಪೂರೈಕೆ ಎಲ್ಲಿಯಾದರೂ ಉಂಟೆ? ಈ ಅಗ್ಗದ, ಅನಾರೋಗ್ಯಕರ ವಸ್ತುವಿಗೆ ಬೇಡಿಕೆ ಏಕೆ? ಸ್ಪಷ್ಟವೇ ಇದೆ. ನಮ್ಮ ಬದುಕು ಕರ ತಪ್ಪಿಸುವುದಕ್ಕಾಗಿ ಇಬ್ಬಗೆಯ ಲೆಕ್ಕದ ಪುಸ್ತಕ ಇಟ್ಟಿದೆ. ನಾವು ಕೋಣೆಯಲ್ಲಿ ಬಾಗಿಲಿಕ್ಕಿ ತಪ್ಪು ಲೆಕ್ಕವನ್ನೇ ಹಿಗ್ಗಿನಿಂದ ನೋಡಿ ನಲಿಯುತ್ತೇವೆ. ಹಾಗೆಯೇ ಈ ಕಡಿಮೆ ಜಾತಿಯ ಮದ್ಯ ಕುಡಿಯುವ ಚಟ.

ಮದ್ಯ ಕುಡಿಯುವದು ಬಿದ್ದ ಚಟ. ಹೀಗೆ ಚಟ ಬಿದ್ದವರು ಪರವಶತೆಯನ್ನು ಮಾತ್ರವಲ್ಲ; ಕಾಲವಶತೆಯನ್ನೂ ಪಡೆಯುವದುಂಟು. ಕಾದಂಬರಿ ಅದನ್ನು ಮಾಡಬೇಕಿಲ್ಲ. ಕಾದಂಬರಿ ಬದುಕಲು ಉತ್ತೇಜಿಸುತ್ತಿದೆ. ಉತ್ತೇಜಿತನನ್ನು ಅದು ಬದುಕಿಸುತ್ತಲೂ ಇದೆ.

ಕಾದಂಬರಿ ನೀಡುವ ಪರವಶತೆ, ಉತ್ತೇಜನ ಮದ್ಯವು ನೀಡುವ ಪರವಶತೆ ಉತ್ತೇಜನಕ್ಕಿಂತ ತೀರ ಭಿನ್ನ.

ಬೆಲೆ ಎನ್ನುವುದು ಬೇಡಿಕೆ ಪೂರೈಕೆಗಳ ಆರೈಕೆಯಲ್ಲಿ ಬೆಳೆಯುವ ಕೂಸು ಈ ಕೂಸು ಆಡುವ ತೊಟ್ಟಿಲನ್ನು ಕಾಲ ತನ್ನ ಎಳೆಗಳಿಂದ ಕಟ್ಟಿ ತೂಗುತ್ತದೆ. ಅಂತೆಯೇ ಯಾವನನ್ನೊ ಕಾಲ ಛತ್ರದ ಅಡಿಯಲ್ಲಿ ಎಳೆದು ತಂದಾಗ ಎಚ್ಚರಿದ್ದವನು "ನಾನು ಛತ್ರಪತಿ"ಯೆನ್ನುತ್ತಾನೆ. "ಪರವಶ"ನಾದವನು ತನ್ನ ತಲೆಯಮೇಲೆ ಛತ್ರವಿದೆ ಅನ್ನುತ್ತಾನೆ. ಇಲ್ಲಿ ಇಬ್ಬರಿಗೂ ಒಂದು ಬಗೆಯ ಉತ್ತೇಜನ. ಒಂದು ಸ್ವ, ಇನ್ನೊಂದು ಪರ. ಇದು ಕಾದಂಬರಿ ಶರೀರವನ್ನು ಶಸ್ತ್ರಕ್ರಿಯೆಗೆ ಒಳಪಡಿಸಿದಾಗ ಸಿಕ್ಕುವ ಮೂಲಭೂತ ಘಟಕ.

ಈಗೀಗ ಹಲವು ವರ್ಷಗಳ ಹಿಂದಿನಿಂದ ಸಾಹಿತ್ಯದ ಬದುಕಿನಲ್ಲಿಯೂ ಒಂದು ಉತ್ಪಾತ. ಯಾವ ಉತ್ಪಾತಗಳೂ ಅಸಂಭಾವ್ಯವಲ್ಲ ಎಂಬ ವೈಜ್ಞಾನಿಕ ಸಿದ್ಧಾಂತವನ್ನು ಸಾಹಿತಿಗಳೇ ಮೊದಲು ಪ್ರಮಾಣಿಸಿರಬೇಕು.

ಓದುವ ಜನ ಕೋಟಿ ಆದರೆ ಬರೇ ಬರೆಯುವವರೂ ಸಾವಿರ ಸಂಖ್ಯೆಯಲ್ಲಿದ್ದಾರೆ. ಬರೆಯುವವನೂ ಮೊದಲು ಓದುಗನು ಎಂಬುದನ್ನು ಮರೆತರೆ ಬರೆಹ ಅರ್ಥಾಂತ ಪೀಡಿತ. ಬರೆಯುವುದು ಅನಿವಾರ್ಯವಿರಲಿ, ವ್ಯವಹಾರವಿರಲಿ, ಯಾವುದಕ್ಕೂ ಅಧಿಕಾರ ಬೇಕು.

ಅಧಿಕಾರ ಸಂಪನ್ನತೆ ಬರೆಯುವವನ ರಕ್ಷಾಕವಚ. ಕಾದಂಬರಿ ಬರೆಯುವವನ ಅಧಿಕಾರ ನಿರ್ಣಯ ಯಾರು ಮಾಡಬೇಕು? ತನ್ನ ಹೊರತು ಇನ್ನಾರೂ ಬರೆಯಲು ಹೇಳಲಾರರು. ಬರೆಯುವದನ್ನು ಪ್ರತಿಬಂಧಿಸಲೂ ಆರರು.

ಕಾದಂಬರಿಕಾರನಿಗೆ ಏನು ಬೇಕು, ಏನು ಬೇಡ. ಎಂಬುದನ್ನು ಲಿಸ್ಟುಮಾಡಿ ಪರಿಷತ್ತಿನಲ್ಲಿ ಪ್ರಕಟಿಸಲಾಗದು. ಬೇಡವೆನ್ನುವದು ಜೀವನದ ಅಗತ್ಯದ ಅಂಶವೆ.

ಇಂದು ಜೀವನವು ಬಹಳ ಸಂಘರ್ಷಮಯವಾಗಿದೆ ಎಂದು ಹೇಳಲಾಗುತ್ತಿದೆ. ಆದರೆ ಎಂದಿಗೂ ಅದು ಸಂಘರ್ಷಮಯವೇ ಇತ್ತು. ಆದರೆ ಸಂಘರ್ಷಣೆಯ ಬಿಂದುಗಳು ಬೇರೆ ಬೇರೆಯಾಗಿದ್ದವು ಅಷ್ಟೆ.

ಮಾನವನಿಗೆ ಇಂದು ನಿದ್ರೆ ಅಜ್ಞಾನಗಳು ಮೊದಲಿಗಿಂತ ಕಮ್ಮಿ ಎಂಬುದನ್ನು ಒಪ್ಪಿಕೊಳ್ಳಬೇಕು. ಆದ್ದರಿಂದಲೇ ಎಚ್ಚರ,ಜ್ಞಾನಗಳು ಮೊದಲಿಗಿಂತ ಹೆಚ್ಚು ಅಗತ್ಯದ ವಸ್ತುಗಳಾಗಿವೆ.

ಮೂವತ್ತು ವರ್ಷಗಳ ಹಿಂದೆ ಇಂದಿನಷ್ಟು ಮೋಟಾರು ಆಕಸ್ಮಿಕಗಳಿರಲಿಲ್ಲ ವೆನ್ನುವುದರ ಜೊತೆಗೆ ಆ ದಿನಗಳಲ್ಲಿ ಮೋಟಾರು ಸಾರಿಗೆಯೂ ಇಷ್ಟು ಹೆಚ್ಚಿನ ಸಂಖ್ಯೆಯಲ್ಲಿರಲಿಲ್ಲ ಎಂಬ ಸತ್ಯ ಮರೆಯತಕ್ಕದ್ದಲ್ಲ.

ಕಾದಂಬರಿಕಾರ ಸಾಹಿತಿಗೆ ಇಂದು ಹತ್ತು ಹೊಣೆ ಹೆಚ್ಚಿದೆ ಎಂಬ ಮಾತು ನಿಜ. ಆದರೆ ಇಷ್ಟರಿಂದಲೆ ನಾವು ಇಂದಿನ ಪ್ರಜ್ಞಾಘನತೆಯನ್ನು ಹೇಳಿಕೊಳ್ಳಲಾಗದು. ಪ್ರಜ್ಞೆ ಎನ್ನುವದು ದೇಶಕಾಲಗಳ ಪಾತ್ರದಲ್ಲಿ ಹಿಡಿಯಬಹುದಾದ ಮನಃ ಪರಿಪಾಕ ಅಷ್ಟೆ!

ಇಂದು ಕಾದಂಬರಿ ನಡೆದುಬಂದ ಹಾದಿ ಎಂತಹದೇ ಇದ್ದರೂ ಅದರ ಭವಿಷ್ಯದ ಸ್ಪಷ್ಟ ರಾಜಮಾರ್ಗ ಸಿದ್ಧವಾಗಿಲ್ಲ. ಸಾಹಿತ್ಯದಲ್ಲಿ ಸಿದ್ಧ ರಾಜಮಾರ್ಗವು ಎಂದೂ ಜೀವಂತ ಲಕ್ಷಣವಾಗಿಲ್ಲ. ಕವಿರಾಜ ಮಾರ್ಗ ಹುಟ್ಟುವದರೊಳಗಾಗಿ ಕಣ್ಮರೆಯೂ ಆಯಿತು. ಆ ಕವಿ ಬದುಕಿದಾಗಲೇ ಅದು ಕಾಡುಪಾಲೂ ಆಯಿತು.

ಧೀರರು ದಾರಿ ನಿರ್ಮಿಸುತ್ತಾರೆ. ಇತರರು ಅದರಲ್ಲಿ ಹಾದುಹೋಗುತ್ತಾರೆ. ಹೊಸಧೀರರು ಹುಟ್ಟದಿದ್ದರೆ ಹೊಸಹಾದಿ ಇಲ್ಲ. ನಡೆದು ಹೋಗುವವರ ಹೆಸರನ್ನು ಯಾರೂ ಹೇಳುವದಿಲ್ಲ. ಅವರೆಲ್ಲ ಹೇಳಹೆಸರಿಲ್ಲದವರು. ಸಾಹಿತ್ಯ–ಕಾದಂಬರಿ–ಈ ದಾರಿಗೆ ಹೊರತಲ್ಲ.

ಒಬ್ಬ ಹಾದುಹೋದರೆ ಅದು ದಾರಿಯಲ್ಲ. ಒಬ್ಬನ ಯತ್ನ ಹಲವರ ಹೊರೆ ಇಳಿಸಬೇಕು. ಗುರಿ ತಲುಪಿಸಬೇಕು. ಶ್ರಮ ತಗ್ಗಿಸಬೇಕು. ರಕ್ಷಣೆ ಒದಗಿಸಬೇಕು. ಇದು ದಾರಿಯ ಬಗ್ಗೆ ನಮ್ಮ ತಿಳಿವಳಿಕೆ. ಕಾದಂಬರಿಕಾರನು ಮಾರ್ಗ ನಿರ್ಮಾಪಕ ನಾದರೆ – ಮಾರ್ಗ ನಿರ್ಮಾಪಕ ಎನ್ನಿಸಿದರೆ – ಇದಕ್ಕೆ ಬಾಧ್ಯನೇ ಎಂಬುವುದನ್ನು ತೂಗ ಬೇಕು, ಅಳೆಯಬೇಕು.

ಹಾಯ್ದಾಡದೆ ಹಾದಿಯಾಗುವುದಿಲ್ಲವಾದರೂ ಹೆಜ್ಜೆಮೂಡಿದ್ದೆಲ್ಲ ಹಾದಿಯಲ್ಲ. ಹಾಗೆ ಹೇಳಿದರೆ ವ್ಯರ್ಥ ಆಲಾಪ. ಇಂದು ಕಾದಂಬರಿಗೆ ಕವಲು ಹೆಚ್ಚಿವೆ. ದೃಢತೆ ಕಡಿಮೆ ಇದೆ. ಲೈಂಗಿಕ ಪ್ರಜ್ಞೆ ಕಾದಂಬರಿಗೆ ನಿಷಿದ್ಧ, ಓದುಗನಿಗೆ ಅಪಥ್ಯ ಎಂಬ ವಾದದಲ್ಲಿ

ಯಾವ ತಿರುಳೂ ಇಲ್ಲ. ಹೀಗೆಂದಾಕ್ಷಣ ಕಾದಂಬರಿ ಜನಾಂತಿಕವಾದ ಅಸಭ್ಯ ಆಕರ್ಷಣೆಯ ಗುಪ್ತವಾಚನವಲ್ಲ.

ಜೀವನದಲ್ಲಿ ವ್ಯಾಪಾರದಲ್ಲಿ ತಪ್ಪು ಲೆಕ್ಕ ಸಲ್ಲದಂತೆ ವ್ಯಕ್ತಿತ್ವದಲ್ಲಿಯೂ ಸಲ್ಲದು. ಅಪ್ರಾಮಾಣಿಕ ವ್ಯಕ್ತಿತ್ವದ ಪಾತ್ರ ಕಾದಂಬರಿಯಲ್ಲಿ ಜೀವಂತ ಇರಲಾರದು. ಹಾಗೆಯೇ ಅಪ್ರಾಮಾಣಿಕ ಕಾದಂಬರಿಕಾರ ಕೂಡ. ಕಾದಂಬರಿಕಾರನ ಅಪ್ರಾಮಾಣಿಕತೆಯಿಂದ ಆತ್ಮಗೌರವನಾಶ ತಪ್ಪಿದ್ದಲ್ಲ. ಸಾಹಿತ್ಯ ಎನ್ನುವದು ಆತ್ಮಗೌರವದ ಪ್ರದರ್ಶನ ಹೊರತು ಕ್ಷುದ್ರತೆಯ ನಿದರ್ಶನವಲ್ಲ.

ಶೈಲಿ ಕಾದಂಬರಿಕಾರ ತನ್ನ ಕೃತಿಗೆ ಕೊಡುವ ಹೊರಗಿನ ಮೆರುಗು ಮಾತ್ರವಲ್ಲ. ಅದು ಬರೆಹದ ಮೈಗೆ ಅಂಟಿಕೊಂಡ ಬಣ್ಣದ ಸಾರಣೆಯಲ್ಲ. ಸಂಪನ್ನ ಶೈಲಿ ಆತ್ಮಾಭಿಮಾನ ಆತ್ಮಾಭಿವ್ಯಕ್ತಿಯನ್ನು ದೃಢಗೊಳಿಸುತ್ತದೆ. ಓದುಗರನ್ನು ಮುಂದಿಟ್ಟುಕೊಂಡು ಅವನ ನಿಲುಗಡೆಗೆ ತಾಳಹಾಕಬೇಕೆನ್ನುವ ಒಂದು ವಾದದಲ್ಲಿ ನನಗೆ ಬಹಳ ಲಾಘವ ಕಾಣುತ್ತದೆ. ಅದು ಕಾದಂಬರಿಕಾರನ ಅಶಕ್ತತೆ.

ತಾನು ಹೋದಲ್ಲಿ ತನ್ನ ವಶೀಕರಣ ಶಕ್ತಿಯಿಂದ ಓದುಗನನ್ನು ಕರೆದೊಯ್ದು ತನ್ನ ಶ್ರೀಮಂತಿಕೆಯನ್ನು ಅವನಿಗಿಡಿಸಿ ಅವನ ದಾರಿದ್ರ್ಯ ನೀಗಿಸುವ ಕೆಲಸ ಕಾದಂಬರಿಕಾರನಿಗಿದೆ. ಇಂತಹ ಆತ್ಮೀಕರಣ ಪ್ರಯೋಗವನ್ನು ಆತ ಪಾತ್ರಗಳಿಗೆ ಮಾಡುವಂತೆ ಓದುಗನಿಗೂ ಮಾಡುವುದು ಅನಿವಾರ್ಯ. ಓದುಗನ ಆಕರ್ಷಣೆಗೇ ತಾನು ಸೋತುಹೋದರೆ ಕಾದಂಬರಿಕಾರನಿಗೆ 'ಸ್ವತ್ವ' ಇಲ್ಲದಾದೀತು. ಹೀಗೆಂದರೆ ಓದುಗ ಕಾದಂಬರಿಕಾರನ ನಡುವೆ ದೊಡ್ಡ ಕೊರಕಲಿರಬೇಕೆಂದಲ್ಲ. ಓದುಗ ಕಾದಂಬರಿಕಾರನಲ್ಲಿ ಬರುವ ದಾರಿಯಲ್ಲಿ ಕೊರಕಲಿಲ್ಲ. ಚಿಕ್ಕ ಗೊಟಿಕೆ ಕೂಡ ಅಸಹ್ಯ. ಶೈಲಿಯನ್ನು ನಿರ್ಣಯಿಸುವದು ಜೀವನದ ಪಾರದರ್ಶಕ ಶಕ್ತಿಯುಳ್ಳ ಕಾದಂಬರಿಕಾರನಿಗೇ ಬಿಟ್ಟ ಮಾತು.

ಮನೆಯಲ್ಲಿ ವಿದ್ಯಮಾನ ಪದಾರ್ಥಗಳಲ್ಲಿ ಶುಚಿಶುಚಿಯಾದ ಪಾಕ ಮಾಡುವದು ಗೃಹಿಣಿಯ ಧರ್ಮ. ಇದ್ದುದನ್ನೆಲ್ಲ ಮುಗುಚಿ ರುಚಿಯಾದ ತಿಂಡಿ ಮಾಡಿದರೆ ಧೂಳಿತನವಾದೀತು; ಇಲ್ಲದ ಆಡಂಬರ ಪ್ರದರ್ಶನ ದುಂದುಗಾರಿಕೆ ಅನ್ನಿಸದಿರದು. ಚಿನ್ನ ಇದೆ ಎಂದು ಹತ್ತು ಕಿಲೋ ತೂಕದ ಆಭರಣ ಕೊರಳಿಗೆ ಸಲ್ಲದು. ಕಬ್ಬಿಣದ ತಾಳಿಗೆ ಮಿರುಗುವ ಕಾಗದ ಹಚ್ಚಿ ಚಿನ್ನದ ಭ್ರಾಂತಿ ಹುಟ್ಟಿಸುವುದೂ ಅವಾಸ್ತವ. ಈ ಲಾಂಛನದ ಅಡಿಯಲ್ಲಿ ಕಾದಂಬರಿಕಾರ ನಡೆದಾಡಬೇಕು.

ಶೈಲಿ, ನಿರೂಪಣೆಗಳು ಸಂಸ್ಕಾರ ದಪ್ಪ, ಗಾಢವಾಗಿರುವಾಗ ಛಾಯೆ, ಪ್ರಭಾವಗಳು ಕಾದಂಬರಿಕಾರನಿಗೆ ಬೆನ್ನು ಹತ್ತಿ ಬರಬಹುದು. ಆದರೆ ಇದರಲ್ಲಿಯೂ ತನ್ನ ವ್ಯಕ್ತಿತ್ವದ ಧ್ವಜ ನಿಲ್ಲಿಸುವ ದಾರ್ಢ್ಯ ಇಲ್ಲದೆ ಹೋದರೆ ಕಾಬಂದರಿಕಾರನಿಗೆ ಬಾಲಾರಿಷ್ಟ ತಪ್ಪಿದ್ದಲ್ಲ. ತನ್ನ ಬಾಯಿ ಹಾಗೂ ಕಡುಬಿನ ಅಳತೆಗೊತ್ತಿದ್ದು ಕಾದಂಬರಿಕಾರನ ಗಿಳಂಕರಣ ನಡೆದರೆ ಯಾವ ಆಪತ್ತೂ ಇಲ್ಲ.

ಇತ್ತೀಚೆಗೆ ನನ್ನ ಹಲವು ಆತ್ಮೀಯ ಮಿತ್ರರಲ್ಲಿ ಪ್ರತಿಮಾರ್ಚನೆಯ ಪ್ರಸಕ್ತಿ ತಲೆದೋರುತ್ತಿದೆ. ಮುಕ್ತ ಹೃದಯದವರಿಗೆ ಯಾವ ಆಚರಣೆಯೂ ಫಲಕಾರಿಯಾಗ

ಬಹುದು. ಪ್ರತಿಮೆಯನ್ನು ಅರ್ಚಿಸಿದ ಮಾತ್ರಕ್ಕೆ ವಾಂಛಿತಾರ್ಥ ಸಿದ್ಧಿಯಾಗದು. ನಮ್ಮ ಅರ್ಚನ ವಿಜ್ಞಾನದಲ್ಲಿ ಒಂದು ನಿಯಮ ಮರೆಯದಂತಹದಿದೆ.

ಅರ್ಚಕನ ತಪೋಬಲ...

ಹೌದು ಅದು ದೊಡ್ಡದು. ಅರ್ಚಕನಿಗೆ ಬಲಬೇಕು. ಬರಿ ಬಲ ಸಾಲದು. ಅದನ್ನು ಆತ ಕಾಯಬೇಕು. ತಪಸ್ಸುಬೇಕು. ಪ್ರತಿಮಾರ್ಚನ ನಿರತರಾದ ನನ್ನ ಸ್ನೇಹಿತ ರಿಗೊಂದು ನಮ್ರ ಕೋರಿಕೆ. ನಿಮ್ಮ ಪ್ರತಿಮೆಗೆ ಪ್ರಾಣಾವಾಹನ ಮಾಡಿ ಅರ್ಚಿಸಿರಿ. ಪ್ರಾಣಾವಾಹನ ಮಾಡದ ಅರ್ಚನೆ ವಿಫಲ. ಬರಿ ಮಕ್ಕಳ ಬೊಂಬೆಯಾಟ.

ವಿಕಲ ಪ್ರತಿಮೆ ಪೂಜಾರ್ಹವಲ್ಲ. ಸಕಲ ಸುಂದರ ಪ್ರತಿಮೆ ಪೂಜ್ಯ ಇತ್ಯಾದಿ ಪೂಜಾ ಪದ್ಧತಿಯೂ ಗಮನೀಯವಾಗಿದೆ.

ಬಾಯಲ್ಲಿ ರಬ್ಬರಿನ ತುಂಡು ಹಿಡಿದು ಜಗಿಯುತ್ತಲಿದ್ದರೆ ಚರ್ವಣವಲ್ಲ. ಸಾಹಿತ್ಯ ದಲ್ಲಿ ಕಲ್ಲು ಎಸೆದು ತೆರೆ ಎಣಿಸುವದು ಕೆಲಸವಲ್ಲ. ವಾದಗಳ ರಣರಂಗಕ್ಕೆ ಕಾದಂಬರಿ ಕಣ ಸಿದ್ಧಮಾಡಿ ಗುದ್ದಾಡುವದು ಕಾದಂಬರಿಕಾರನ ಕೆಲಸವಲ್ಲ.

ಜೀವನ ಎನ್ನುವದರ ಸೂಜಿಯ ಮೊನೆಯ ನೆಲವೂ ಕಾದಂಬರಿಗಾಗಿ ತೆರೆದಿದೆ. ಜೀವನ ಭೂಖಂಡ ವಿಸ್ತಾರವೂ ಅದರದೆ. ಪೌರುಷವಾದ, ಅಸ್ತಿತ್ವವಾದ, ಅಶಕ್ತವಾದ, ನಿರಾಶಾವಾದ, ಆಶಾವಾದ, ಈ ಹಲವಾದಗಳಿಗಾಗಿ ಕಾದಂಬರಿ ಗೈಡ ಆಗಬೇಕಿಲ್ಲ. ಇದೆಲ್ಲವನ್ನೂ ಒಳಗೊಂಡು ಅತ್ಯತಿಷ್ಠದ್ದಶಾಂಗುಲಂ ಇದೆ.

ಕಾದಂಬರಿ ಎನ್ನುವದು ಲೇಖಕನ ಪುರುಷಸೂಕ್ತ. ಸಹಸ್ರ ಶೀರ್ಷ, ಸಹಸ್ರಾಕ್ಷ, ಸಹಸ್ರಪಾತ್ ಇದೆ. ಅದು ಭೂಮಿಯನ್ನು ತುಂಬಿ ಮುಗಿಲು ತುಂಬಿ ಎದೆ ತುಂಬಲಿದೆ.

"ಯಜ್ಞೇನ ಯಜ್ಞಮಯ ಜಂತ ದೇವಾ:" "ದೇವತೆಗಳು ಯಜ್ಞದಿಂದ ಯಜ್ಞವನ್ನು ಹಮ್ಮಿದರು" ಕಾದಂಬರಿಕಾರರು ಜೀವನದಿಂದ ಹೊಸಜೀವನ ಹುಟ್ಟಿಸಿ ದರು. ಇದು ಪುರುಷಸೂಕ್ತ. ಕಾದಂಬರಿ ವಾದಾತೀತವಾಗಿದೆ. ವಾದವಿವಾದದ ಎದುರು ನಿಂತು ತತ್ವಬೋಧವನ್ನು ನೀಡಿದರೂ ಕಾದಂಬರಿ ವಾದವೇದಿಕೆಯಲ್ಲಿ ನಿರ್ವಿವಾದ ಜೀವನಭೂಮಿ.

ಹೊಸತು ಹಿಗ್ಗನ್ನೂ ಹೊಣೆಯನ್ನೂ ತರುವುದನ್ನು ಕಾದಂಬರಿಕಾರ ಮರೆಯ ಬಾರದು. ಬರಿ ಹಿಗ್ಗುಬೇಕೆಂದು ಹೊಣೆ ಹಾರಿಸಿದರೆ ನಡೆಯದು. ಕಾದಂಬರಿ ನಿರಂಕುಶ ವಿದ್ದರೂ ತನ್ನದೇ ಆದ ಅನಂತ ವ್ಯಾಪ್ತಿಯ ನಿಯಮಗಳು ಅದಕ್ಕಿವೆ. ನಾವು ನೀವೆಲ್ಲ ನಿಯಮಬಾಹಿರರಲ್ಲ. ಬಂದಿಗಳೂ ಅಲ್ಲ.

ತಮ್ಮ ಮುದ್ರಿತ ಪುಸ್ತಕಕ್ಕೆ ಕಾದಂಬರಿ ಎಂದುಕೊಂಡರೆ ಅದು ಕಾದಂಬರಿ ಆದೀತೆ ಎನ್ನುವ ಮಾತಿಗೆ ಕಾದಂಬರಿಕಾರ ಉತ್ತರ ಕೊಡಬೇಕಾಗುವದು. ಜೀವನಕ್ಕೆ ಬೇಕಾಗುವ ಸಮಗ್ರತೆ ಇದೆಯೆ?' ಎಂಬುವ ನಿದಾನ ಅಗತ್ಯ.

ಪ್ರೇಮ, ಉನ್ಮತ್ತ ಕಾಮ, ವಿಫಲತೆ, ನರಳಿಕೆ, ದೌರ್ಬಲ್ಯ, ಆಕ್ರೋಶಗಳಷ್ಟೇ ವಾಸ್ತವ ಜೀವನವೆನ್ನುವ ಹೊಸ ಮಳೆಗಾಲದ ವಿಚಾರ ಪ್ರವಾಹವೂ ಅಷ್ಟೇ ಪಕ್ಷಪಾತ ಪೂರ್ಣವಾಗುವುದು. ದೃಷ್ಟಿಯಲ್ಲಿ ದೃಢತೆಬೇಕು. ವಿಕಾರವು ಆರೋಗ್ಯದ ಲಕ್ಷಣವಲ್ಲ. ಜೀವನದ ಸಹಜಧರ್ಮವೂ ಅಲ್ಲ. ತಾತ್ಕಾಲಿಕ ಸತ್ಯವಿರಬಹುದು. ಆದ್ದರಿಂದ ರೋಗವು

ಜೀವನದ ಸಹಜಸ್ಥಿತಿ ಎನ್ನಿಸದು. ಎಂಬ ಮಾತು ಕಾದಂಬರಿಕಾರ – ಅವನು ಯಾವ ಗುಂಪಿಗೇ ಸೇರಿರಲಿ – ತಿಳಿಯಬೇಕಾದ ಅಂಶ.

ಜೀವನದ ಲಕ್ಷಣ ಆರೋಗ್ಯ, ಸುದೃಢತೆ. ಇದು ಇಲ್ಲವಾದಾಗ ಚಿಕಿತ್ಸೆಗೆ ಒಳಪಡಬೇಕಾದ ಸ್ಥಿತಿ ಬಂದಿದೆ ಎಂಬುದು ನಿರ್ವಿವಾದ. ಕಾದಂಬರಿಕಾರ ಕ್ಷಣಿಕ ವಿಕಾರ ಕ್ಕೊಳಗಾಗಿ ಪರಿಸ್ಥಿತಿ ಮರೆತು ಅನಾರೋಗ್ಯವನ್ನೇ ಜೀವನ ಎಂದು ಭಾವಿಸಬಾರದು. ಅದರಂತೆ ಕುರುಡುತನದಿಂದ ಜೀವನವೆಂದರೆ ನಿರೋಗದ ಕೇಂದ್ರ, ಬೇನೆ ಎಂಬುದು ಮನುಷ್ಯನಿಗೆ ಬರಲೇ ಆರದು ಎಂಬ ವಾದವೂ ಕೊಳಕು, ಪೊಳ್ಳು. ಜೀವನದ ಟೊಳ್ಳು ಗಟ್ಟಿಯ ನಿರ್ಣಾಯಕ ಬಲ ಕಾದಂಬರಿಕಾರನಿಗೆ ಬೇಕು. ಬುರುಡೆಯನ್ನು ನಂಬಿ ಹೊಳೆ ಬೀಳುವ ಪ್ರವೃತ್ತಿ ಕಾದಂಬರಿಕಾರರಲ್ಲಿ ಬೆಳೆದರೆ ಎಚ್ಚತ್ತ ಓದುಗರ ಹೃದಯ ಸಮುದ್ರ ದಲ್ಲಿ ಇವನಿಗೆ ಉಸುರುಗಟ್ಟುವ ಗಾಬರಿ.

ಇಂದು ವಿಜ್ಞಾನ ಬೆಳೆದಿದೆ. ಹೌದು ಚಂದ್ರಲೋಕದತ್ತ ಮಾನವನನ್ನು ಒಯ್ಯು ವದರ ಕಡೆಗೆ ಮಾತ್ರವೇ ಬೆಳೆದಿಲ್ಲ. ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಬುದ್ಧಿ ವೈಜ್ಞಾನಿಕ ಕಾರ್ಯ ಮಾಡುತ್ತಿದೆ.

ಲೈಂಗಿಕವೇ ಜೀವನದ ಪುರುಷಾರ್ಥವಲ್ಲ. ವೈಕ್ಲವ್ಯವೇ ವ್ಯಕ್ತಿತ್ವದ ಪರಮಾರ್ಥವೂ ಅಲ್ಲ. ಜೀವನದಲ್ಲಿ ಈ ವಿಕೃತಿಗಳ ಆಚೆಗೆ ಅಥವಾ ಈಚೆಗೆ ಬೇರೆ ರೂಪ ಗುಣಗಳಿವೆ. ಅವಕ್ಕೂ ಬದುಕು, ಕಡೆಗಳಿವೆ ಎಂಬುದು ಅವಾಸ್ತವವಲ್ಲ.

ರೋಮ್ಯಾಂಟಿಕ್ ಅನ್ನುವದು ಶೈಲಿಯ ರೀತಿಯಲ್ಲಿ ಹಳೆಯದಿರಬಹುದು. ಸತ್ಯದ ಸತ್ವದ ಪ್ರದರ್ಶನದಲ್ಲಿ ಹೊಸಗತಿ, ಪ್ರಗತಿಗೆ ಅನುಕೂಲವಾಗಿ ಬಳಸಿದರೆ ಅದು ಅವಾಸ್ತವವಲ್ಲ. ಸತ್ಯ ಎನ್ನುವುದು ಸಾಹಿತ್ಯದ ಚಿರಂತನ ಜೀವಾಳವಾಗಿದೆ. ಸತ್ಯ ವಲ್ಲದ ಯಾವುದೂ ಸಾಹಿತ್ಯವಾಗಲಾರದು. ಆದರೆ ಸತ್ಯ ಎಂಬ ಪಂಥವು ಸಾಹಿತ್ಯಕ್ಕೆ ಅನಪೇಕ್ಷವಾಗಿದೆ. ಇಂದಿನ ಸತ್ಯವು ಕಾಲಾಧೀನ. ಸಾಹಿತ್ಯದ ಸತ್ಯ ಚಿರಂತನ. ಸಾಹಿತ್ಯದ ಜೀವನಾಡಿಯಾದ ಸತ್ಯವನ್ನು ಕಾಲವಶ ಮಾಡಿ ಅದಕ್ಕೊಂದು ಮಠ, ಪೀಠಕಟ್ಟಿ ಸಮಾಧಿ ಮಾಡುವದು ಬೇಡ. ಅದು ಚಿರಂತನ ಸಮ್ರಾಟ್ ಶಕ್ತಿಯೇ ಆಗಿರಲಿ.

ಅನಾರೋಗ್ಯ, ವಿಕಾರಗಳು,ಅವಾಸ್ತವಗಳಲ್ಲವಾದರೂ ಅಪೇಕ್ಷಣೀಯವಲ್ಲ. ವಿಕಾರ ವಶನಾದವನು ಚಿಕಿತ್ಸೆಯ ಪ್ರಯೋಜನ ಪಡೆಯಬೇಕು. ರೋಗವನ್ನು ಮುಚ್ಚವದ ರಿಂದ ರೋಗ ಉಲ್ಬಣಿಸೀತು.

ಇತರರ ಜೀವನವನ್ನು ಜಟಿಲಗೊಳಿಸುವದೊಂದೇ ಕೆಲವರು ಬದುಕುವ ದಾರಿ. ಇದಕ್ಕೆ ಇಂದಿನ ಶಬ್ದಗಳಲ್ಲಿ ರಾಜಕೀಯ ಎಂದು ಹೇಳಬಹುದು. ಸಾಹಿತಿ ಇದನ್ನು ಹೊಲಸುಹಾದಿ, ಮಾಡಬಾರದ ಕೆಲಸ ಎಂದು ಮೂಗು ಮುರಿಯುತ್ತಾನೆ. ವಿಕಾರಗಳಿಗೆ, ಅನಾರೋಗ್ಯಕ್ಕೆ, ಅಶಕ್ತತೆಗೆ ಸಮಗ್ರ ಜೀವನದ ಪಟ್ಟಕಟ್ಟುವ ಕೆಲಸವೂ ಸಾಹಿತ್ಯದಲ್ಲಿ ನಡೆದ ರಾಜಕೀಯವಲ್ಲದೆ ಮತ್ತೇನು?

ಕಣ್ಣಿಗೆ ಕಂಡದ್ದೆಲ್ಲ ಸತ್ಯವಲ್ಲ ಎಂಬುದೊಂದು ಹಳೆಯ ವೇದಾಂತ ಸಿದ್ಧಾಂತವನ್ನು ಹೊಸ ವೈಜ್ಞಾನಿಕ ಧೋರಣೆ ಒಪ್ಪಿಕೊಳ್ಳುತ್ತದೆ. ಆದ್ದರಿಂದ ವಾಸ್ತವಿಕತೆ ಎನ್ನುವದು ಸಮಗ್ರ ಸತ್ಯವಲ್ಲ ಎಂಬುವದು ಕಾದಂಬರಿಕಾರ ತಿಳಿಯಬೇಕಾದ ಅಂಶ.

ಗುಂಪು, ಸ್ಕೂಲ್, ಬಣ, ರಾಜಕೀಯದಲ್ಲಿ ಮಾಡಿದ ಅನರ್ಥವನ್ನು ಸಾಹಿತ್ಯದಲ್ಲಿ ಮಾಡುವುದಿಲ್ಲ ಎಂಬ ಆಶ್ವಾಸನೆ ಏನೂ ಇಲ್ಲ. ಅಲ್ಲ ಸಲ್ಲದ್ದು ಇಲ್ಲಿಯೂ ಸಲ್ಲದು. ಕಾಲ ಇವನ ವಶವಾಗಬೇಕು. ದೇಶ ಇವನ ಕೈವಶವಾಗಬೇಕು. ಇಷ್ಟು ಸಮ್ರಾಟ ಶಕ್ತಿ ಇದೆ ಎಂಬ ವಿಶ್ವಾಸ ಶಿಥಿಲವಾದರೆ ಆತ ನಿರ್ಮ್ಮಾಣಕ್ಕೆ ಅರ್ಹನಾಗುವದಿಲ್ಲ. ಸರಕಾರದ ಅನುಗ್ರಹದಿಂದ ಲಾಭಗಿಟ್ಟಿಸುವ ಕಂಟ್ರಾಕ್ಟುದಾರನಾಗುತ್ತಾನೆ. ಹೊರತು ಓದುಗರ ಮನವನ್ನು ಜಯಿಸಿದ ಕಾದಂಬರಿಕಾರನಾಗಲಾರ.

ಮನಸ್ಸು ಕಾದಂಬರಿಗೆ ಬಹು ದೊಡ್ಡ ಕ್ಷೇತ್ರ. ಕಾದಂಬರಿಕಾರ ಕ್ಷೇತ್ರಜ್ಞನಾಗದೆ ಸಫಲನಾಗಲಾರ. ಮನಸ್ಸಿನ ಆಳ, ಅಗಲ, ತೂಕ ಅಳತೆಯಲ್ಲಿ ಪರಿಣತಿ ಬೇಕು. ಜೀವನದ ವ್ಯಾಪ್ತಿ ಅನಂತವಾಗಿದ್ದರೂ ಕಾದಂಬರಿಕಾರ ಈ ಅಪರಂಪಾರದ ಅಳತೆ ಗೋಲಿದ್ದವ. ತಾನು ಈಸಿ ಜಯಿಸಿದ ಪಂದ್ಯ ಕಾದಂಬರಿಕಾರನಿಗೆ ನಿಷಿದ್ಧ. ಪರಕಾಯ ಪ್ರವೇಶ ವಿಜ್ಞಾನಸಿದ್ಧಿ ಗೊತ್ತಿಲ್ಲದವನು ಕಾದಂಬರಿಕಾರನಾಗ.

ಮಾನಸಿಕ ದುರ್ಬಲತೆ, ಅಹಂಕಾರಿಕ ಆಢ್ಯತೆ, ಇವುಗಳ ನಡುವೆ ಇರುವ ಒಡಂಬಡಿಕೆಯ ಸೇತುವೆ, ಇವೆಲ್ಲವುಗಳ ಮೌಲ್ಯ ನಿರ್ಧಾರ ನಿಖರವಾಗಿ ಮಾಡುವ ಪ್ರಭುತ್ವ ಇದ್ದ ಹೊರತು ಕಾದಂಬರಿ ಬರೆಯುವದು ಸಲ್ಲದ ಕೆಲಸ.

ನಡೆದದ್ದೆಲ್ಲ ಹಾದಿಯಲ್ಲ ಎನ್ನುವ ರೀತಿಯಲ್ಲಿ ಕಂಡದ್ದೆಲ್ಲ ಸತ್ಯವಲ್ಲ. ಇರುವುದೆಲ್ಲ ಜೀವನವೂ ಅಲ್ಲ. ಕಾದಂಬರಿಕಾರ ಬದುಕಿಗೆ ಹುಳು ಹತ್ತಿದ ಕಂಬವಲ್ಲ. ಇಲ್ಲವೆ ದುರ್ಬಲ ದೀಪದ ಹುಳವನ್ನು ಕೊಲ್ಲಲು ಇಟ್ಟ ದೀಪವೂ ಅಲ್ಲ. ಯಾವ ದೀಪವೂ ಬಡಪಾಯಿ ಒಂದು ಹುಳವನ್ನು ಕೊಲ್ಲಲು ಯೋಜಿಸಿದ ಉಪಾಯವೂ ಅಲ್ಲ. ಕಾದಂಬರಿಗೆ ಸಮಗ್ರ ಪ್ರಯೋಜನವಿದೆ. ಅದು ಜೀವನದ ಅವ್ಯಾಪ್ತಲಕ್ಷ್ಯವಲ್ಲ ಪರ್ಯಾಪ್ತ ವಿಧಾನ.

ಔಷಧ, ಶಸ್ತ್ರಕ್ರಿಯೆ ರೋಗವನ್ನು ನಿಯಂತ್ರಿಸುವುದಕ್ಕೆ ಆರೋಗ್ಯವರ್ಧನೆಗೆ ಇವೆ ಹೊರತಾಗಿ ಆಹಾರದ ಸ್ಥಾನದಲ್ಲಿ ಪರ್ಯಾಯವಾಗಿ ಬಂದವಲ್ಲ. ನಮ್ಮ ಲೈಂಗಿಕ ವಾದಿ ಮಿತ್ರರು, ಆಶಕ್ತತೆಯ ಅನುಮೋದಕರು ಕಾದಂಬರಿಯಲ್ಲಿ ಲೈಂಗಿಕತೆಯನ್ನು ಬಳಸುವಾಗ ಅದು ಆಹಾರವೆಂದು ಅನುಪಾನ ಹೇಳದೆ ರೋಗಕ್ಕೆ ಪಥ್ಯವೆಂದು ಬಳಸಿದರೆ ಸಾಕು.

ಜೀವನದಲ್ಲಿ ಲೈಂಗಿಕತೆಗೆ ಹೇಸಿಕೊಳ್ಳುವುದೂ ಹೇಯುವಾದ ಮಡಿವಂತಿಕೆ ಎನ್ನಿಸ ಬಹುದು. ಉಪ್ಪಿನಕಾಯಿ ಊಟದಲ್ಲಿ ಒಂದು ಪದಾರ್ಥ; ಆದರೆ ಪ್ರಿನ್ಸಿಪಲ್ ಊಟವೇ ಅದಲ್ಲ. ಈ ಪರಿಜ್ಞಾನ ಅಗತ್ಯ.

ಹಳೆತೊಗಲು ಹೋಗಿದೆ. ಹೊಸ ತೊಗಲು ಬರಲೇಬೇಕು. ಸಾಹಿತ್ಯದಲ್ಲಿ ಆಗಮಾದಾಯಗಳು, ಯಾತಾಯಾತಗಳು ಸಂಭಾವ್ಯ, ಅಗತ್ಯ. ಅದು ಜೀವಂತಿಕೆಯ ಲಕ್ಷಣ ಕೂಡ.

ಮೌಲ್ಯ ನಿರ್ಣಯದಲ್ಲಿ ಕಾಲವನ್ನು ನಾವು ಕಡೆಗಣಿಸಲಾಗದು. ಅಂದರೆ ನಾವು ಅದರ ಕೈಗೊಂಬೆಯೂ ಆಗಕೂಡದು, ಕಾಲದೊಡನೆ ಕಾಲಹಾಕಿ ಮುಂದುವರಿದವನೇ ಕಾದಂಬರಿಕಾರ. ನೂರು ತೊಡಕು ಬಿಡಿಸಿರಿ. ಜೀವನವನ್ನು ಮುಳ್ಳಿನ ಹಾದಿಯಿಂದ

ರಾಜಮಾರ್ಗಕ್ಕೆ ತನ್ನಿರಿ. ಇದು ನಾವು ಕಾದಂಬರಿಕಾರರು ಮಾಡಬೇಕಾದ ಕೆಲಸ. ಇದನ್ನು ಮರೆತು ಮಠಕಟ್ಟಿದರೆ ಗುಂಪುಗೂಡಿದರೆ ನಾವು ಮೂಲೆಗುಂಪಾಗುತ್ತೇವೆ. ಜೀವನವನ್ನೂ ಮೂಲೆಗುಂಪು ಮಾಡುತ್ತೇವೆ. ನಾವಿರುವದು ತೊಡಕು ಬಿಡಿಸುವದಕ್ಕೆ, ತೊಡಕಾಗುವದಕ್ಕಲ್ಲ.

ಕಾದಂಬರಿಗೋಷ್ಠಿಯ ಉದ್ಘಾಟನೆಯಲ್ಲಿ ನನ್ನ ಪಾತ್ರ ಕಾದಂಬರಿ ಬರೆದ ತಪ್ಪಿಗೆ ನಾನು ಈ ವರೆಗೆ ಹೇಳಿದ ಮಾತು. ನನ್ನ ಕಾದಂಬರಿಗಳನ್ನು ಅಗ್ಗಿಷ್ಟಿಕೆಯಲ್ಲಿಟ್ಟು ಕರಗಿಸಿದಾಗ ಹೊರಟ ಸತ್ವ. ಈ ಸತ್ವ ನನ್ನ ಮರ್ಯಾದೆ ಮಾತ್ರವಲ್ಲ, ಕಾದಂಬರಿ ಬರೆದವನು ನಾನು ಅನ್ನುವ ಆತ್ಮವಿಶ್ವಾಸ ಇದ್ದವರೆಲ್ಲರ ಆಸ್ತಿ. ಇಲ್ಲಿ ಸೇರಿದ ನಾವೆಲ್ಲ ಇಂತಹ ಸಾತ್ವಿಕರು ಹೊರತು ಬರಿ ಅದಮಟಗರಲ್ಲ, ಜೀವನವನ್ನು ಉಂಡವರು, ಉಣಬಡಿಸಿದವರು. ಈ ಸತ್ವ ಸಮಗ್ರವಾಗಲಿ; ಸಕಲವಾಗಲಿ ಎಂದು ಕಾದಂಬರಿ ಗೋಷ್ಠಿಯ ಕದ ತೆರೆಯುತ್ತೇನೆ. ಯಾರಿಗೂ ಅದು ಮುಚ್ಚದಿರಲಿ.

# ಗ್ರಾಮಾಯಣದ ಸತ್ವ–ಅದರ ಜೀವನ ಪ್ರಜ್ಞೆಯಲ್ಲಿ

ಪ್ರಬಂಧ

ಜಿ. ಎಸ್. ಆಮೂರ

ರಾವ್‌ಬಹಾದ್ದೂರರ "ಗ್ರಾಮಾಯಣ" ಮೊದಲ ನೋಟಕ್ಕೇ ಪ್ರಭಾವ ಬೀರ ಬಲ್ಲ ಕೃತಿ. ಪ್ರಕಟವಾದ ಹೊಸತರಲ್ಲಿ ಅದನ್ನು ಓದಿದ ನೆನಪು ಇನ್ನೂ ಇದೆ. ರಾವ್ ಬಹಾದ್ದೂರರ ಇತಿಹಾಸಪ್ರಜ್ಞೆ, ಗ್ರಾಮಜೀವನದ ಬಗ್ಗೆ ಅವರಲ್ಲಿರುವ ಅಗಾಧ ಅನುಭವ, ಜ್ಞಾನ, ಘಟನೆಗಳ ಆಯ್ಕೆ, ಜೋಡಣೆಯಲ್ಲಿ ಅವರು ತೋರಿರುವ ಕೌಶಲ, ಆವರಣ ಸೃಷ್ಟಿಯಲ್ಲಿ ಅವರಿಗಿರುವ ವಿಶಿಷ್ಟ ಪ್ರತಿಭೆ, ಸಜೀವ ಭಾಷೆಯ ಹಿಡಿತ, ಇತ್ಯಾದಿ ಅನೇಕ ವಿಷಯಗಳನ್ನು ಅಂದು ಮೆಚ್ಚಿಕೊಂಡಂತೆ ಇಂದೂ ಮೆಚ್ಚು ತ್ತೇನೆ. ಆದರೆ ಹತ್ತು ಹನ್ನೆರಡು ವರ್ಷಗಳ ಅಂತರದಲ್ಲಿ "ಗ್ರಾಮಾಯಣ"ವನ್ನು ವಿಮ ರ್ಶೆಯ ದೃಷ್ಟಿಯಿಂದ ಮತ್ತೊಮ್ಮೆ ಓದಿದಾಗ ಒಂದು ರೀತಿಯ ಅಸಮಾಧಾನವನ್ನು ನಾನು ಅನುಭವಿಸಿದ್ದೇನೆ ಎನ್ನುವುದನ್ನು ಹೇಳಲೇಬೇಕಾಗಿದೆ. ಈ ಅಸಮಾಧಾನಕ್ಕೆ ರಾವಬಹಾದ್ದೂರರ ಇತ್ತೀಚಿನ ಕೃತಿ "ಮುತ್ತುಕಟ್ಟಿದಳು" ಕೆಲಮಟ್ಟಿಗೆ ಹೊರಗಿನ ಕಾರಣವಾಗಿರಬಹುದಾದರೂ, ಅದು ಮುಖ್ಯವಾಗಿ "ಗ್ರಾಮಾಯಣ"ಕ್ಕೆಯೆ ಸಂಬಂಧಿ ಸಿದ್ದು. ಈ ಹೊಸ ಅನುಭವವನ್ನು ತಿಳಿಯಲು ಯತ್ನಿಸುವುದೇ ಸದ್ಯದ ಲೇಖನದ ಉದ್ದೇಶವಾಗಿದೆ.

"ಗ್ರಾಮಾಯಣ"ದಲ್ಲಿನ ನವ್ಯತೆ ಸಾಕಷ್ಟು ಪುರಸ್ಕೃತವಾಗಿದೆ. ಆದರೆ ನಿಜವಾಗಿ ನೋಡಿದರೆ ಗ್ರಾಮಾಯಣದಲ್ಲಿ ಸಾಂಪ್ರದಾಯಿಕ ಅಂಶಗಳೇ ಹೆಚ್ಚು. ಸಾಮಾಜಿಕ ಸ್ಥಿತ್ಯಂತರಗಳನ್ನೇ ಮುಖ್ಯ ವಸ್ತುವನ್ನಾಗಿ ಬಳಸಿಕೊಂಡ ಕಾದಂಬರಿ ಕನ್ನಡಕ್ಕೆ ಹೊಸ ತೇನೂ ಅಲ್ಲ. 'ಗ್ರಾಮಾಯಣ'ಕ್ಕಿಂತ ಮೊದಲೇ ಈ ಸಂಪ್ರದಾಯದಲ್ಲಿ "ಮರಳಿಮಣ್ಣಿಗೆ" ಮತ್ತು "ಸಮರಸವೇ ಜೀವನ"ದಂತಹ ಕಾದಂಬರಿಗಳು ಹುಟ್ಟಿಕೊಂಡಿದ್ದವು. ಒಂದು ಊರನ್ನೇ ಕೇಂದ್ರವಾಗಿಟ್ಟುಕೊಂಡು ಜೀವನದ ಏರಿಳಿತಗಳನ್ನೂ, ಸಾಮಾಜಿಕ ಬದಲಾ ವಣೆಗಳನ್ನೂ, ಮೌಲ್ಯಗಳ ಸೃಷ್ಟಿ–ಲಯಗಳ ಗತಿಯನ್ನೂ ಅಬ್ಬರಿಸುವ ರೀತಿಯನ್ನೂ ಈ ಕಾದಂಬರಿಗಳಲ್ಲಿಯೂ ನಾವು ಕಾಣಬಹುದು. ಗ್ರಾಮಾಯಣದ ವೈಶಿಷ್ಟ್ಯವೆಂದರೆ, ಈ ಮೊದಲಿನ ಕಾದಂಬರಿಗಳ ಹರವನ್ನು ಬಿಟ್ಟುಕೊಟ್ಟು, ಸಮಾಜದ ಒಂದು ಸಾಂಕ್ರಾ ಮಿಕ ಅವಸ್ಥೆಯಲ್ಲಿ ಲಕ್ಷ್ಯವನ್ನು ಕೇಂದ್ರೀಕರಿಸಿ ಏಕರೂಪತೆಯನ್ನು ಸಾಧಿಸಿದುದು. ಇದರಿಂದ ಇಲ್ಲಿನ ಜೀವನದರ್ಶನಕ್ಕೆ ಬರುವ ತೀವ್ರತೆ ಉಳಿದ ಕಾದಂಬರಿಗಳಲ್ಲಿಗಿಂತ ಭಿನ್ನವಾಗಿದೆ. ಮರಳಿಮಣ್ಣಿಗೆ ಮತ್ತು ಸಮರಸವೇ ಜೀವನ ಕಾದಂಬರಿಗಳ ಮಹತ್ವಾ

ಕಾಂಕ್ಷೆಯೇ ಅವುಗಳಿಗೆ ಒಂದು ರೀತಿಯಿಂದ ತೊಡಕಾಗಿ ಪರಿಣಮಿಸುತ್ತದೆ. 'ಇಜ್ಜೋಡ'ನ್ನು ಮೆಚ್ಚಿಕೊಂಡಂತೆ, ಕಾದಂಬರಿಯ ಉಳಿದ ಭಾಗಗಳನ್ನು ನಾವು ಮೆಚ್ಚಿಕೊಳ್ಳುವುದಿಲ್ಲ. ಮರಳಿಮಣ್ಣಿಗೆಯ ಕೊನೆಯ ಭಾಗದ ಬಗ್ಗೆ ವ್ಯಕ್ತವಾದ ಅಸಮಾಧಾನಕ್ಕೂ ಇಂತಹದೇ ಕಾರಣವಿದೆ. ಕಾರಂತ-ಗೋಕಾಕರಿಗೆ ಸಮಾಜದ ವಿಘಟನೆಯಂತೆ ಅದರ ಸಂಘಟನೆಯೂ ಮಹತ್ವದ್ದೆನಿಸಿದ್ದರಿಂದ ಅವರು ತಮ್ಮ ಕಾದಂಬರಿಗಳಿಗೆ ಈ ರೀತಿಯ ಹೊಳವನ್ನು ಹಾಕಿಕೊಂಡರು. ಗೋಕಾಕರಂತೂ ತಮ್ಮ ಅನುಭವಕ್ಕೆ ಮೀರಿದ ವಿಷಯಗಳನ್ನೂ – ನರಹರಿಯ ಜೇಲುವಾಸ, ಸ್ವಾಮಿದಾಸರ ಹಿಮಾಲಯ ಯಾತ್ರೆ ಇತ್ಯಾದಿ– ತಮ್ಮ ಕಾದಂಬರಿಗೆ ಅಳವಡಿಸಿಕೊಂಡರು. ಆದರೆ, ರಾವಬಹಾದ್ದೂರರು ಇಂತಹ ಮಹತ್ವಾಕಾಂಕ್ಷೆಯನ್ನು ಬಿಟ್ಟುಕೊಟ್ಟು – ಇದುವರೆಗೂ, ಏಕೆಂದರೆ ಈ ಕಾದಂಬರಿಯ ಮುಂದಿನ ಭಾಗಗಳನ್ನು ಬರೆಯುವ ಹವ್ಯಾಸ ಅವರಿಗೂ ಇದ್ದಂತಿದೆ – ಒಂದು ಸಮಾಜದ ಅಧೋಗತಿಯನ್ನು ಚಿತ್ರಿಸುವುದರಲ್ಲಿಯೇ ಕೃತಾರ್ಥತೆಯನ್ನು ಕಂಡುಕೊಂಡರು. ಇದು ಅವರ ಕಾದಂಬರಿಗೆ ಏಕರೂಪತೆಯನ್ನು ಕೊಟ್ಟುದಲ್ಲದೆ, ವಸ್ತುವಿನಲ್ಲಿ ನವ್ಯತೆಯ ಆವಿರ್ಭಾವಕ್ಕೂ ಕಾರಣವಾಯಿತು. 'ಕೊನೆಯಲ್ಲಿ ಬರುವ ಪ್ರಳಯದ ಚಿತ್ರವೇ ಕೊನೆಯಲ್ಲ; ಅದರಲ್ಲಿಯೂ ಬರಲಿರುವ ಮನ್ವಂತರದ ಬೀಜಗಳು ಅಡಗಿವೆ' ಎಂದು ಓದುಗರಿಗೆ ಕಾದಂಬರಿಕಾರರು ಆಶ್ವಾಸನ ನೀಡಿದ್ದಾರಾದರೂ ಅವರ ಕಾದಂಬರಿಯ ಪ್ರವಾಹ ಶೂನ್ಯತೆಯತ್ತವೇ ಹರಿದಿದೆ. ಬಾಳಾಚಾರ್ಯರ ಜಲಸಮಾಧಿಯ ನಂತರ ಪಾದಳ್ಳಿಯಲ್ಲಿ ಬದುಕುಳಿಯುವ ಒಳ್ಳೆಯ ಶಕ್ತಿಯೆಂದರೆ ದಾದಾ ಒಬ್ಬನೆ. ಕಾದಂಬರಿ ಸೂಚ್ಯವಾಗಿ ಅವನು ತನ್ನೂರಿಗೆ ಮರಳುವುದರೊಂದಿಗೆ ಕೊನೆಗೊಳ್ಳುತ್ತದೆ. ಆದರೆ, ದಾದಾನಲ್ಲೂ ಕೂಡ ಅವನ ದೈಹಿಕ ಶಕ್ತಿ ಮತ್ತು ಒಂದು ರೀತಿಯ ಭಾವುಕ ಭಕ್ತಿಗಳನ್ನು ಬಿಟ್ಟರೆ ಹೇಳಿಕೊಳ್ಳುವಂತಹ ಉಳಿದ ಅಂಶಗಳೇ ಕಾಣುವುದಿಲ್ಲ. ದಾದಾನಲ್ಲಿ ಹೊಸ ಮನ್ವಂತರದ ಭವಿಷ್ಯದ ರೇಖೆಯನ್ನು ಹುಡುಕುವುದೇ ದುಸ್ತರವಾಗುತ್ತದೆ. ಈ ಕಾದಂಬರಿ ಮನುಷ್ಯನ ನಿರ್ವಿಣ್ಣತೆ ಮತ್ತು ಪ್ರಕೃತಿಯ ಸೃಜನಶಕ್ತಿಗಳ ವಿರೋಧದ ದರ್ಶನದಲ್ಲಿ ಮುಕ್ತಾಯವಾಗುತ್ತದೆಯೆನ್ನುವುದನ್ನು ನಾವು ಲಕ್ಷಿಸಬೇಕು:

"ದಾದಾ ಎದ್ದ. ಅವನ ಮನಸ್ಸು ನಿರ್ವಿಣ್ಣವಾಗಿತ್ತು. ಹೊಳೆ ಶಾಂತವಾಗಿ ಹರಿಯುತ್ತಲೇ ಇತ್ತು. ದೂರದ ಮರಡಿಸಾಲುಗಳ ಮೇಲೆ ಬಿಸಿಲು–ನೆರಳು ಮುಗಿಯುದ ಆಟದಲ್ಲಿ ತೊಡಗಿದ್ದವು. ಇನ್ನೊಂದು ಸೃಷ್ಟಿಯನ್ನು ನಿರ್ಮಿಸಲು ಹೊಂಚುಹಾಕಿರುವಂತೆ ಪ್ರಕೃತಿ ಮೌನವಾಗಿತ್ತು. ಮೋಡ ಸರಿದಾಗ ಬೀಳುವ ಬಿಸಿಲು ಕಾವು ಕೊಡುವಂತಿತ್ತು. ವಿಶಾಲವಾದ ಬಯಲು ಮಳೆಗಾಲದ ಹಸಿರಿನಿಂದ ತುಂಬಿಕೊಂಡು ದೇವತೆಗಳನ್ನೇ ಆಟಕ್ಕೆ ಕರೆಯುವಂತಿತ್ತು. ಹೊಸ ಸೃಷ್ಟಿಯೊಂದನ್ನು ತನ್ನ ಬಸಿರಿನಲ್ಲಿಟ್ಟುಕೊಂಡಂತಿದ್ದ ಈ ನಿರೀಕ್ಷೆ ರಮ್ಯವಾಗಿತ್ತು. ಕರಿಯಪ್ಪನ ಹಿಂದೆ ನೆರಳಿನಂತೆ ದಾದಾ ಸಾಗಿದ್ದ" [ಪು. 604] ಸೃಷ್ಟಿಯ ಈ ರಹಸ್ಯದ ಅರ್ಥವನ್ನು ಮಾಡಿಕೊಳ್ಳುವ ಶಕ್ತಿ ಕಾದಂಬರಿಕಾರರಲ್ಲಿದೆಯೇ ಹೊರತು ದಾದಾನಲ್ಲಿಲ್ಲ.

ಹೀಗಿದ್ದರೂ, ರಾವಬಹಾದ್ದೂರರಿಗೆ ದಾದಾನಲ್ಲಿ ವಿಶೇಷವಾದ ಪಕ್ಷಪಾತ. ಇದೂ ಒಂದು ರೀತಿಯಿಂದ ಸಾಂಪ್ರದಾಯಿಕ ಅಂಶವೇ ಆಗಿದ್ದರೂ, ಗೋಕಾಕರ ನರಹರಿ–

ಪಕ್ಷಪಾತದಷ್ಟು ಅತಿರೇಕಕ್ಕೆ ಮುಟ್ಟುವುದಿಲ್ಲವೆನ್ನುವುದು ಸಮಾಧಾನದ ಸಂಗತಿ. ಕಾದಂಬರಿಯ ರಚನೆಯ ಇತಿಹಾಸವನ್ನು ಕುರಿತು ಮಾತನಾಡುತ್ತ ರಾವಬಹಾದ್ದೂರರು 'ದಾದಾ ಎಂಬ ಒಬ್ಬ ವ್ಯಕ್ತಿಯ ಸಾಹಸಮಯ ಜೀವನದ ಸುತ್ತಲೂ ಒಂದು ಕತೆಕಟ್ಟಬೇಕೆಂದು ನನ್ನ ಹಂಬಲವಿತ್ತು' ಎಂದಿದ್ದಾರೆ. "ಗ್ರಾಮಾಯಣ" ಕೆಲಮಟ್ಟಿಗೆ ಇಂತಹ ಹಂಬಲದ ಒತ್ತಡಕ್ಕೆ ಸೋತಿದೆ. ದಾದಾನನ್ನು ಬಿಟ್ಟರೆ "ಗ್ರಾಮಾಯಣ"ದಲ್ಲಿನ ಸಾಮಾನ್ಯವಾಗಿ ಎಲ್ಲ ಮುಖ್ಯ ಪಾತ್ರಗಳೂ ಮಾನವ ಸಹಜವಾದ ದೌರ್ಬಲ್ಯಗಳನ್ನು ಹೊಂದಿವೆ. ಬಾಳಾಚಾರ್ಯರಂತಹ ವಿವೇಕಿಗಳೂ ಕೂಡ ಊರಿನ ಒಕ್ಕಟ್ಟನ್ನು ಕಾಯ್ದುಕೊಳ್ಳುವ ನೆವದಲ್ಲಿ ನಾನಾನ ಕೊಲೆಯನ್ನು ಮುಚ್ಚಿಡುವಂತಹ ಅನ್ಯಾಯವನ್ನೂ ಒಪ್ಪಿಕೊಳ್ಳುತ್ತಾರೆ. ಆದರೆ ದಾದಾನನ್ನು ಮಾತ್ರ ರಾವಬಹಾದ್ದೂರರು ಅಭಿಮಾನ ಪೂರ್ವಕವಾಗಿ ಸಂರಕ್ಷಿಸುತ್ತಾರೆ. ಇದಕ್ಕಾಗಿ ನಾಟಕೀಯವಾದ, ಒಮ್ಮೊಮ್ಮೆ ಅಸಹಜವಾದ ಸಂನಿವೇಶಗಳನ್ನೂ ಕಲ್ಪಿಸುತ್ತಾರೆ. ಪಾದಳ್ಳಿಯ ಮಠದಲ್ಲಿ ಚಿಮಣಾಳ ಮೇಲೆ ನಡೆದ ಬಲಾತ್ಕಾರದ ಸುದ್ದಿ ಊರಲ್ಲೆಲ್ಲಾ ಹಬ್ಬಿದರೂ ಊರಲ್ಲಿಯೇ ಇದ್ದ ದಾದಾನಿಗೆ ಮುಟ್ಟುವುದಿಲ್ಲ. ನಾನಾನ ದುರ್ಮರಣ ನಡೆದಾಗ ಊರು ಬಿಟ್ಟು ಹೋಗಿರುತ್ತಾನೆ. ಮುಂದೆ, ಸೇಡಿಗಾಗಿ ಅವನ ರಕ್ತ ಕುದಿಯುತ್ತಿದ್ದರೂ ರತ್ನಾಳ ಸತೀತ್ವಕ್ಕೆ ಬಾಗಿ ಬಾಪೂಸಾಹೇಬನ ಜೀವವನ್ನು ಉಳಿಸುತ್ತಾನೆ. ಫೌಜದಾರ ಫಕರುದ್ದೀನ ಮತ್ತು ಉಳಿದ ಪೊಲೀಸರನ್ನು ನಿರಾಯುಧನಾಗಿ ಎದುರಿಸಿ ಸೋಲಿಸುತ್ತಾನೆ. ಎಲ್ಲ ಗಂಡಾಂತರಗಳಿಂದಲೂ ಮಂತ್ರರಕ್ಷಿತನಂತೆ ಪಾರಾಗುತ್ತಾನೆ. ಈ ಎಲ್ಲ ಘಟನೆಗಳ ಹಿಂದೆ ಕಾದಂಬರಿಕಾರರ ನಿಶ್ಚಿತವಾದ ಕೈವಾಡವಿದೆಯೆನ್ನುವುದನ್ನು ತಿಳಿಯಲು ಓದುಗನಿಗೆ ಬಹಳ ವೇಳೆ ಹಿಡಿಯುವುದಿಲ್ಲ. ಇಂತಹ ಪಕ್ಷಪಾತ ಸಾಮಾನ್ಯವಾಗಿ ಕಾದಂಬರಿಕಾರನಿಗಿರುವ ಮಾನವೀಯ ಸಹಾನುಭೂತಿಯ ಎಲ್ಲೆಯನ್ನು ಮೀರುತ್ತದೆ ಎಂದು ಅವನಿಗೆನಿಸಿದರೆ ಆಶ್ಚರ್ಯವಿಲ್ಲ.

ದಾದಾನ ಬಗ್ಗೆ ರಾವಬಹಾದ್ದೂರರಿಗಿರುವ ಈ ಪರಿಯ ಅಭಿಮಾನಕ್ಕೆ ಕಾರಣವಾದರೂ ಏನು ಎಂದು ವಿಚಾರಿಸುವುದು ಅಗತ್ಯವಾಗಿದೆ. ಸ್ವಾರ್ಥ, ದುಷ್ಟತನ, ದೌರ್ಬಲ್ಯಗಳ ತಾಕಲಾಟದಲ್ಲಿಯೇ ಗ್ರಾಮಾಯಣ ವಸ್ತು ಹುಟ್ಟಿಕೊಳ್ಳುವುದಾದರೂ ಇಲ್ಲಿ ಶ್ರದ್ಧಾತ್ಮಕ (affirmative) ಅಂಶಗಳಿಗೇನೂ ಕೊರತೆಯಿಲ್ಲ. ಬಾಳಾಚಾರ್ಯರ ವಿವೇಕ, ಶಂಕರಪ್ಪ ಗೌಡರ ಕ್ಷಾತ್ರ, ಪಾರೋತವ್ವನ ಅಭಿಮಾನ, ಶೇಷಪ್ಪನ ಬುದ್ಧಿಶಕ್ತಿ, ಯಶವಂತರಾಯರ ದಯಾಳುತನ, ಶಿವಲಿಂಗಸ್ವಾಮಿಗಳ ಶೀಲ ಇತ್ಯಾದಿ ಅನೇಕ ಧನಮೌಲ್ಯಗಳನ್ನು ನಾವಿಲ್ಲಿ ಕಾಣುತ್ತೇವೆ. ಆದರೆ ಜೀವನದ ಪ್ರವಾಹದಲ್ಲಿ ಈ ಮೌಲ್ಯಗಳೆಲ್ಲವೂ ನಿರ್ವೀರ್ಯವಾಗುತ್ತವೆ. ಕೆಲವಂತೂ ವಿನಾಶಕ್ಕೇ ಕಾರಣವಾಗುತ್ತವೆ. ಈ ಹಿನ್ನೆಲೆಯಲ್ಲಿ, ದಾದಾನ ವ್ಯಕ್ತಿತ್ವದಲ್ಲಿ ರಾವಬಹಾದ್ದೂರರು ರೂಪಿಸುವ ಸಂಕೇತವಾದರೂ ಏನು? ದಾದಾನ ಮುಖಾಂತರ ಕಾದಂಬರಿಕಾರರು ದೈಹಿಕ ಶಕ್ತಿ, ಭಾವುಕತೆಯ ಮೌಲ್ಯಗಳನ್ನು ಪ್ರಸ್ಥಾಪಿಸಲು ಯತ್ನಿಸಿರುವರೋ ಹೇಗೆ? ಇದಕ್ಕೆ ನಿಶ್ಚಿತವಾದ ಉತ್ತರ ಗ್ರಾಮಾಯಣದಲ್ಲಿ ಸಿಕ್ಕುವುದಿಲ್ಲ. ಏಕೆಂದರೆ, ಸಣ್ಣಪುಟ್ಟ ಅನ್ಯಾಯಗಳ ವಿರುದ್ಧ ಹೋರಾಡುವುದರಲ್ಲಿ ಶಕ್ತಿಯನ್ನು ವಿನಿಯೋಗಿಸುವ ದಾದಾ ಚಿಮಣಾಳಿಗಾದ

ಅನ್ಯಾಯದ ಪರಿಪೂರ್ಜನೆಯನ್ನು ಮಾಡಲು ಗಂಭೀರವಾದ ಪ್ರಯತ್ನವನ್ನು ಮಾಡುವುದಿಲ್ಲ. ಅವಳನ್ನು ಪಡದಯ್ಯನ ಮಠಕ್ಕೆ ದೂಡುವುದಾಗಲಿ, ಪಡದಯ್ಯನನ್ನು ಎತ್ತಿ ಬಯ್ದು ಮಸೀದೆಯ ಬಾಗಿಲಲ್ಲಿ ಕೂಡ್ರಿಸುವುದಾಗಲಿ ಯಾವ ಪುರುಷಾರ್ಥವನ್ನೂ ಪಾಲಿಸಿದಂತಾಗುವುದಿಲ್ಲ. ದಾದಾನ ಜೀವನ ಹೆಚ್ಚಾಗಿ ಪಶು-ಪಾತಳಿಯ ಮೇಲೆಯೇ ನಡೆದು ಹೋಗುತ್ತದೆ. ಅವನ ಶಕ್ತಿ, ನಂಬಿಗಸ್ಥನ ಪಶುಸಹಜವಾದ ಗುಣಗಳೇ ಹೊರತು ಹೆಚ್ಚಿನ ಮೌಲ್ಯಗಳನ್ನು ಪಡೆಯಲಾರವು. ಯಶವಂತರಾಯರಲ್ಲಿ ಕಂಡುಬರುವ ಅನುಕಂಪ, ತಿಳುವಳಿಕೆಗಳನ್ನು ನಾವು ದಾದಾನಲ್ಲಿ ಅಪೇಕ್ಷಿಸಲಾರೆವು. ಚಿಮಣಾಳಿಗಾದ ದುಃಖದ ಕಲ್ಪನೆಯೇ ದಾದಾನಲ್ಲಿ ಇದ್ದಂತೆ ಕಾಣುವುದಿಲ್ಲ. ಹೀಗಾಗಿ, ದಾದಾನ ಬಗ್ಗೆ ನಮ್ಮಲ್ಲಿ ಅಭಿಮಾನವನ್ನು ಹುಟ್ಟಿಸುವ ಲೇಖಕರ ಪ್ರಯತ್ನ ಸಾರ್ಥಕವಾಗುವುದಿಲ್ಲ.

ಹಾಗೆ ನೋಡಿದರೆ, 'ಗ್ರಾಮಾಯಣಕ್ಕೆ' ಕೇಂದ್ರ ವ್ಯಕ್ತಿಯಾಗಿ ನಿಲ್ಲಬಲ್ಲ ಯೋಗ್ಯತೆ ಬಾಳಾಚಾರ್ಯರ ಪಾತ್ರದಲ್ಲಿ ಮಾತ್ರ ಕಂಡುಬರುತ್ತದೆ. ಅವರ ಜೀವನದ ಏರಿಳಿತಗಳಲ್ಲಿ ಕಾದಂಬರಿಯ ಅರ್ಥ ಹುದುಗಿದೆ. ಪಾದಳ್ಳಿಗೆ ಒಂದು ಆತ್ಮವಿದ್ದರೆ ಅದನ್ನು ಬಾಳಾಚಾರ್ಯರಲ್ಲಿಯೇ ಹುಡುಕಬೇಕಾಗುತ್ತದೆ. ಗ್ರಾಮಾಯಣದ ವ್ಯಕ್ತಿಗಳ ಜೀವನ ಗತಿ ಸಾಮಾಜಿಕತೆಯಿಂದ ಪ್ರತ್ಯೇಕತೆಯ ಕಡೆಗೆ ಹರಿಯುತ್ತದೆ. ಸಮಾಜ ತನ್ನ ಧಾರಣ ಶಕ್ತಿಯನ್ನು ಕಳೆದುಕೊಂಡು ಆಸುರೀ ಶಕ್ತಿಗಳ ತಾಂಡವಕ್ಕೆ ಅನುವುಮಾಡಿ ಕೊಟ್ಟಾಗ ವ್ಯಕ್ತಿಗಳು ನೆಲೆತಪ್ಪಿ ವೈಯಕ್ತಿಕವಾದ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಪುತಳಾಬಾಯಿ – ಚಿಮಣಾರ ಆತ್ಮಹತ್ಯೆ, ಬಾಳಾಚಾರ್ಯರ ಜಲಸಮಾಧಿ, ಪಡದಯ್ಯನ ಪಲಾಯನ – ಇಂತಹ ಪರಿಹಾರಗಳೇ ಆಗಿವೆ. ಕೆಲವೊಂದು ಪ್ರಶ್ನೆಗಳನ್ನು ಪ್ರಕೃತಿಯೇ ಬಿಡಿಸುತ್ತದೆ. ಶಂಕರಪ್ಪ ಗೌಡ – ಪಾರೋತವ್ವನ ಸಾವುಗಳು ಈ ಬಗೆಯವು. ಒಂದಿಲ್ಲೊಂದು ರೀತಿಯಿಂದ ಸಮಾಜದೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡ ವ್ಯಕ್ತಿಗಳೆಲ್ಲ ಮಳೆಯಲ್ಲಿ ಹಗ್ಗ ಹರಿದುಕೊಂಡು ಓಡುವ ದನಗಳಂತೆ ವೈಯಕ್ತಿಕ ಬಿಡುಗಡೆಯನ್ನೇ ಬಯುಸಿ ಕೊನೆಯತ್ತ ಧಾವಿಸುತ್ತವೆ. ಈ ಮಾತು ಗ್ರಾಮಾಯಣದಲ್ಲಿ ಎಲ್ಲರಿಗೂ ಅನ್ವಯಿಸುತ್ತಿದ್ದರೂ ಬಾಳಾಚಾರ್ಯರ ಪಾತ್ರಕ್ಕೆಯೆ ಸೀಮಿತವಾದ ಅಂತರ್ಮುಖತೆ, ಸಂವೇದನೆ ಅವರ ಬಾಳಿಗೆ ವಿಲಕ್ಷಣವಾದ ಅರ್ಥವನ್ನು ತಂದು ಕೊಡುತ್ತವೆ. ಯಾವ ಬೆಲೆ ತೆತ್ತರೂ ಅಡ್ಡಿಯಿಲ್ಲ, ಒಡೆದು ಹೋಗುತ್ತಿರುವ ಸಮಾಜವನ್ನು ಉಳಿಸಬೇಕು ಎಂದು ಹಟತೊಟ್ಟು ಪ್ರವಾಹದ ವಿರುದ್ಧ ಈಸಿ ಈಸಿ ಕೈಸೋತ ಬಾಳಾಚಾರ್ಯರು ಪ್ರವಾಹದೊಡನೆ ಹರಿದು ಹೋಗುವುದರಲ್ಲಿಯೇ ವ್ಯಕ್ತಿ ಜೀವನದ ಅರ್ಥವನ್ನು ಕಾಣುತ್ತಾರೆ. ಸ್ಥಿತ ಪ್ರಜ್ಞತೆಯೊಂದೇ ಶಾಶ್ವತ ಮೌಲ್ಯವಾಗಿ ಅವರಿಗೆ ಕಾಣುತ್ತದೆ. ಇದರಿಂದಾಗಿ ಬಾಳಿನ ಘೋರ ದುರಂತವನ್ನೂ ಲೆಕ್ಕಿಸದ ಒಂದು ಆತ್ಮ ಶಾಂತಿ ಅವರಿಗೆ ದೊರಕುತ್ತದೆ. ಅವರ ಪಾತ್ರದಲ್ಲಿ ಮೂಡಿಬರುವ ಅರ್ಥದ ಬೆಳವಣಿಗೆಯತ್ತ ಕಾದಂಬರಿಕಾರರು ಇನ್ನೂ ಹೆಚ್ಚು ಲಕ್ಷ್ಯ ಕೊಡಬೇಕಾಗಿತ್ತು ಎಂದೆನಿಸುತ್ತದೆ. ಬಹುಶಃ ರಾವಬಹಾದ್ದೂರರಿಗೆ ದಾದಾನಲ್ಲಿರುವ ಮೋಹ ಇದಕ್ಕೆ ಅಡ್ಡ ಬಂದಿರಬೇಕು ಅಥವಾ ಅವರ ಪ್ರತಿಭೆಗೆ ಈ ತೆರನಾದ ಸಂಕೀರ್ಣತೆ ಒಗ್ಗದ ವಿಷಯವಾಗಿರ

ಬೇಕು. ವ್ಯಕ್ತಿಯ ಸಾಮಾಜಿಕ ಮುಖದತ್ತ ಒಲಿದಷ್ಟು ಸುಲಭವಾಗಿ ಅದು ಅವನ ಅಂತರ್ಮುಖತೆಯತ್ತ ಒಲಿಯುವ ರೀತಿಯದಲ್ಲವೇನೋ. ಇಂತಹ ಸಂಶಯ ಬರಲು ಕಾರಣವೆಂದರೆ ಚಿಮಣಾ ಮತ್ತು ಶಂಕರಪ್ಪ ಗೌಡರಂತಹ ಪಾತ್ರಗಳನ್ನು ಅವರು ನಿರ್ವಹಿಸುತ್ತಿರುವ ರೀತಿ. ಚಿಮಣಾಳ ಬಲಾತ್ಕಾರದ ವಿವರಗಳ ಬಗ್ಗೆ ರಾವಬಹಾದ್ದೂರರು ತೋರಿಸುವ ಸಂಯಮ ಮೆಚ್ಚುವಂತಹದಾದರೂ ಒಟ್ಟಿನಲ್ಲಿ ಚಿಮಣಾಳ ಪಾತ್ರ ಕತ್ತಲಲ್ಲೇ ಉಳಿದು ಅವಳ ಬಾಳಿನ ಕಹಿಯ ಕಲ್ಪನೆಯೇ ಓದುಗನಿಗೆ ಅನುಭವವಾಗಿ ಬರುವುದಿಲ್ಲ. ಪಡದಯ್ಯನೊಡನೆ ಯಾವ ರೀತಿಯ ಬಾಳನ್ನು ಅವಳು ಬಾಳಿರಬಹುದು? ಯಶವಂತರಾಯರ ಆಶ್ರಯವನ್ನು ಬಿಟ್ಟುಕೊಟ್ಟು ತನ್ನ ಮೇಲೆ ಬಲಾತ್ಕಾರ ನಡೆಯಿಸಿದ, ತನ್ನ ಲಗ್ನದ ಗಂಡನಲ್ಲದ ಪಟದಯ್ಯನೊಡನೆ ಅವಳು ತಿರುಗಿ ಮಠಕ್ಕೆ ಮರಳುವ ಘಟನೆಯ ಭಾವನಾತ್ಮಕ ಹಿನ್ನೆಲೆ ಯಾವುದು? ಹಾರ್ಡಿಯ ಕಾದಂಬರಿಯಲ್ಲಿನ ಟೆಸ್—ಅಲೆಕ್ ಸಂಬಂಧದಂತಹ ಸಂದಿಗ್ಧ ಸಂಬಂಧ ಇಲ್ಲಿಯೂ ಇದೆಯೇ? ಎನ್ನುವ ವಿಷಯಗಳ ಬಗ್ಗೆ, ಓದುಗನ ಕುತೂಹಲ ಅತೃಪ್ತವಾಗಿಯೇ ಉಳಿಯುತ್ತದೆ. ವ್ಯಕ್ತಿಗಳ ಒಳಜೀವನವನ್ನು ತೆರೆದು ತೋರಿಸುವ ಶಕ್ತಿ ರಾವಬಹಾದ್ದೂರರಲ್ಲಿ ಬಹಳ ಸೀಮಿತವಾಗಿರುವುದರಿಂದ ಘಟನೆಗಳ ಮೇಲೆಯೇ ಅವರು ಹೆಚ್ಚಾಗಿ ಅವಲಂಬಿಸಿರುತ್ತಾರೆ. ರಾವಬಹಾದ್ದೂರರ ವಿಶಾಲವಾದ ಉದ್ದೇಶದ ಕಕ್ಷೆಯಲ್ಲಿ ಚಿಮಣಾಳ ಮಹತ್ವ ಮರ್ಯಾದಿತವಾಗಿದೆಯೆನ್ನುವುದನ್ನು ಒಪ್ಪಿಕೊಂಡರೂ, ಕಾದಂಬರಿಯ ಕೊನೆಯಲ್ಲಿ ಅವಳ ಜೀವನ ಸ್ಫೋಟಗೊಳ್ಳುವ ಸನ್ನಿವೇಶದ ಪೂರ್ಣ ಅನುಭವ ಓದುಗನಿಗೆ ಆಗಬೇಕಾದರೆ ಅವಳ ಹೊಯ್ದಾಟಗಳ ಇನ್ನೂ ನಿಕಟವಾದ ಪರಿಚಯ ಅವನಿಗೆ ದೊರೆಯಬೇಕಿತ್ತು. ಶಂಕರಪ್ಪ ಗೌಡರ ವಿಷಯದಲ್ಲೂ ಇಂತಹವೇ ಸಮಸ್ಯೆಗಳು ಏಳುತ್ತವೆ. ಪಾದಳ್ಳಿಯ ಕ್ರಿಯಾಶಕ್ತಿಯಂತಿದ್ದ ಶಂಕರಪ್ಪ ಕಾಲರಾದಿಂದ ಸಾಯುವುದರಿಂದ ಪಡದಯ್ಯ, ಬಾಪೂ ಸಾಹೇಬ ಮೊದಲಾದ ಪ್ರತಿಕಕ್ಷಿಗಳನ್ನು ಕಾಲರಾ ತಡವುವುದಿಲ್ಲವೆನ್ನುವುದನ್ನು ನಾವು ಲಕ್ಷಿಸಬೇಕು – ಅವನಲ್ಲುಂಟಾದ "ಆಕಸ್ಮಿಕ ಹೃದಯ ಪರಿವರ್ತನ"ದ ಪೂರ್ಣ ಸ್ವರೂಪವನ್ನು ಪರೀಕ್ಷಿಸುವ ಸಂಧಿಯೇ ಕಾದಂಬರಿಕಾರರಿಗೆ ತಪ್ಪಿ ಹೋಗುತ್ತದೆ. ಇಂತಹ ಪಾತ್ರಗಳು ರಾವಬಹಾದ್ದೂರರಿಗೆ ಆಹ್ವಾನ ನೀಡುತ್ತವೆ. ಸಾಮಾನ್ಯವಾಗಿ, ರಾವಬಹಾದ್ದೂರರ ಪಾತ್ರಗಳಲ್ಲಿ ಪರಿವರ್ತನ ಶೀಲತೆಯೇ ಕಡಿಮೆ. ಪಡದಯ್ಯ, ಬಾಪೂಸಾಹೇಬ, ದಾದಾ, ಯಶವಂತರಾಯ, ಶೇಷಪ್ಪ, ಲಕ್ಷ್ಮೀಬಾಯಿ ಮೊದಲಾದವರು ಮೊದಲಿನಿಂದ ಕೊನೆಯವರೆಗೂ ಒಂದೇ ತೆರನಾದ ಪ್ರವೃತ್ತಿಗಳನ್ನು ತೋರುತ್ತಾರೆ. ಇದರಿಂದಾಗಿ ಮನುಷ್ಯ ಸ್ವಭಾವದ ವಿಸಂಗತತೆ, ಅಗಮ್ಯತೆಗಳ ದರ್ಶನ ನಮಗಾಗುವುದಿಲ್ಲ. ಗ್ರಾಮಾಯಣದ ವ್ಯಕ್ತಿಗಳಲ್ಲಿ ಯಾರೂ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ನಿಲ್ಲುವುದಿಲ್ಲ.

'ಗ್ರಾಮಾಯಣ'ದ ತಂತ್ರವೂ ಕೂಡ ಸಾಂಪ್ರದಾಯಿಕವಾಗಿದೆಯೆನ್ನುವುದು ಮಹತ್ವದ ವಿಷಯವಾಗಿದೆ. ಸಾಮಾನ್ಯವಾಗಿ ನವ್ಯ ಕಾದಂಬರಿ – 'ಹಳದಿಮೀನಿ'ನಂತೆ ನವ್ಯ ಪಾತ್ರವನ್ನು ಧರಿಸಿಕೊಂಡೇ ಹುಟ್ಟಿ ಬರುತ್ತದೆ. ಆದರೆ ಗ್ರಾಮಾಯಣಕ್ಕೆ ಸಾಂಪ್ರದಾಯಕವಾದ ಕಥನ ಕ್ರಮ, ಬಂಧಗಳ ಅನುಕೂಲತೆಯೇ ಸಾಕಾಗುತ್ತದೆ. ಕೃಷ್ಣಾ

ನದಿಯ ಪ್ರವಾಹದಂತೆ ಕಥೆ ನೇರವಾಗಿ ಒಂದೇ ದಿಕ್ಕಿನಲ್ಲಿ ಹರಿಯುತ್ತದೆ. ಚಿಮಣಾಳ ಬಲಾತ್ಕಾರ, ನಾನಾ ಸಾಹೇಬನ ದುರ್ಮರಣ, ಪುತಳಾಬಾಯಿಯ ಆತ್ಮಹತ್ಯೆ – ಇಂತಹ ಘಟನೆಗಳಿಂದ ತಳಮಳಿಸಿದ ಪಾದಳ್ಳಿ ಕಾಲರಾದಲ್ಲಿ ಶಂಕರಪ್ಪ ಗೌಡ ಸತ್ತ ನಂತರ ದುಷ್ಟಶಕ್ತಿಗಳ ಆಘಾತವನ್ನು ತಡೆದುಕೊಳ್ಳಲಾರದೆ ತತ್ತರಿಸುತ್ತದೆ. ಕಥೆಯ ಎರಡನೆಯ ಭಾಗದಲ್ಲಿ ನಡೆಯುವ ಅಧಿಕಾರದ ಹೋರಾಟದಲ್ಲಿ ಒಂದು ರೀತಿಯ ಸಂದಿಗ್ಧ ಪರಿಸ್ಥಿತಿ ಹುಟ್ಟಿಕೊಂಡರೂ ಗಿಬ್ಸನ್‌ನ ವಿಕ್ಷಿಪ್ತ ನಿರ್ಣಯದಿಂದಾಗಿ ಪಾದಳ್ಳಿಯ ಭವಿತವ್ಯ ನಿಶ್ಚಿತವಾಗುತ್ತದೆ. ಮೂರನೆಯ ಭಾಗ ಪೈಶಾಚಿಕ ನೃತ್ಯವನ್ನೇ ಹೋಲುತ್ತದೆ. ಮೂಟ, ಹಗಲು ದರೋಡೆ, ಅತ್ಯಾಚಾರಗಳ ಸರಪಳಿಯಲ್ಲಿ ಸಿಕ್ಕ ಪಾದಳ್ಳಿಗೆ ಕೊನೆಗೆ ಪ್ಲೇಗಿನಲ್ಲಿ ಮುಕ್ತಿ ಸಿಗುತ್ತದೆ. ಮುಖ್ಯ ಘಟನೆಗಳ ಆಯ್ಕೆಯಲ್ಲಿ ರಾವಬಹಾದ್ದೂರರು ವಿಲಕ್ಷಣವಾದ ಕೌಶಲ್ಯವನ್ನು ತೋರಿದ್ದಾರಾದರೂ, ಅನವಶ್ಯವಾಗಿ ದಾದಾನ ಸಾಹಸ ಗಳನ್ನು ಪ್ರದರ್ಶಿಸಲೆಂದೇ ಅನೇಕ ಸನ್ನಿವೇಶಗಳನ್ನು ಕಲ್ಪಿಸಿದ್ದಾರೆ. ಇದರಿಂದ ಕಾದಂಬರಿ ಯ ವಾಸ್ತವಿಕತೆಯಲ್ಲಿ ಅದ್ಭುತರಮ್ಯ ಅಂಶಗಳು ಸೇರಿಕೊಂಡು ಆಭಾಸವನ್ನುಂಟು ಮಾಡುತ್ತವೆ. ಒಮ್ಮೊಮ್ಮೆ, ಅನುಕರಣೆಯೂ ಕಾಣಿಸಿಕೊಂಡಿದೆ. ಉದಾಹರಣೆಗಾಗಿ, ಪ್ಲೇಗಿನ ಹಾವಳಿಯಿಂದ ಉದ್ಧ್ವಸ್ತವಾದ ಪಾದಳ್ಳಿಗೆ ದಾದಾ ಬರುವುದು 'ಸಮರಸವೇ ಜೀವನ'ದಲ್ಲಿ ನರಹರಿ ಮೊಗ್ಗಾವಿಗೆ ತಿರುಗಿ ಬಂದುದರ ಪುನರಾವೃತ್ತಿಯಾಗಿದೆ. ಪ್ರತೀಕ ಗಳನ್ನು ವಿರಳವಾಗಿ ಉಪಯೋಗಿಸಿದ ಈ ಕಾದಂಬರಿಯ ಮುಖ್ಯ ಪ್ರತೀಕವಾದ ನದಿ ಪ್ರವಾಹವೂ ಕೂಡ ಸ್ಟೋಪಜ್ಞೆಯಿಂದ ಹುಟ್ಟಿದುದಲ್ಲ, ಶೊಲೊಕಾಪ್ ಅವರಿಂದ ಉಗಮವಾಗಿರಬಹುದು. ಕೆಲ ಕಡೆಗಳಲ್ಲಂತೂ ಅನುಕರಣ ಹಾಸ್ಯಾಸ್ಪದವಾಗಿ ಪರಿಣಮಿ ಸಿದೆ. ಪಾದಳ್ಳಿಯ ಗರಡಿಯೊಳಗಳು ಗೋರಿಗಳನ್ನು ಅಗಿಯುವಾಗ ಮಾತನಾಡಿ ಕೊಳ್ಳುವ ರೀತಿ Hamlet ನ Gravedigger ದೃಶ್ಯವನ್ನು ಅಣಕಿಸಿದಂತಿದೆ.

ಘಟನೆಗಳನ್ನು ನಾಟ್ಯೀಕರಿಸುವಲ್ಲಿ, ಆವರಣದ ಸೃಷ್ಟಿಯಲ್ಲಿ ರಾವಬಹಾದ್ದೂ ರರು ಸಾಧಿಸಿದ ಕಲೆ ನಮ್ಮನ್ನು ತಲೆದೂಗಿಸುವುದೆನ್ನುವುದು ನಿಜವಾದರೂ, ಕಾದಂಬರಿ ಕಾರನ ಎಲ್ಲ ಅನುಕೂಲತೆಗಳನ್ನು ಅವರು ಅಷ್ಟೇ ಸಮ ರೀತಿಯಿಂದ ಉಪಯೋಗಿಸಿ ಕೊಂಡಿದ್ದಾರೆಂದು ಹೇಳಲಿಕ್ಕಾಗುವುದಿಲ್ಲ. ಈ ದೃಷ್ಟಿಯಿಂದ, ಎದ್ದು ಕಾಣುವ ಕೊರತೆ ಯೆಂದರೆ ಧ್ವನಿಯನ್ನು ( tone ) ನಿಯಂತ್ರಿಸುವಲ್ಲಿನ ಕಾದಂಬರಿಕಾರರ ಅಸಮರ್ಥತೆ. ರಾವಬಹಾದ್ದೂರರ ಧ್ವನಿ ಸಾಮಾನ್ಯವಾಗಿ ಒಬ್ಬ ಒಳ್ಳೆಯ ವರದಿಗಾರನ ಧ್ವನಿ ಯಂತೆ ತೋರುತ್ತದೆ. ಅದರಲ್ಲಿ ಕಟ್ಟುನಿಟ್ಟಾದ ನಿರ್ಲಿಪ್ತತೆಯಾಗಲಿ ಅಥವಾ ಕಾದಂಬರಿ ಕಾರನ ವೈಯಕ್ತಿಕ ವೈಶಿಷ್ಟ್ಯವಾಗಿ ಹುಟ್ಟುವ ಸಂಕೀರ್ಣತೆಯಾಗಲಿ ಕಂಡುಬರುವದಿಲ್ಲ. ಉದಾಹರಣೆಗೆ, ಕಾದಂಬರಿಯ ಏಳನೆಯ ಪ್ರಕರಣದಲ್ಲಿ ಬರುವ ಈ ಭಾಗವನ್ನು ನೋಡಬಹುದು.

"ಚಿಮಣಾಳ ಕಣ್ಣೀರು ಅಖಂಡ ವರ್ಷ ಧಾರೆಯಂತೆ ಸುರಿಯುತ್ತಲೇ ಇದ್ದವು. ಭವಿ ಷ್ಯದ ಭೀಕರ ಚಿತ್ರ ಅವಳನ್ನು ಕೈಕಾಲುಗೆಡಿಸಿತ್ತು. ನಾನಾನ ಮರಣದಿಂದ ಹತಾಶಳಾದ ಅವಳ ಹೃದಯ ಆಗಲೇ ಬರಡು-ಭೂಮಿಯಾಗಿತ್ತು. ಅಂಥದರಲ್ಲಿಯೂ, ಹೆದರಿದರೂ ದಾದಾನ ಬಗ್ಗೆ ಆಸೆಯಿಟ್ಟುಕೊಂಡಿದ್ದಳು. ಮೊದಲ ಗುಟುಕಿಗೇ ಜೀವನ ಅವಳ ಪಾಲಿಗೆ

ಕಹಿ ವಿಷವಾಗಿತ್ತು. ನಾನಾನ ಪ್ರೀತಿಯ ರಕ್ಷೆಯಲ್ಲಿ ನಿಶ್ಚಿಂತಳಾಗಿದ್ದವಳು, ಹಳ್ಳಿಯಲ್ಲಿ ಯೇ ಎದ್ದು ಕಾಣುವ ತನ್ನ ಚಲುವಿನ ಬಗ್ಗೆ ಮುಗ್ಧ ಅಭಿಮಾನವನ್ನಿಟ್ಟುಕೊಂಡ ಮುಗ್ಧ ಕನ್ಯೆ, ಇಷ್ಟು ಜನರೆದುರು ವಿಚಾರಣೆಗೆ ಗುರಿಯಾಗಬೇಕಾಗಿತ್ತು. ಅದೂ ಮಾನ ರಕ್ಷಣೆಗಾಗಿ ಅಲ್ಲ, ಮುಂದೆ ಹುಟ್ಟಬಹುದಾದ ನಿಷ್ಪಾಪ ಕೂಸಿನ ತಂದೆ ಯಾರು ಎಂಬ ಸತ್ಯವನ್ನು ಪ್ರಸ್ಥಾಪಿಸುವುದಕ್ಕೆ! ಸತ್ಯವೇನೋ ಸ್ಥಾಪಿತವಾಯಿತು. ಆದರೇನು? ಹೆಣ್ಣಿನ ಮಲಿನವಾದ ಮಾನ ತಿಳಿಯಾಗಲು ಅದೇನು ಮಲೆತ ನೀರಲ್ಲ. ದೊರೆತ ಸತ್ವದಿಂದ, ನಿರ್ಣಾಯಕರಿಗೇನೋ ಸಮಾಧಾನವಾಗಿತ್ತು. ಆದರೆ ಹೆಣ್ಣಿನ ಅಂತಃಕರಣದ ಕನ್ನಡಿ ಚೂರು ಚೂರಾಗಿ, ಆ ಚೂರುಗಳಲ್ಲಿ ಆ ಸತ್ಯದ ವಿಕೃತ ಪ್ರತಿಬಿಂಬ ಮೂಡಿತ್ತು."

ಇಂತಹ ಸನ್ನಿವೇಶದಲ್ಲಿಯೂ ಕೂಡ ಕಾದಂಬರಿಕಾರರು ಪಾತ್ರದ ಹೊರಗೆ ನಿಂತೇ ಮಾತಾಡುತ್ತಿರುವುದು ಆಶ್ಚರ್ಯವನ್ನು ಹುಟ್ಟಿಸುತ್ತದೆ. ಅದು ಹೇಗಿದ್ದರೂ, ಅವರ ಟೀಕೆ (commentary) ಸಾಮಾನ್ಯವಾಗಿದೆಯಲ್ಲದೆ ವಸ್ತುವಿನ ಗಂಭೀರತೆ ಯನ್ನು ಪ್ರತಿಬಿಂಬಿಸುವಷ್ಟು ಸಮರ್ಥವಾಗಿಲ್ಲ. "ವರ್ಷಧಾರೆ" "ಭೀಕರ ಚಿತ್ರ" "ಬರಡುಭೂಮಿ" "ಕಹಿ ವಿಷ" "ಮಲೆತ ನೀರು" ಮೊದಲಾದ ಪ್ರತಿಮೆಗಳಲ್ಲಿ ಯಾವ ಆಂತರಿಕ ಸಂಬಂಧವೂ ಇಲ್ಲ. ಇವು ಕೇವಲ ಕ್ಲೀಶೆಗಳು. "ಮುಗ್ಧ ಕನ್ಯೆ" ಎಂಬ ಪದಪ್ರಯೋಗ ಚಿಮಣಾಳ ಬಗ್ಗೆ ಸತ್ಯವನ್ನು ಹೇಳುವುದಿಲ್ಲ. ಚಿಮಣಾ ಬಾಪೂ ಸಾಹೇಬನತ್ತ ಸಹಜವಾಗಿ ಒಲಿದುದಲ್ಲದೆ ದಾನವ್ವನ ಬಲೆಯಲ್ಲಿ ತನ್ನ ಆಸೆಯುವೆಂಬ ಬಲೆಯಲ್ಲಿ ಬಿದ್ದವಳು. ಅವಳ ಅಂತಃಕರಣ ಚೂರು ಚೂರಾಯಿತು ಎಂದು ಕಾದಂಬರಿಕಾರರು ಹೇಳುತ್ತಾರೆಯೆ ಹೊರತು ಅದರ ಪ್ರತ್ಯಕ್ಷ ಅನುಭವವನ್ನು ಕೊಡು ವುದಿಲ್ಲ. ರಾವಬಹಾದ್ದೂರರ ಸಂಭಾಷಣೆಗಳಲ್ಲಿ ಕಂಡುಬರುವ ಭಾಷಾ ಸತ್ವ ಅವರ ವರ್ಣನೆಗಳಲ್ಲಾಗಲಿ, ವಿಶ್ಲೇಷಣೆ – ಟೀಕೆಗಳಲ್ಲಾಗಲಿ ಕಂಡುಬರುವುದಿಲ್ಲ. ಇದರಿಂದಾಗಿ ಕಾದಂಬರಿಯ ಅರ್ಥವನ್ನು ಸಂಪೂರ್ಣವಾಗಿ ಸ್ಫುಟಿಸುವಲ್ಲಿ ಅವರಿಗೆ ತೊಂದರೆಯುಂ ಟಾಗುತ್ತದೆ.

ಇಷ್ಟೆಲ್ಲ ದೋಷಗಳನ್ನು ಮೀರಿಯೂ 'ಗ್ರಾಮಾಯಣ' ನಮ್ಮನ್ನು ಪ್ರಭಾವಿಸು ವುದು ಅದರ ಜೀವನ ಪ್ರಜ್ಞೆಯ (Sense of Life) ಮೂಲಕ. ರಾವಬಹಾದ್ದೂರರ ಮಾನವೀಯ ದೃಷ್ಟಿ, ಅವರ ಜೀವನ ಶ್ರದ್ಧೆ ಗ್ರಾಮಾಯಣದಲ್ಲಿ ಅಲೌಕಿಕವಾದ ನೇಯ್ಗೆಯನ್ನು ಹೊಸೆದಿದೆ, ಪ್ರತಿಸೃಷ್ಟಿಯನ್ನೇ ಕಲ್ಪಿಸಿದೆ. ಈ ಮುಖ್ಯ ಅಂಶದಲ್ಲಿ ಕಾದಂಬರಿ ಗೆಲ್ಲುವುದರಿಂದ 'ಗ್ರಾಮಾಯಣ' ಕನ್ನಡ ಕಾದಂಬರಿಯ ಇತಿಹಾಸದಲ್ಲಿ ತನ್ನ ಸ್ಥಾನವನ್ನು ಭದ್ರವಾಗಿ ಉಳಿಸಿಕೊಳ್ಳಬಲ್ಲುದು.

# ಉತ್ತರಾಯಣ: ಒಂದು ವ್ಯಗ್ರ ಕಾದಂಬರಿ*

ಪ್ರಬಂಧ

**ಬನ್ನಂಜೆ ಗೋವಿಂದಾಚಾರ್ಯ**

ವ್ಯಾಸರಾಯ ಬಲ್ಲಾಳರ ಈ ಉತ್ತರಾಯಣಕ್ಕೆ ಕೇವಲ ಆರು ತಿಂಗಳ ಅವಧಿಯಲ್ಲ; ಕೆಲವು ವರ್ಷಗಳೇ ಹಿಡಿದಿದೆ ಎನ್ನುವುದು ನನಗೆ ಗೊತ್ತಿದೆ. ಬಲ್ಲಾಳರು ಪ್ರಕಾಶಕರೊಡನೆ ಕಾಂಟ್ರಾಕ್ಟು ಮಾಡಿಕೊಂಡ ಕರ್ಮಕ್ಕಾಗಿ ತಿಂಗಳಿಗೊಂದು ಕಾದಂಬರಿಯನ್ನು ತಪ್ಪದೆ ಹೆರುವ 'ಯಂತ್ರಸಾಹಿತಿ' ಆಗಿಲ್ಲ; ಆಗುವ ಸಂಭವವೂ ಇಲ್ಲ. ಅವರು ತನ್ನ ಜೀವನಾನುಭವದ ಈ ಸುದೀರ್ಘ ಅವಧಿಯಲ್ಲಿ ಕೇವಲ ನಾಲ್ಕೇ ಕಾದಂಬರಿಗಳನ್ನು ಬರೆದಿದ್ದಾರೆ. ಬರವಣಿಗೆಯ ಗಟ್ಟಿತನದ ಬಗ್ಗೆ ಅವರು ಎಷ್ಟು ಗಮನ ಕೊಡುತ್ತಾರೆ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಆದರೂ ಬಲ್ಲಾಳರು ಈ ಕಾದಂಬರಿಯಲ್ಲಿ ಏಕೋ ಏನೋ ನಮ್ಮ ನಿರೀಕ್ಷೆಯನ್ನು ವಿಫಲಗೊಳಿಸುತ್ತಾರೆ.

ಬಲ್ಲಾಳರು ನನಗೆ ತೀರ ಆತ್ಮೀಯರು; ಅವರ ಬರವಣಿಗೆಯೂ ಅಷ್ಟೇ ಆತ್ಮೀಯ. ನಮಗೆ ಯಾವುದು ಹೆಚ್ಚು ಪ್ರಿಯ ಅದರ ಸಮಗ್ರತೆಯ ಬಗ್ಗೆ ನಮಗೆ ಆಸ್ಥೆ ಇರುವುದು ಸ್ವಾಭಾವಿಕ. ಈ ದಿಸೆಯಲ್ಲಿ ನನಗೆ ಈ ಕಾದಂಬರಿಯಲ್ಲಿ ಕಂಡುಬಂದ ಕೊರತೆಗಳನ್ನು ಸ್ಪಷ್ಟವಾದ ಭಾಷೆಯಲ್ಲಿ ಆಡುವುದಕ್ಕೆ ನಮ್ಮ ಪರಸ್ಪರ ಸ್ನೇಹ ಎಂದೂ ತಡೆಯಾಗುವುದಿಲ್ಲ. ಪ್ರಾಮಾಣಿಕವಾಗಿ ಅನಿಸಿದ್ದನ್ನು ಬಿಚ್ಚುಮನಸಿನಿಂದ ಮುಂದಿಡುವುದೇ ಸ್ನೇಹದ ಸರಿಯಾದ ರೀತಿ ಹೊರತು ಪ್ರಶಂಸೆಯ ಮುಖವಾಡ ಹೊತ್ತು ಬರುವ ಅಪ್ರಾಮಾಣಿಕ ವಿಮರ್ಶೆಗಳಲ್ಲ.

ಉತ್ತರಾಯಣ ಮುಖ್ಯತಃ ಎರಡು ಹುಡುಗಿಯರ ಸುತ್ತ ಹೆಣೆದ ಕಥೆ. ರುಕ್ಮಿಣಿ—ಹೇಮಾ ಈ ಅಕ್ಕತಂಗಿಯರ ಜೀವನದ ಸುತ್ತ ಕಾದಂಬರಿ ಸಾಗುತ್ತದೆ. ಈ ಎರಡು ಪಾತ್ರಗಳ ಪೋಷಣೆಗಾಗಿ ಉಳಿದೆಲ್ಲ ಪಾತ್ರಗಳು ಮೂಡಿ ಬಂದಿವೆ. ಕಾದಂಬರಿಯನ್ನು ಓದಿ ಮುಗಿಸಿದಾಗ ನಮಗೆ ಮುಖ್ಯವಾಗಿ ಅನ್ನಿಸುವ ಮಾತು ಇದು: ಈ ಎರಡು ಪಾತ್ರ

---

* "ಉತ್ತರಾಯಣ'ದ ಸಮೀಕ್ಷೆ ನಡೆಯಬೇಕಾಗಿದ್ದ ದಿವಸದ ಮುಂಚಿನ ರಾತ್ರಿಯಲ್ಲಿ, ದೂರದೂರಿನಿಂದ ಬಂದ ಸಾಹಿತಿಮಿತ್ರರ ಹರಟೆಯ ಹಾವಳಿಯ ನಡುವೆ, ಅವಸರದಲ್ಲಿ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಆದರಿಂದ ಕಾದಂಬರಿಯ ಸ್ಥೂಲ ಸಮೀಕ್ಷೆಯನ್ನಷ್ಟೆ ಇಲ್ಲಿ ಮಾಡುವುದು ಸಾಧ್ಯವಾಗಿದೆ. ಕಾದಂಬರಿಯ ಇನ್ನು ಕೆಲವು ಮುಖಗಳನ್ನು ಇಲ್ಲಿ ವಿವೇಚಿಸಲಾಗಲಿಲ್ಲ, ಕಾದಂಬರಿಯ ಬಗ್ಗೆ ಹೇಳಬೇಕೆನಿಸಿದ್ದ ಎಲ್ಲ ಮಾತುಗಳನ್ನು ಇಲ್ಲಿ ಹೇಳುವುದಾಗಲಿಲ್ಲ ಎಂಬ ಕೊರಗು ಇನ್ನೂ ಉಳಿದಿದೆ. (ಲೇ.)

ಗಳನ್ನು ಬಿಟ್ಟರೆ ಉಳಿದ ಪಾತ್ರಗಳಿಗೆ ಇಲ್ಲಿ ಸ್ವಂತಿಕೆಯ ಅಸ್ತಿತ್ವವೇ ಇಲ್ಲದಂತಾಗಿದೆ. ಇದು ಕಾದಂಬರಿಯ ದೃಷ್ಟಿಯಿಂದ ಎಷ್ಟು ಔಚಿತ್ಯಪೂರ್ಣ ಎನ್ನುವುದು ವಿವೇಚನೀಯವಾದ ಅಂಶ.

ಈ ಮಾತಿನ ಸ್ಪಷ್ಟತೆಗಾಗಿ ಮೊದಲು ರುಕ್ಮಿಣಿಯ ಚಿತ್ರಣವನ್ನೆ ನೋಡೋಣ. ರುಕ್ಮಿಣಿ ಮದುವೆಯಾಗಿ, ಮಿಸೆಸ್ ಶಾಸ್ತ್ರಿಯಾಗಿ, ಅನಂತರ ಗಂಡನನ್ನೂ ಏಕಮಾತ್ರ ಪುತ್ರನನ್ನೂ ಕಳೆದುಕೊಂಡು, ಕೊನೆಗೆ ತಂದೆಯನ್ನೂ ಕಳೆದುಕೊಂಡು – ಇಂಥ ಅನಾಥ ಸ್ಥಿತಿಯಲ್ಲಿ ಡೇವಿಸ್ ಬ್ರೌನ್ ಸಂಸ್ಥೆಯಲ್ಲಿ ಟ್ಯಾಪಿಸ್ಟ್ ಆಗಿ ಕೆಲಸ ಮಾಡಿ ಜೀವನ ನಿರ್ವಹಣೆ ಮಾಡುತ್ತಿರುವ ಹರೆಯದ ಹೆಣ್ಮಗಳು. ದಾಕ್ಷಿಣ್ಯಶೀಲವಾದ, ಸಂಪ್ರದಾಯ ಬದ್ಧವಾದ ಜೀವ. ಇವಳು ಮುಂದೆ ಕಂಪೆನಿಯ ಮ್ಯಾನೇಜರ್ ಮೋಹನರಾಯನ ಕಾರ್ಯದರ್ಶಿನಿಯಾಗಿ ಕೆಲಸ ಮಾಡುವ ಪ್ರಸಂಗ ಬಂದಾಗ ಮಾತ್ರ ಇವಳ ಜೀವನದ ಮುಖ ಬದಲಾಯಿತು. ಈ ಘಟನೆಯಿಂದ ಆಕೆಯ ಜೀವನದಲ್ಲಿ, ವ್ಯಕ್ತಿತ್ವದಲ್ಲಿ ಸುಪ್ತ ವಾಗಿದ್ದ, ಅದುಮಿಟ್ಟಿದ್ದ ಮುಖ ಮತ್ತೆ ತಲೆಯೆತ್ತಿತು.

ಅನಾಥೆಯಾದ, ಅಸಹಾಯಕಳಾದ ಒಬ್ಬ ಹುಡುಗಿ ಎನ್ನುವುದಕ್ಕಾಗಿ ರಾವ್ ತನ್ನನ್ನು ಹಚ್ಚಿಕೊಂಡಿದ್ದಾನೆ ಎನ್ನುವುದನ್ನು ಅವಳು ಕಲ್ಪಿಸಲೂ ಆರಳು. ಬದಲಾಗಿ ತನ್ನ ಮೇಲಣ ಒಲವಿನಿಂದ, ವಿಶ್ವಾಸದಿಂದ ಅವನು ತನ್ನ ಸ್ನೇಹವನ್ನು ಬಯಸುತ್ತಾನೆ ಎನ್ನುವ ಕಲ್ಪನೆಯಲ್ಲಿ ಅವಳಿಗೆ ಅಮಿತವಾದ ಆನಂದ ಕಾಣಿಸುತ್ತದೆ. ರಾವ್ ಮತ್ತು ಅವಳ ಹೆಸರನ್ನು ಜನ ಜತೆ-ಜತೆಯಾಗಿ ಆಡಿಕೊಂಡಾಗ, ಈ ಪಿಸುಮಾತು ಅವಳ ಕಿವಿಗೂ ಬಿದ್ದಾಗ ಅವಳಿಗೆ ಕೋಪ ಬರಲಿಲ್ಲ; ಒಳಗೊಳಗೇ ಆನಂದವಾಯಿತು. ಇಲ್ಲಿ ವಿಧವೆ ಮಿಸೆಸ್ ಶಾಸ್ತ್ರಿ ಮೆಲ್ಲನೆ ಮರೆಯಾಗಿ ಆ ಸ್ಥಾನದಲ್ಲಿ ಮತ್ತೆ ರುಕ್ಮಿಣಿ ಜನ್ಮ ತಾಳುತ್ತಾಳೆ. ಅವಳ ಈ ಪ್ರತಿಕ್ರಿಯೆ, ಈ ಪರಿವರ್ತನೆ ತೀರ ಸ್ವಾಭಾವಿಕವಾಗಿ, ಅಷ್ಟೇ ಸುಂದರವಾಗಿ ಕಾದಂಬರಿಯಲ್ಲಿ ಮೂಡಿಬಂದಿದೆ. ಇಲ್ಲಿಂದ ಮುಂದೆ ಮಗು ಭಾಸ್ಕರ ಲಾರಿಯಡಿಗೆ ಬಿದ್ದು ಸಾಯುವುದಕ್ಕಿಂತ ಹುಟ್ಟದಿದ್ದರೆಯೆ ಚೆನ್ನಾಗಿತ್ತು ಎನ್ನುವಷ್ಟರ ಮಟ್ಟಿಗೆ ಅದು ಕಾದಂಬರಿಯಿಂದ, ರುಕ್ಮಿಣಿಯ ಚಿತ್ತದಿಂದ ಕಣ್ಮರೆಯಾಗಿಬಿಡುತ್ತದೆ.

ರಾವ್ ಅಸ್ವಸ್ಥನಾಗಿದ್ದಾಗ ರುಕ್ಮಿಣಿ ಆಫೀಸಿನ ಫೈಲು ಹಿಡಿದುಕೊಂಡು ಅವನ ಮನೆಗೇ ಹೋಗಿ ಬರುವ ಪ್ರಸಂಗದಿಂದ ಒಬ್ಬರಿಗೊಬ್ಬರು ಇನ್ನಷ್ಟು ಹತ್ತಿರಾಗುತ್ತಾರೆ. ತಾಯಿಗೆ ಅನಾರೋಗ್ಯದ ಕಾರಣ ರುಕ್ಮಿಣಿಗೆ ಮನೆಯಿಂದ ತುರ್ತು ಕರೆ ಬಂದಾಗ ಅವ ಳನ್ನು ರಾವ್ ತಾನೇ ಸ್ವತಃ ತನ್ನ ಕಾರಿನಲ್ಲಿ ಅವಳ ಮನೆಗೆ ಕರೆದೊಯ್ಯುತ್ತಾನೆ. ಅಲ್ಲಿ ರುಕ್ಮಿಣಿಯ ತಾಯಿ ತೀರಿಕೊಂಡಿರುತ್ತಾಳೆ. ಅವಳ ಅಂತ್ಯಸಂಸ್ಕಾರ ಮುಗಿಯುವ ತನಕವೂ ರಾವ್ ಅನಿವಾರ್ಯವಾಗಿ ಅಲ್ಲೇ ಇರುತ್ತಾನೆ. ಆಗ ಅವನಿಗೆ ಅಕಸ್ಮಾತ್ತಾಗಿ ಹೇಮಾಳ ಪರಿಚಯ ಆಗುತ್ತದೆ.

ರುಕ್ಮಿಣಿಯ ತಂಗಿ ಹೇಮಾ ವ್ಯಕ್ತಿತ್ವದ ಇನ್ನೊಂದು ಮುಖ. ರುಕ್ಮಿಣಿ ಪರಿಸರದ ಒತ್ತಡಕ್ಕೆ ಬಗ್ಗಿ, ಕುಗ್ಗಿ, ತನ್ನೆಲ್ಲ ವ್ಯಕ್ತಿತ್ವವನ್ನು ಅಡಗಿಸಿಕೊಂಡು, ಪ್ರವಾಹ ಹರಿದತ್ತ ಸಾಗುವ ಹುಡುಗಿಯಾದರೆ ಹೇಮಾ ಸುತ್ತಲಿನ ಒತ್ತಡವನ್ನು ಮೆಟ್ಟಿ ನಿಂತು ಪ್ರವಾಹಕ್ಕೆ ಎದುರಾಗಿ ತನ್ನತನವನ್ನು ಉಳಿಸಿಕೊಂಡು ಬಾಳಲು ಹೋರಾಟ ನಡೆಸುತ್ತಿರುವ ಕ್ರಾಂತಿ

ಕಾರಿ ದಿಟ್ಟ ಹುಡುಗಿ. ರತಿ ಭಿಕ್ಷೆಗಾಗಿ ಕೈ ಮುಗಿಯಬಲ್ಲ, ಕಾಲು ಹಿಡಿಯಬಲ್ಲ ಗಂಡನನ್ನು ಕಂಡಾಗ ಅವಳು ಗಂಡನನ್ನೆ ಬಿಟ್ಟು ನಡೆದಳು. "ನೀನಿಲ್ಲದೆ ನಾನು ಬದುಕಲಾರೆ" ಎಂದು ದೈನ್ಯದಿಂದ ಹೇಳಿಕೊಂಡ ಗಂಡನ ಬಳಿ "ನೀನಿಲ್ಲದೆ ನಾನು ಬದುಕಬಲ್ಲೆ" ಎಂದು ಕೆಣಕಿ ನುಡಿದಳು. ತಾಯಿ ಅಸ್ವಸ್ಥಳಿದ್ದಾಳೆ ಎಂದು ತಿಳಿದಾಗ, ಮನೋರೋಗಿಯಾದ ಅಣ್ಣ ಗೋವಿಂದ ಶುಶ್ರೂಷೆಯಿಲ್ಲದೆ ಮನೆಯಲ್ಲಿ ಕೊಳೆಯುತ್ತಿದ್ದಾನೆ ಎಂದು ತಿಳಿದಾಗ, ತನ್ನ ಮಾಂಗಲ್ಯಸೂತ್ರವನ್ನೆ ಡಾ। ಆನಂದರಾಯರ ಕೈಯಲ್ಲಿ ಕೊಟ್ಟು ಅವರ ಆರೋಗ್ಯದ, ಆರೈಕೆಯ ಬಗ್ಗೆ ಕಳಕಳಿ ತೋರಿದಳು – ತವರುಮನೆಯಲ್ಲಿ ತಾನು ತನ್ನ ದಿಟ್ಟತನದ ವರ್ತನೆಗಳಿಂದಾಗಿ ಹೊರಗಿನವಳಾಗಿದ್ದೇನೆ ಎಂದು ತಿಳಿದಿದ್ದರೂ ಕೂಡ, ವಾಚೊಂದನ್ನು ಉಡುಗರೆ ನೀಡುವ ನೆಪದಲ್ಲಿ ಹೆಗಲಿಗೆ ಕೈಹಾಕಿ, ತುಟಿಗೆ ತುಟಿ ತಾಕಿಸಿದ ರಸಿಕರಿಗೆ "ನಿಮ್ಮ ವಾಚಿನ ಬಗ್ಗೆ ಸಲ್ಲಬೇಕಾದ ಲೆಕ್ಕಾಚಾರ ಚುಕ್ತಾ ಆಯಿತೆ? ಅಥವಾ ಇನ್ನೂ ಏನಾದರೂ ನನ್ನಿಂದ ಸಲ್ಲಬೇಕಾದ್ದು ಬಾಕಿ ಇದೆಯೆ?" ಎಂದು ಮುಖಕ್ಕೆ ಒಗೆದು ಕೇಳಿದಳು. ತಾನು ಸ್ವತಂತ್ರಳಾಗಿ ನಿಲ್ಲುವುದಕ್ಕೆ ನಡೆಸುವ ಹೋರಾಟದಲ್ಲಿ ಅವಳು ಇನ್ನಾವುದಕ್ಕೂ ಬೆಲೆ ಕೊಟ್ಟವಳಲ್ಲ. ಇಟ್ಟ ಹೆಜ್ಜೆ ತಪ್ಪಾದಾಗ ಹಿಂದೆ ಸರಿಯಲಿಲ್ಲ; ಪಶ್ಚಾತ್ತಾಪಪಡಲಿಲ್ಲ. ಅದರ ಅಡಿಪಾಯದಲ್ಲೆ ಇನ್ನೊಂದು ಹೆಜ್ಜೆ ಮುಂದೆ ನಡೆದು ಎತ್ತರದಲ್ಲೆ ನಿಂತಳು. ಈ ಹುಡುಗಿದಾರಿ ತಪ್ಪಿದಳು ಎಂದು ಹೇಳುವುದಕ್ಕೆ ನಮಗೆ ಮನಸ್ಸು ಬರುವುದಿಲ್ಲ. ಬದಲಾಗಿ ಮೋಹನರಾಯನಂತೆಯೆ ನಾವೂ ಆಕೆಯ ದಿಟ್ಟತನವನ್ನು ಮೆಚ್ಚುತ್ತ ಹೋಗುತ್ತೇವೆ.

ಆದರೆ ಆಕೆಗೂ ಮೋಹನರಾಯನಿಗೂ ಪರಿಚಯ ಆದ ಮೇಲೆ ಆಕೆಯಲ್ಲಿ ಕಾಣುವ ಬದಲಾವಣೆ ತೀರ ಅಚಾನಕ್ಕಾಗಿ ಎನ್ನುವಂತೆ ಬಂದುಬಿಡುತ್ತದೆ. ರುಕ್ಮಿಣಿಯನ್ನು ಮೋಹನರಾವ್ ಹಚ್ಚಿಕೊಂಡಿದ್ದಾನೆ ಎಂದು ಗೊತ್ತಿದ್ದ ಹೇಮಾ ತಾನೂ ಏಕೆ ಅವನ ಕೈಗೊಂಬೆಯಂತೆ ನಡೆದುಕೊಳ್ಳುತ್ತಾಳೆ? ರುಕ್ಮಿಣಿಯ ವಿಘಟನೆ ಅವಳಿಗೆ ಪ್ರಿಯವಾದದ್ದು ಎಂದೇನೂ ಕಾದಂಬರಿಯಲ್ಲಿ ಅನ್ನಿಸುವುದಿಲ್ಲ. ಈ ಪರಿಚಯವೇ ಆಕೆಯ ಅದಮ್ಯವಾದ ಹೋರಾಟದ ಸೋಲಿಗೆ ಮತ್ತು ಜೀವನದ ಪತನಕ್ಕೆ ನಾಂದಿಯಾಗಿ, ಸಂಕೇತವಾಗಿ ಬಂದುಬಿಡುತ್ತದೆ. ವಾಚು ಕೊಟ್ಟವನಿಗೆ ಮುತ್ತು ಕೊಟ್ಟೂ ಪತಿತಳಾಗದೆ ಉಳಿದ ಈ ಹುಡುಗಿ ಮೋಹನನ ಪರಿಚಯದ ಕ್ಷಣದಿಂದ ತೀರ ಕೆಳಕ್ಕೆ ಇಳಿದಂತೆ, ಏನನ್ನೊ ಕಳೆದುಕೊಂಡಂತೆ ಬದಲಾಗಿಬಿಡುತ್ತಾಳೆ. ಕಾದಂಬರಿಯನ್ನು ಮುಗಿಸುವುದಕ್ಕಾಗಿ ಈ ಪ್ರಸಂಗ ಅನಿವಾರ್ಯವಾಗಿತ್ತೇನೋ!

ಅಂತೂ ಈ ಪ್ರಸಂಗ ರುಕ್ಮಿಣಿಗೆ ತಿಳಿದಾಗ, ಮೋಹನರಾಯನ ಮನೆಯಲ್ಲಿ – ಮನದಲ್ಲಿ ತನ್ನ ಸ್ಥಾನವನ್ನು ಆಕ್ರಮಿಸಿ ತನ್ನ ತಂಗಿ ಕುಳಿತದ್ದನ್ನು ಕಂಡಾಗ ಗಾಸಿಗೊಂಡ ರುಕ್ಮಿಣಿ (ಆಗ ಅವಳು ವಿಧವೆ ಎನ್ನುವ ಮಾತು ಅವಳಿಗೆ ಸರಿಯಾಗಿ ಅರ್ಥವಾಗುತ್ತದೆ) ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಗೋವಿಂದ ಹುಚ್ಚರ ಆಸ್ಪತ್ರೆ ಸೇರಿದವ ಅಲ್ಲೇ ಜೀವ ಬಿಡುತ್ತಾನೆ. ಈಗ ಈ ಸಂಸಾರದಲ್ಲಿ ಉಳಿದ ಏಕಮಾತ್ರ ವ್ಯಕ್ತಿ ಹೇಮಾ ಕೂಡ ಈ ಇಡಿಯ ಸಂಸಾರದ ದುರಂತದ ಪರಿಣಾಮವಾಗಿ ಮೋಹನನಿಗೂ ಹೇಳದೆ ಎತ್ತಲೋ ಹೋಗಿಬಿಡುತ್ತಾಳೆ.

ಈ ಇಡಿಯ ಪ್ರಸಂಗದಿಂದ ತಿಳಿಯುವ ಅಂಶ ಇಷ್ಟು: ಇಲ್ಲಿಯ ಸ್ತ್ರೀಪಾತ್ರ ಹೆಣ್ಣಾಗಿ ಮಾರ್ದವವನ್ನು ತೋರಿದೆ; ಗಂಡಿನಂತೆ ಗಡಸುತನದಿಂದಲೂ ನಡೆದು ಕೊಂಡಿದೆ. ಆದರೆ ಇಡಿಯ ಕಾದಂಬರಿಯಲ್ಲಿ ಒಬ್ಬ ಗಂಡಸೂ ಗಂಡಸಾಗಿ ಕಾಣಿಸಿಕೊಳ್ಳು ವುದಿಲ್ಲ. ಈ ಎರಡು ಹೆಣ್ಣುಗಳ ಜೀವನಕ್ಕೆ, ವ್ಯಕ್ತಿತ್ವಕ್ಕೆ ಪೋಷಕರಾಗಿ ನಪುಂಸಕರಂತೆ ನಡೆದುಕೊಂಡಿವೆ. ಹೆಣ್ಣಿನ ಸೀರೆ – ಪೋಷಾಕುಗಳಂತೆ ಗಂಡೂ ಒಂದು ಉಪಕರಣ ಆಕೆಗೆ – ಅಷ್ಟೆ.

ಮೋಹನರಾಯನ ದಕ್ಷತೆಯ ಬಗ್ಗೆ, ಆಫೀಸಿನಲ್ಲಿ ಅವನ ಜನಪ್ರಿಯತೆಯ ಬಗ್ಗೆ ಬಹಳಷ್ಟು ವಿವರವನ್ನು ಕಾದಂಬರಿ ಒದವಿಸುತ್ತದೆ. ಆದರೆ, ಇಷ್ಟೆಲ್ಲವನ್ನು ಓದಿ ಮುಗಿಸಿದ ಮೇಲೂ ನಮ್ಮ ಮುಂದೆ ನಿಲ್ಲುವ ಮೋಹನ ಮಾತ್ರ ಸ್ತ್ರೀಪಾತ್ರದ ತಾಳಕ್ಕೆ ಸಮನಾಗಿ ಹೆಜ್ಜೆ ಹಾಕುವ ಸತ್ತ್ವಹೀನ ವ್ಯಕ್ತಿ. ಡೋರಿಸ್ ವಾರ್ಟಳ ತುಟಿಯ ರಂಗು ತನ್ನ ಕೆನ್ನೆಯ ಮೇಲೆ ಬಿದ್ದದ್ದೇ, ಎಲ್ಲವನ್ನೂ ಮರೆತು, ಫ್ಲೂ ರೋಗಗ್ರಸ್ತನಾದ ಮೋಹನ ಆಕೆಯ ಇಚ್ಛೆಯನ್ನು ಪೂರೈಸಲು ಸಾವಿರ ರೂಪಾಯಿಗಳ ಚೆಕ್ಕು ಕೊಡುತ್ತಾನೆ. ಆಕೆ ಇವನ ಬಳಿ ಸುಳ್ಳು ಹೇಳಿ ಕೆನಡಾಕ್ಕೆ, ಇನ್ನಾವನೋ ಒಬ್ಬನ ಜತೆಗೆ ಹೋದ ಸುದ್ದಿ ತಿಳಿ ದಾಗಲೂ ಅವನಿಗೆ ಏನೂ ಅನ್ನಿಸುವುದಿಲ್ಲ. ತುಟಿಯ ರಂಗಿನ ಕಿಮ್ಮತ್ತು ಸಂದಾಯವಾಗಿ ಬಿಟ್ಟಿದೆ – ಅಷ್ಟೆ.

ಮುಂದೆ ರುಕ್ಮಿಣಿಯ ಮಾಟವಾದ ಮೈ ಇವನ ಅಧಿಕಾರದ ಕಾರ್ಯದಕ್ಷತೆಗೆ ಸಹಾನುಭೂತಿಯ ಮಾನವೀಯ ಗುಣವನ್ನು ಕಲಿಸಿಬಿಡುತ್ತದೆ. ಅದೇ ಮೋಹನ ಏನೂ ಯೋಚನೆಯಿಲ್ಲದೆ, ಮುಂದೆ ರುಕ್ಮಿಣಿಯ ಸ್ಥಾನದಲ್ಲಿ ಅವಳ ತಂಗಿ ಹೇಮಾಳನ್ನು ಕೂಡಿಸಿಬಿಡುತ್ತಾನೆ. ಏನೆಂದರೂ ಅಕ್ಕನಿಗಿಂತ ತಂಗಿ ಪ್ರಾಯದಲ್ಲಿ ಎಳಸಾಗಿರಲೇಬೇಕಲ್ಲ. ಅದೂ ಹಣ್ಣು ಬಿಡದ ಬಸಿರು. ಮೋಹನ ತಾನೆ ಏನು ಮಾಡಲು ಸಾಧ್ಯ? ಸಿಗರೇಟು ಎಳೆದು ಬಿಸಾಕಿದಷ್ಟು ಸುಲಭವಾಗಿ ಅವನು ಇಂಥ ಬದಲಾವಣೆಗಳನ್ನು ಒಪ್ಪಿಕೊಂಡು ಬಿಡುತ್ತಾನೆ. ಇವರು ಯಾರೂ ಪಕ್ಕದಲ್ಲಿ ಇಲ್ಲದಾಗ ಮಾತ್ರ ಅವನ ಕೈ ಹಿಡಿದಿದ್ದ, ಈಗ ಅವನನ್ನಗಲಿ ಹೋಗಿರುವ 'ಕರ್ಪೂರದ ಗೊಂಬೆ' ಅವನ ನೆನಪಿಗೆ ಬರುತ್ತಾಳೆ. "ಪ್ರಕೃತಿಃ ಕರ್ತ್ರೀ, ಪುರುಷಸ್ತು ಪುಷ್ಕರಪಲಾಶವನ್ನಿರ್ಲಿಪ್ತಃ" ಎಂಬ ಸಾಂಖ್ಯಸಿದ್ಧಾಂತವನ್ನು ಈ ಮೋಹನರಾಯ ಗಾಢವಾಗಿ ಅಧ್ಯಯನ ಮಾಡಿದಂತಿದೆ.

ಈ ಕಾದಂಬರಿಯ ಇನ್ನೊಬ್ಬ ಗಂಡಸು, ಹೇಮಾಳ ಕೊರಳಿಗೆ ತಾಳಿ ಕಟ್ಟಿಯೂ ಅವಳ ಗಂಡನಾಗಿ ಬಾಳಲಾಗದ ಗಿರೀಶ. "ತನ್ನ ಹೆಂಡತಿ ಈ ತನಕ ಬೇರೆಯವರ ಜತೆ ಅಡ್ಡಾಡಿದರೂ ಪರವಾ ಇಲ್ಲ, ಇನ್ನಾದರೂ ನನ್ನೊಡನೆ ಬಂದಿರಬಾರದೆ? ಏಕೆಂದರೆ ಅವಳನ್ನು ಬಿಟ್ಟು ನಾನು ಬದುಕಲಾರೆ" ಎಂದು ಇದ್ದವರ ಮುಂದೆಲ್ಲ ಗೋಳು ಹೊಯ್ದು ಗಂಟುಬೀಳುವ ಗಂಡಸು ಇವನು.

ಡೇವಿಸ್ ಬ್ರೌನ್ ಸಂಸ್ಥೆಯ ಎಂ. ಡಿ. ಅವಿನಾಶ್ – ಇವನು ಎಂಥವನು ಮತ್ತೆ! ಇವನ ಎಲ್ಲ ಜುಟ್ಟು (ಕ್ರಾಪು ಎನ್ನಿ ಬೇಕಾದರೆ) ಹೆಂಡತಿ ಜ್ಯೋತ್ಸ್ನಾಳ ಕೈಯಲ್ಲಿ. ಆಫೀಸಿನಲ್ಲಿ ಯಾರನ್ನಾದರೂ ಟ್ರಾನ್ಸ್‌ಫರ್ ಮಾಡಬೇಕಾದರೆ, ಏಳಬೇಕಾದರೆ, ಕೂಡ ಬೇಕಾದರೆ ಹೆಂಡತಿಯ ಪರವಾನಿಗೆ ಬೇಕು ಈ ವೀರಪುರುಷನಿಗೆ.

ಡಾ। ಆನಂದರಾಯರಂತೂ ತಾನು ಮದ್ದು ಕೊಟ್ಟ ಮೇಲೂ ರೋಗಿ ಬದುಕಿಯಾನು ಎಂಬ ಬಗ್ಗೆ ತನ್ನ ವಿಷಯದಲ್ಲಿಯೆ ಧೈರ್ಯವಿಲ್ಲದ, ಭರವಸೆಯಿಲ್ಲದ ಡಾಕ್ಟರರು. ಡಾ। ಘರ್ಪುರೆ ಇನ್ನೂ ವಿಚಿತ್ರ. ಈ ಮುದುಕ ಪ್ರಾಯದ ಚೆಲು ಹುಡುಗೆಯರು ಕರೆಯಬಂದರೆ ಸಾಕು, ಕೂಡಲೆ ಬ್ಯಾಗ್ ಹಿಡಿದುಕೊಂಡು ರೋಗಿಯ ವಿಸಿಟಿಗೆ ಹೊರಡುವವರು, (ಪ್ರಾಯಃ ಇದಕ್ಕಾಗಿ ಬಲ್ಲಾಳರನ್ನು ಆಕ್ಷೇಪಿಸಿ ಫಲವಿಲ್ಲ. ಅವರು ಮುಂಬಯಿ ತುಂಬ ಇಂಥ ಗಂಡಸರನ್ನೆ ಧಾರಾಳವಾಗಿ ಕಾಣುತ್ತಿರಬೇಕು. ಪಾಪ, ಅವರಾದರೂ ಏನು ಮಾಡಬೇಕು? ಆದರೆ, ಜೀವನ ಎಂದರೆ ಮುಂಬಯಿಗಿಂತ ದೊಡ್ಡ ವಸ್ತು.)

ಒಟ್ಟು ಇಲ್ಲಿನ ಯಾವ ಗಂಡಸೂ ತನ್ನತನವನ್ನು ಉಳಿಸಿಕೊಂಡಿಲ್ಲ. ಹೆಣ್ಣು ಒಂದು ಕೇಂದ್ರಬಿಂದು. ಅದರ ಸುತ್ತ, ಅದು ತೋರಿದ ದಿಸೆಯಲ್ಲಿ ಈ ಗಂಡು ಗಿರಿಗಿಟ್ಟಿಯಂತೆ ಸುತ್ತುತ್ತಿದೆ. ನಿಜವಾದ ಗಂಡಸರೆಲ್ಲ ಗಂಭೀರವಾಗಿ ಯೋಚಿಸಬೇಕಾದ ಸಂಗತಿ ಇದು.

ನಾನು ಅರ್ಥಮಾಡಿಕೊಳ್ಳಬಲ್ಲೆ: ಬಲ್ಲಾಳರು ತನ್ನ ಜೀವನದ ಪರಿಸರದಲ್ಲಿ ಕಂಡ, ಉಂಡ ಹಲವಾರು ಅನುಭವಗಳು ಈ ಕಾದಂಬರಿಯ ಹಿಂದೆ ಅವರಿಗೆ ಪ್ರೇರಕವಾಗಿ ನಿಂತಿವೆ. ಅದರಿಂದಲೇ ಯಾವ ಅನುಭವವೂ ಇಲ್ಲದೆ ಸಮೃದ್ಧವಾಗಿ ಪುಟತುಂಬಿಸುವ ಇವತ್ತಿನ ಹತ್ತು ಹಲವು 'ಉತ್ಸಾಹೀ' ಕಾದಂಬರೀಕಾರರ ಬರವಣಿಗೆಯಂತೆ ಇದು ತೀರ ನಿರ್ಜೀವವಾಗಿಲ್ಲ. ಇಂಥ ಸಂಕೀರ್ಣತೆಯ, ವ್ಯಗ್ರತೆಯ ನಡುವಿನಲ್ಲಿ ಕೂಡ ಅದು ಒಂದು ಜೀವದ ಎಳೆಯನ್ನು ಉಳಿಸಿಕೊಂಡು ಬದುಕಿ ಉಳಿದಿದೆ; ಕಾದಂಬರಿ ಈ ಪರಿಧಿಯೊಳಗೆಯೆ ಆದರೂ ಉಸಿರಾಡುತ್ತಿದೆ. ಆದರೂ ಗಂಡಸರ ಗುಂಪಿನ ಮೇಲೆಯೆ ಬಂಡಾಯ ಹೂಡ ಹೊರಟ ಈ ಕಾದಂಬರಿ ನಮಗೆ ನಿಜವಾಗಿ ಕೊಡಬೇಕಾದ ತೃಪ್ತಿಯನ್ನು ಕೊಡುವುದಿಲ್ಲ. ವ್ಯಾಸರಾಯ ಬಲ್ಲಾಳರು ಇದಕ್ಕಿಂತಲೂ ಒಳ್ಳೆಯ ಕಾದಂಬರಿ ಬರೆಯಬಲ್ಲರು, ಬರೆಯಬಹುದಿತ್ತು ಎಂದು ಒಳದನಿಯೊಂದು ಪಿಸುಗುಡುತ್ತಿದೆ.

# ಕನ್ನಡ ಪತ್ರಿಕೆಗಳು

ಅಧ್ಯಕ್ಷರು: ಶಿವರಾಮ ಕಾರಂತ

ಸ್ವಾಗತ ಪರಿಚಯ: ಎ. ಜೆ. ಅಲ್ಸೆ

ಪ್ರಬಂಧಗಳು: ಸೇವ ನಮಿರಾಜ ಮಲ್ಲ

ಹ. ವೆಂ. ನಾಗರಾಜರಾವ್

ಚರ್ಚೆ: ಎನ್. ಎಸ್. ರಾಮಪ್ರಸಾದ

ಗುಂಡ್ಮಿ ಚಂದ್ರಶೇಖರ ಐತಾಳ

ಶಿವರಾಮ ಕಾರಂತ

ವಿಚಾರಗೋಷ್ಠಿ – ೩

# ನನ್ನ ಪಾಲಿನ ಕರ್ತವ್ಯ

ಸ್ವಾಗತ, ಪರಿಚಯ

ಎ. ಜೆ. ಅಲ್ಸೆ

ಮಾನ್ಯ ಅಧ್ಯಕ್ಷರೇ, ಪತ್ರಿಕೋದ್ಯಮಿಗಳೇ ಮತ್ತು ಸ್ನೇಹಿತರೇ, ತಮ್ಮೆಲ್ಲರನ್ನೂ ಸ್ವಾಗತಿಸುವ ಜವಾಬ್ದಾರಿ ನನ್ನ ಪಾಲಿಗೆ ಬಂದಿದೆ. ಅದನ್ನು ನಾನು ಬಹಳ ಸಂತೋಷ ದಿಂದ ನೆರವೇರಿಸುತ್ತಿದ್ದೇನೆ. ಸ್ವಾಗತವನ್ನಂತೂ ಸಮಿತಿಯ ಪರವಾಗಿ ಬಹಳ ಚೆನ್ನಾಗಿ ನಿರ್ವಹಿಸಬಲ್ಲೆ. ಇಲ್ಲಿರುವಂತಹ ಹೂವಿನ ಮಾಲೆಯನ್ನು ಮುಖ್ಯ ಅತಿಥಿಗಳಿಗೆ ಹಾಕಿ, ಈ ಸಮಾರಂಭಕ್ಕೆ ನೀವೆಲ್ಲರೂ ಬಂದದ್ದಕ್ಕಾಗಿ ನಾನು ಬಹಳ ಸಂತೋಷಪಡು ತ್ತೇನೆ, ಎಂದು ಹೇಳಿದರೆ ನನ್ನ ಪಾಲಿನ ಕರ್ತವ್ಯ ಮುಗಿದಂತೆ. ನನ್ನ ಸ್ನೇಹಿತರು ಒಂದು ಎಚ್ಚರಿಕೆ ಕೊಟ್ಟಿದ್ದಾರೆ: ಮುಖ್ಯ ಅತಿಥಿಗಳ ಪರಿಚಯ ಇದೇ ಸಂದರ್ಭದಲ್ಲಿ ಮಾಡಿ ಕೊಡಬೇಕು. ಎಂದು. ಇದು ಸ್ವಲ್ಪ ಕಷ್ಟದ ಕೆಲಸ. ಕಾರಂತರಿಗೆ ನಿನ್ನೆ ತಾನೇ ಸನ್ಮಾನ ಮಾಡಿದ್ದೇವೆ. ನಾವೆಲ್ಲರೂ ಅವರ ಮಾತು ಕೇಳಿ ಹೃದಯ ತುಂಬಿಕೊಂಡು ಸಂತೋಷ ಪಟ್ಟಿದ್ದೇವೆ.

ಸೇವ ನಮಿರಾಜ ಮಲ್ಲರು: ಇವರನ್ನು ಸ್ವತಃ ನೀವ್ಯಾರೂ ನೋಡಿರಲಾರಿರಿ. ಅವರ ಬರಹಗಳನ್ನೇನೊ ಓದಿದ್ದೀರಿ. ಮಲ್ಲರು ಎಂದರೆ ತುಳುವಿನಲ್ಲಿ ದೊಡ್ಡವರು, ದೊಡ್ಡವರ ಸ್ಥಾನದಲ್ಲಿ ಕುಳಿತುಕೊಳ್ಳುವ ಯೋಗ್ಯತೆಯುಳ್ಳವರು ಎಂದರ್ಥ. ಅದೇ ರೀತಿಯಲ್ಲಿ ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲೂ ಮಲ್ಲರು ಬೇಕಾದಷ್ಟು ಮಲ್ಲಯುದ್ಧ ಮಾಡಿದವರು. ಈಗ ನ್ಯಾಯಮೂರ್ತಿಗಳಾಗಿ ಯಾವುದ ನ್ಯಾಯ, ಯಾವುದು ಅನ್ಯಾಯ ಎಂಬುದನ್ನು ತಕ್ಕಡಿಯಲ್ಲಿ ತೂಗುತ್ತಾ ಇದ್ದಾರೆ. ಪತ್ರಿಕೋದ್ಯಮ ವಾಗಲಿ, ಸಾಹಿತ್ಯವಾಗಲಿ ಅವರಿಗೆ ಹಿಡಿಸಿದ ವಿಷಯವಾದ್ದರಿಂದ ಅವರ ಘನತೆ ಏನು ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಹ. ವೆಂ. ಅವರ ಪ್ರಜಾಮತ ಪತ್ರಿಕೆ ನಮ್ಮಲ್ಲಿ ಓದದಿದ್ದವರು ಯಾರು, ಅದನ್ನು ತಿಳಿಯದೆ ಇದ್ದವರು ಯಾರು? ಆ ಪತ್ರಿಕೆಯ ಸಂಪಾದಕರು ಇವರೇ ಎಂದು ಹೇಳಿದರೆ ಸಾಕಾಗುತ್ತದೆ ಎಂದು ಅನಿಸುತ್ತದೆ. ಅದರೊಂದಿಗೆ ಅವರು ಕವಿಗಳೂ ಹೌದು, ಸಾಹಿತಿ ಗಳೂ ಹೌದು.

# ಪತ್ರಿಕೆಗಳ ಬದಲಾಗುತ್ತಿರುವ ಮೌಲ್ಯ

ಪ್ರಬಂಧ

ಸೇವ ನಮಿರಾಜಮಲ್ಲ

ಒಳ್ಳೆಯದಕ್ಕಾಗಲಿ, ಕೆಟ್ಟದಕ್ಕಾಗಲಿ, ಪತ್ರಿಕಾ ಪ್ರಪಂಚ ಕನ್ನಡದಲ್ಲಿ ನೆಲೆನಿಂತಿದೆ. ಕಾಫಿ, ಚಹ, ತಂಬಾಕುಗಳ ಚಟದಂತೆ ಪತ್ರಿಕೆಯನ್ನೋದುವ ಅಭ್ಯಾಸವನ್ನು ಹವ್ಯಾಸ ವೆಂದು ಕರೆಯಬೇಕೋ, ಚಟವೆಂದು – ಅಂದರೆ ದುಶ್ಚಟವೆಂಬ ಅರ್ಥದಲ್ಲಿ – ವರ್ಣಿಸ ಬೇಕೊ, ನನಗೆ ತೋಚದು. ನಾಗರಿಕತೆಯ ಪ್ರಗತಿಯ ಪಥದಲ್ಲಿ ವರ್ತಮಾನ ಪತ್ರಿಕೆಗಳ ಅವತರಣ ಸುಮಾರು ಎರಡು ಶತಮಾನದಿಂದೀಚಿನದು. ಕನ್ನಡದಲ್ಲಿ ಪತ್ರಿಕಾಪ್ರಕಟ ನೆಯು ಆರಂಭವಾಗಿ ನೂರಮೂವತ್ತೋ ನೂರನಲ್ವತ್ತೋ ವರ್ಷಗಳು ಸಂದುವು. ಈ ಅವಧಿಯಲ್ಲಿ ಪತ್ರಿಕೆಗಳ ಉತ್ಪಾದನೆ ಕಲ್ಲಚ್ಚಿನಿಂದ ಆರಂಭವಾಗಿ ಮೊನೊಟೈಪ್ ಆಫ್‌ಸೆಟ್ ಮುದ್ರಣದ ವರೆಗೆ ನಡೆದಿದೆ. ಆರಂಭದಲ್ಲಿ ನೂರಿನ್ನೂರು ಪ್ರತಿಗಳಷ್ಟು ಪ್ರಸಾರವನ್ನು ಹೊಂದಿದ್ದ ಕನ್ನಡ ಪತ್ರಿಕೆಗಳ ಪ್ರಸಾರ ಇಂದು ವೈಯಕ್ತಿಕವಾಗಿ ಮುಕ್ಕಾಲು ಲಕ್ಷದ ಸೀಮೆಯಲ್ಲಿದೆ. ಇಷ್ಟಾದರೂ ಪತ್ರಿಕೆಗಳು ನಮ್ಮ ಅನುದಿನದ ಜೀವನದಲ್ಲಿ ಎಂಥ ಪ್ರಭಾವಶಾಲಿ ಪಾತ್ರವನ್ನು ವಹಿಸುತ್ತಿವೆ ಎಂದು ತೀರ್ಮಾನಿಸು ವುದು ಕಷ್ಟ. ಪತ್ರಿಕೆಯನ್ನೋದುವುದರಿಂದ ಜನರಲ್ ನಾಲೇಜ್ ಅಥವಾ ಸಾಮಾನ್ಯ ಜ್ಞಾನವು ಉಂಟಾಗುವುದೆಂದು ನಾವು ಎಳೆಯರಿರುವಾಗ ಕೇಳುತಿದ್ದೆವು. ಆ ಕಾಲದಲ್ಲಿ ಕನ್ನಡ ಪತ್ರಿಕೆಗಳ ಪ್ರಸರಣವು ಎರಡು ಮೂರು ಸಾವಿರದಷ್ಟಿದ್ದು ಒಂದೋ ಎರಡೋ ಗ್ರಾಮುಗಳಿಗೆ ಒಂದೊಂದು ಪ್ರತಿಯಂತೆ ಸರಾಸರಿ ವಿತರಣೆಯಾಗಬಹುದಿತ್ತು. ಇಂದು ತಾಸಿಗೆ ಹಲವು ಸಾವಿರ ಪ್ರತಿಗಳನ್ನು ಮುದ್ರಿಸಬಲ್ಲ ರೋಟರಿಯಂತ್ರಗಳನ್ನು ಕನ್ನಡ ಪತ್ರಿಕೆಗಳು ಪಡೆದಿವೆ. ಅವುಗಳ ವಿತರಣೆ ತೀವ್ರಗತಿಯಲ್ಲಿ ಆದಷ್ಟು ವ್ಯಾಪಕವಾಗಿ ಆಗು ತ್ತಿದೆ. ಆದರೂ ಅವುಗಳನ್ನೋದುವ ಇಂದಿನ ಸುಶಿಕ್ಷಿತರ ಸಾಮಾನ್ಯ ಜ್ಞಾನ ಹಿಂದಿನ ಕಾಲಕ್ಕಿಂತ ಹೆಚ್ಚಾಗಿದೆ ಎನ್ನಲು ಆಧಾರವಿಲ್ಲ. ಬದಲಾಗಿ, ಇಂದಿರಾಗಾಂಧಿ ಎಂದರೆ ಮಹಾತ್ಮಾಗಾಂಧಿ ಮಗಳು, ಶೇಕ್ ಅಬ್ದುಲ್ಲಾ ಪಾಕಿಸ್ತಾನದ ಪ್ರಧಾನಿ ಎಂಬಿತ್ಯಾದಿ ಯಾಗಿ ಇಂದಿನ ಸುಶಿಕ್ಷಿತರು ತಮ್ಮನ್ನು ಕೆಲಸಕ್ಕಾಗಿ ಆರಿಸುವ ಆಯೋಗಗಳ ಮುಂದೆ ಉತ್ತರಿಸಿದ್ದಾರೆ ಎಂಬ ಸ್ವಾರಸ್ಯದ ಹೌಲರ್‌ಗಳು ಪ್ರಕಟವಾಗುತ್ತಲೇ ಇವೆ.

ನಿಜವಾಗಿ ಪತ್ರಿಕೆಗಳನ್ನು ಅಥವಾ ಅವುಗಳಲ್ಲಿ ಬರುವ ಸುದ್ದಿಗಳನ್ನು ಗಂಭೀರ ವಾಗಿ ಪರಿಗಣಿಸುವ ಕಾಲ ನಮ್ಮಲ್ಲಿ ಮಾತ್ರವಲ್ಲ, ಇತರ ದೇಶಗಳಲ್ಲೂ ಬಂದಿಲ್ಲವೆನ್ನ ಬಹುದು. ನಮ್ಮ ರಾಜ್ಯದ ಈ ಭಾಗದಲ್ಲಿ ಗಜೇಟ್ ಸುದ್ದಿ ಎಂದರೆ ಸುಳ್ಳು ಸುದ್ದಿಯ

ಇನ್ನೊಂದು ಹೆಸರು. ಗಜೇಟ್ ಎಂಬ ಪದಕ್ಕೆ ರೂಢಿಯಲ್ಲಿ ಪತ್ರಿಕೆ ಎಂಬ ಅರ್ಥವಿದೆ. ದಕ್ಷಿಣ ಕನ್ನಡದ ದಕ್ಷಿಣದಲ್ಲಿ ಸುಳ್ಳು ಹೇಳುವ ಅಥವಾ ಹಾರಿಕೆಯ ಉಹಾಪೋಹ ಸುದ್ದಿಗಳನ್ನು ಹರಡುವ ವ್ಯಕ್ತಿಯ ಮಾತನ್ನು ಅಮ್ಟಾಡಿ ಗಜೇಟ್ ಎಂದು ಅನುದಿನದ ಬಳಕೆಯ ನುಡಿಯಲ್ಲಿ ಹೇಳುತ್ತಾರೆ. ಆದರೆ ಪತ್ರಿಕಾ ವರದಿಗಳ ಮೇಲೆ ಜನಸಾಮಾನ್ಯರಿಗಿರುವ ಅವಿಶ್ವಾಸ ವಿಶ್ವವ್ಯಾಪಿಯಾಗಿದೆ ಎನ್ನಲು ದಿನದಿನವೂ ನಿದರ್ಶನಗಳು ದೊರಕುತ್ತವೆ. ಚೀನಾದ ಅಧ್ಯಕ್ಷ ಮಾವೊತ್ಸೆತುಂಗ್ ಕಠಿನ ಕಾಹಿಲೆಯಲ್ಲಿದ್ದಾನೆ ಅಥವಾ ಸತ್ತಿದ್ದಾನೆ ಎಂಬ ಅಮೆರಿಕನ್ ಮೂಲದ ವರ್ತಮಾನಗಳು ಆಗಿಂದಾಗ್ಗೆ ಕೋಲಾಹಲವೆಬ್ಬಿಸುತ್ತವೆ. ಅಮೆರಿಕದ ಸಾಪ್ತಾಹಿಕ ಟ್ಯಾಂ ಪತ್ರಿಕೆ ಇತ್ತೀಚೆಗೆ ಇಂಥ ವರದಿ ಮಾಡಿದ ಕೆಲವೇ ದಿನಗಳಲ್ಲಿ ಮಾವೋ ಪೀಕಿಂಗಿನಲ್ಲಿ ಕಾಣಿಸಿಕೊಂಡ. ಮಾಸ್ಕೋದಲ್ಲಿ ಪ್ರಾವ್ಡಾ ಮತ್ತು ಇಜ್‌ವೆಸ್ಟಿಯಾ ಎಂಬ ಸರ್ಕಾರದಿಂದಲೇ ಪ್ರಕಟವಾಗುವ ಪತ್ರಿಕೆಗಳಿವೆ. ಒಂದರ ಅರ್ಥ ಸುದ್ದಿ ಎಂದು, ಇನ್ನೊಂದರ ಅರ್ಥ ಸತ್ಯವೆಂದು. ಈ ಎರಡೂ ಹೆಸರುಗಳನ್ನು ಸಂಯೋಜಿಸಿ ಅವರು ಪ್ರಾವ್ಡಾದಲ್ಲಿ ಇಜ್‌ವೆಸ್ಟಿಯಾ ಇಲ್ಲ, ಇಜ್‌ವೆಸ್ಟಿಯಾದಲ್ಲಿ ಪ್ರಾವ್ಡಾ ಇಲ್ಲ ಎಂದು ಹೇಳಿಕೊಳ್ಳುತ್ತಾರಂತೆ.

ಸುದ್ದಿ ಪ್ರಕಟಣೆಯ ಈ ಪತ್ರಿಕಾಧರ್ಮ, ಅಥವಾ ಅಧರ್ಮದ ಸಾರ್ವತ್ರಿಕ ಪ್ರಭಾವಕ್ಕೆ ಕನ್ನಡ ಪತ್ರಿಕೆಗಳು ಹೊರತಾಗಿಲ್ಲ. ಏಕೆಂದರೆ ಪತ್ರಿಕೋದ್ಯಮವು ಒಂದು ವಿಶಿಷ್ಟ ಕಲೆಯಾಗಿ ಈಗ ರೂಪುಗೊಂಡಿದೆ. ವಿಶ್ವವಿದ್ಯಾಲಯಗಳಲ್ಲಿ ಬೋಧಕವಿಷಯದ ಸ್ಥಾನವನ್ನು ಕೂಡ ಈ ಕಲೆ ಸಂಪಾದಿಸಿದೆ. ಹೀಗೆ, ವಿಶ್ವಸನೀಯವಾಗಿ ತಿಳಿದುಬಂದ, ಸಾಮಾನ್ಯವಾಗಿ ವಿಶ್ವಸನೀಯವಾದ ಮೂಲಗಳಿಂದ ತಿಳಿಯಲಾದ, ಅನಾಮಧೇಯ ರಾಜಕೀಯ ವೀಕ್ಷಕರಿಂದ ಪ್ರಣೀತವಾದ, ಕಾಕತಾಲೀಯಾದಿ ವಿಧಾನಗಳಿಂದ ಊಹಿಸಲ್ಪಟ್ಟ ಸುದ್ದಿಗಳ ಸಂಗ್ರಹಣ ಮತ್ತು ಪ್ರಕಟನೆಯ ಕಲೆ ಅಥವಾ ವೃತ್ತಿ ಜನಜೀವನದಲ್ಲಿ ಮಹತ್ವದ ಸ್ಥಾನವನ್ನು ಆಕ್ರಮಿಸುವ ಯತ್ನ ನಡೆಸಿದೆ.

ಕನ್ನಡ ನಾಡಿನಲ್ಲಿ ಬ್ರಿಟಿಷರ ಆಳ್ವಿಕೆ ಮುಗಿದ ಬಳಿಕವೂ ಪಾಳೆಯಗಾರಿ ಪದ್ಧತಿಯ ಸಮಾಜವು ಇತ್ತೀಚೆಗಿನ ವರೆಗೆ ಮುಂದುವರಿದಿದೆ. ಈಗ ಆಚರಣೆಗೆ ಬಂದಿರುವ ಮತ್ತು ಬರುತ್ತಿರುವ ಸಮಾಜ ಸುಧಾರಣೆಯ ಶಾಸನಗಳನ್ವಯ ನಮ್ಮ ನಾಡಿನ ಸಾಮಾಜಿಕ ಜೀವನದಲ್ಲಿ ಬದಲಾವಣೆಗಳು ಆಗತೊಡಗಿವೆ ಎನ್ನಬಹುದು. ಈ ಬದಲಾವಣೆಗಳಲ್ಲಿ ಆಸ್ತಿಪಾಸ್ತಿಗಳ ಒಡೆತನಕ್ಕೆ ಸಂಬಂಧಿಸಿದುದು, ಮುಖ್ಯವಾದುದು. ಭೂಮಿಯ ಒಡೆತನ, ಉದ್ದಿಮೆ, ವ್ಯಾಪಾರಗಳನ್ನು ನಡೆಸುವ ವ್ಯವಸ್ಥೆ – ಇವುಗಳಲ್ಲಿ ಮೂಲಭೂತವಾದ ಬದಲಾವಣೆಗಳನ್ನು ತಂದು ಪಾಳೆಯಗಾರಿ ಪದ್ಧತಿಯ ಸಮಾಜವನ್ನು ಬದಲಿಸುವ ಉದ್ದೇಶವನ್ನಿಟ್ಟುಕೊಳ್ಳಲಾಗಿದೆ. ಆಸ್ತಿಗೂ ಸಾಮುದಾಯಿಕ ಸಮಾಜದ ಗುರುತರವಾದ ಸಂಬಂಧವನ್ನು ಕಲ್ಪಿಸಿ ಪರಂಪರಾಗತವಾದ ಹಕ್ಕುಗಳನ್ನು ಮೊಟಕು ಮಾಡಲಾಗುತ್ತಿದೆ. ಸಾವಿರಾರು ಚದರ ಮೈಲಿ ವಿಸ್ತಾರದ ದೇಶೀ ಸಂಸ್ಥಾನಗಳ ಆರ್‍ನೂರು ಏಳ್ನೂರು ಮಕುಟಧಾರಿಗಳು ತಮ್ಮ ಸಿಂಹಾಸನಗಳನ್ನು ಕಳೆದೆರೆಡು ದಶಕಗಳಲ್ಲಿ ಕಳೆದುಕೊಂಡಿದ್ದಾರೆ. ಅಂದಬಳಿಕ ಅವರಿಗಿಂತ ಎಷ್ಟೋ ಪಾಲು ಸಣ್ಣವರಾದ ಭೂಮಾಲೀಕರು, ಉದ್ದಿಮೆದಾರರು, ವ್ಯಾಪಾರಿಗಳು ಮತ್ತು ಇತರ ಕಸಬು

ದಾರರು ಸಮಾಜದ ಹಿತಕ್ಕಾಗಿ ತಮ್ಮ ಹಕ್ಕುಗಳನ್ನು ಕೈಬಿಡಬೇಕಾಗಿ ಬಂದಿರುವುದರಲ್ಲಿ ಆಶ್ಚರ್ಯವಿಲ್ಲ.

ಇಂಥ ಬದಲಾವಣೆಗಳೊಡನೆ ಪತ್ರಿಕೆಗಳ ಆಶೋತ್ತರಗಳೂ ಬದಲುವುದು ಕ್ರಮಪ್ರಾಪ್ತ. ಕಳೆದೆರಡು ದಶಕಗಳಲ್ಲಿ ಕನ್ನಡದಲ್ಲಿ ಪತ್ರಿಕೆಗಳನ್ನು ನಡೆಸುವುದೊಂದು ಉದ್ಯಮವಾಗಿ ಪರಿಣಮಿಸಿದೆ. ಬೆರಳಿನಲ್ಲೆಣಿಸಬಹುದಾದಷ್ಟು ಪತ್ರಿಕಾ ಸಂಸ್ಥೆಗಳಾದರೂ ನಮ್ಮಲ್ಲಿ ಸಮೃದ್ಧಿಯ ಹೊಸ ವ್ಯವಸ್ಥೆಗಳನ್ನು ಮಾಡಿಕೊಂಡಿವೆ. ವಾಣಿಜ್ಯದ ದೃಷ್ಟಿಯಿಂದ ಇವುಗಳು ಪತ್ರಿಕಾ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂಥ ಪ್ರಭಾವಗಳಿಂದ ದೂರವಾಗಬಲ್ಲವು ಎಂಬುದರಲ್ಲಿ ಸಂದೇಹವಿಲ್ಲ.

ಆದರೆ ಕನ್ನಡ ಪತ್ರಿಕೆಗಳು ಈ ವರೆಗೆ ಬೆಳೆದು ಬಂದ ಸಂಪ್ರದಾಯ ಸಂಕೀರ್ಣ ರೀತಿಯದು. ಮೈಸೂರಿನಂಥ ದೇಶೀ ಸಂಸ್ಥಾನದಲ್ಲಿ ಪತ್ರಿಕೋದ್ಯಮಕ್ಕೆ ಸರ್ಕಾರದ ಬೆಂಬಲ ಸಿಗುವುದೇ ಕಷ್ಟವಾಗಿತ್ತು. ಅದರಲ್ಲೂ ಸ್ವಾತಂತ್ರ್ಯ ಚಳವಳಿಯಲ್ಲಿ ಇಂಥ ಹೆಚ್ಚಿನ ಕನ್ನಡ ಪತ್ರಿಕೆಗಳು ಅಧಿಕಾರ ವರ್ಗಕ್ಕೆ ಮುಳ್ಳಿನ ಹಾಸಿಗೆಯಂತೆ ತೋರಿದುವು. ಕೆಲವು ವರ್ಷಗಳ ಹಿಂದೆ ಬೆಂಗಳೂರಲ್ಲಿ ಒಬ್ಬ ಪತ್ರಿಕಾಕರ್ತರು ಹೇಳಿದ ಮಾತು ನನಗೆ ಇಲ್ಲಿ ನೆನಪಾಗುತ್ತದೆ: ಅವರ ಪತ್ರಿಕೆಗೆ ಸಂಪಾದಕರು ಮಹಾರಾಜರಂತೆ. ಸುದ್ದಿ ಸಂಪಾದಕರು ದಿವಾನರಂತೆ. ಮಂತ್ರಿಗಳಲ್ಲಿ ಉಪಸಂಪಾದಕರಂತೆ. ಹಿರಿಯ ಅಧಿಕಾರಿಗಳು ವರದಿಗಾರರಂತೆ. ಮತ್ತೆ ಉಳಿದ ಪ್ರದೇಶಗಳ ಕನ್ನಡ ಪತ್ರಿಕೆಗಳ ಮೇಲೂ ಅಧಿಕಾರಶಾಹಿಯ ದಬ್ಬಾಳಿಕೆ ನಡೆಯುತ್ತಲೇ ಇತ್ತು. ಆದರೂ ಕನ್ನಡ ಪತ್ರಿಕೋದ್ಯಮವು ಸ್ವಾತಂತ್ರ್ಯ ಚಳವಳದಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿತೆನ್ನುವುದರಲ್ಲಿ ಸಂಶಯವಿಲ್ಲ. ಅಸ್ಪೃಶ್ಯತಾ ನಿವಾರಣೆ, ಬಾಲ್ಯವಿವಾಹ ಖಂಡನೆ ಮುಂತಾದ ಸಾಮಾಜಿಕ ಕುಂದುಕೊರತೆಗಳತ್ತವೂ ಅದು ದೃಷ್ಟಿ ಹರಿಸದಿರಲಿಲ್ಲ.

ಆದರೆ ಸ್ವಾತಂತ್ರ್ಯೋತ್ತರದ ಈ ಎರಡು ದಶಕಗಳಲ್ಲಿ ಕನ್ನಡ ಪತ್ರಿಕೆಗಳು ಆದರ್ಶಗಳ ಅರಸುವಿಕೆಯಲ್ಲಿ ಅಥವಾ ಆದರ್ಶಗಳನ್ನು ಹಿಂಬಾಲಿಸುವಲ್ಲಿ ಅಷ್ಟೊಂದು ಕೃತಾರ್ಥವಾಗಿವೆಯೆನ್ನಲು ಸಾಧ್ಯವಿಲ್ಲ. ಸಾಮಾಜಿಕ ಮೌಲ್ಯಗಳ ಬದಲಾವಣೆಯ ಈ ಸಂಧಿಕಾಲದಲ್ಲಿ ಜನಸಾಮಾನ್ಯರ ಒಲವು ಹೇಗೆ ಸಂದರ್ಭಸಾಧಕತನಕ್ಕಾಗಿ ವಾಲುತ್ತಿದೆಯೋ ಅದೇ ಪ್ರವೃತ್ತಿ ಹೆಚ್ಚಾಗಿ ಪತ್ರಿಕೆಗಳಲ್ಲೂ ಕಂಡುಬರುತ್ತದೆ. ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸಮಾನತೆಯನ್ನುಂಟುಮಾಡಬೇಕೆಂಬ ದೇಶದ ರಾಜ್ಯಾಂಗದ ಧ್ಯೇಯಗಳು ಪ್ರಜೆಗಳಲ್ಲಿ ಹಬ್ಬುವಂತೆ ನಿಷ್ಠಾವಂತ ಪ್ರತಿಪಾದನೆ ಪತ್ರಿಕೆಗಳಲ್ಲಿ ಸಾಕಷ್ಟು ಒಡಮೂಡಿ ಬಂದಿಲ್ಲ. ಅಂತೆಯೇ ಸರ್ವರಿಗೂ ಸಮಾನಾವಕಾಶವನ್ನು ಒದಗಿಸುವುದು, ಜಾತ್ಯತೀತ ರಾಷ್ಟ್ರವನ್ನು ಕಟ್ಟುವುದು, ಅಸ್ಪೃಶ್ಯತೆ, ಬಿಟ್ಟಿ-ಬೇಗಾರಿ ಮುಂತಾದ ಕಂದಾಚಾರಗಳನ್ನು ತೊಡೆದು ಹಾಕುವುದೇ ಮುಂತಾದ ಮೂಲಭೂತವಾದ ನವೀನ ಆದರ್ಶಗಳನ್ನು ಪುಷ್ಟೀಕರಿಸುವಲ್ಲಿ ಕನ್ನಡ ಪತ್ರಿಕೆಗಳು ಯಶಸ್ವಿಯಾಗಿದ್ದಾವೆಂದು ಹೇಳುವುದು ಕಷ್ಟ. ಜಾತ್ಯತೀತತೆಯನ್ನು ಪ್ರತಿಪಾದಿಸುವ ಬದಲು ಪತ್ರಿಕಾ ಪ್ರಪಂಚವು ಜಾತ್ಯಂಧತೆಯ ಜಾಡನ್ನು ಅಪ್ರತ್ಯಕ್ಷವಾಗಿಯಾದರೂ ಅನುಸರಿಸುತ್ತ ಬಂದಿರುತ್ತಿದೆ ಎಂದು ಸಂದೇಹಪಡಲು ಆಸ್ಪದವಿದೆ. ನಾಡಿನ ಜನರಲ್ಲಿ ಗೊಂದಲವನ್ನೆಬ್ಬಿಸಿರುವ

ಪ್ರಾದೇಶಿಕ ಭಾವನೆ, ಕೋಮುವಾರು ಆವೇಶ ಮೊದಲಾದುವನ್ನು ನಿವಾರಿಸುವ ಕಾರ್ಯದಲ್ಲಿ ಕನ್ನಡ ಪತ್ರಿಕೆಗಳು ಸಮರ್ಥವಾದ ಪಾತ್ರವನ್ನು ವಹಿಸಿಲ್ಲವೆನ್ನಬಹುದು.

ಸ್ವಾತಂತ್ರ್ಯೋತ್ತರದ ದಶಕದಲ್ಲಿ ಮೈಸೂರು ರಾಜ್ಯರಚನೆಗೆ ಮಾತ್ರ ಕನ್ನಡ ಪತ್ರಿಕೆಗಳು ಅತ್ಯಂತ ಆಸ್ಥೆವಹಿಸಿದುವು. ಕನ್ನಡ ಪ್ರದೇಶಗಳು ಆದಷ್ಟು ಮಟ್ಟಿಗೆ ಹೊಸ ರಾಜ್ಯದಲ್ಲಿ ಉಳಿಯುವಂತೆ ಅವು ಸಾಧಿಸಿದುವು. ಅಲ್ಲದೆ, ಹೊಸ ರಾಜ್ಯದಿಂದ ಹೊರ ಗುಳಿದಿರುವ ಕನ್ನಡ ಪ್ರದೇಶಗಳ ಜನರ ಆಶೋತ್ತರಗಳನ್ನು ಇಂದಿಗೂ ಬೆಂಬಲಿಸುತ್ತಿವೆ. ಆದರೆ ಹೊಸ ರಾಜ್ಯದ ರಚನೆಯಾದುದರಿಂದ ಅವುಗಳ ಪ್ರಸರಣದಲ್ಲೇನಾದರೂ ಗಣ ನೀಯ ವ್ಯತ್ಯಾಸವಾದಂತೆ ಕಂಡುಬರುವುದಿಲ್ಲ. ಕನ್ನಡ ಸಂಸ್ಕೃತಿಯ ಪುನರುತ್ಥಾನದ ದಿಶೆಯಲ್ಲಿ ಕನ್ನಡ ಪತ್ರಿಕೆಗಳು ಸಲ್ಲಿಸಿದ ಈ ಸೇವೆ ಮಹತ್ವದ್ದು.

ಕನ್ನಡ ಪತ್ರಿಕೆಗಳಿಗೆ ತಾಂತ್ರಿಕ ಅನಾನುಕೂಲತೆಗಳು ತುಂಬಾ ಇವೆ. ವಿನ್ಯಾಸ ಮತ್ತು ಮುದ್ರಣದಲ್ಲಿ ಇಂಗ್ಲಿಷ್ ಪತ್ರಿಕೆಗಳನ್ನು ಇವು ಇನ್ನೂ ಹಿಂದೆ ಹಾಕಿಲ್ಲ. ಆದರೂ ದೇಶಭಾಷಾ ಪತ್ರಿಕೆಗಳಲ್ಲಿ ಉತ್ತಮ ಮುದ್ರಣವಿನ್ಯಾಸಕ್ಕೆ ಕನ್ನಡದ ಒಂದು ದಿನಪತ್ರಿಕೆ ಹಲವು ಬಾರಿ ಸರ್ಕಾರದ ಪಾರಿತೋಷಕಗಳನ್ನು ಪಡೆದಿರುವುದು ಅಭಿಮಾನದ ಸಂಗತಿ. ಹಾಗೆಯೇ ಅಗ್ರಲೇಖನ, ಟೀಕೆ-ಟಿಪ್ಪಣಿಗಳು, ನಿತ್ಯದ ಲೇಖನಗಳು, ವಿಶೇಷ ಲೇಖನ ಗಳು ಕನ್ನಡದ ಪತ್ರಿಕೆಗಳಲ್ಲಿ ಹೆಚ್ಚೆಚ್ಚು ಜ್ಞಾನಪ್ರಚೋದಕವಾಗಿ ಪ್ರಕಟವಾಗುತ್ತಿವೆ ಎಂಬುದೂ ಗಮನಾರ್ಹವೇ ಸೈ.

ಪತ್ರಿಕಾ ಸ್ವಾತಂತ್ರ್ಯವು ಪತ್ರಿಕೆಗಳ ಒಡೆಯರ ಕಪಿಮುಷ್ಟಿಗೆ ತುತ್ತಾಗಿದೆ ಎಂಬ ಆರೋಪ-ಪ್ರತ್ಯಾರೋಪಗಳು ಇಂದು ರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿವೆ. ಪತ್ರಿಕೆಗಳ ಸಂಪಾದಕರು ಪ್ರಗತಿಶೀಲರೆಂದೂ, ಅವುಗಳ ಒಡೆಯರು ಪ್ರತಿಗಾಮಿಗಳೆಂದೂ ಅಧಿಕಾರ ಪದವಿಯಲ್ಲಿರುವವರೇ ಆರೋಪಿಸತೊಡಗಿದ್ದಾರೆ. ಕನ್ನಡ ಪತ್ರಿಕೆಗಳು ಇಂಥ ಆರೋಪಕ್ಕೆ ಗುರಿಯಾಗಬಲ್ಲವೆಂದು ಹೇಳಲು ಸಮರ್ಥ ಕಾರಣಗಳಿಲ್ಲ; ಕೆಲವೊಮ್ಮೆ ಅವು ವಿಶಿಷ್ಟ ಹಿತಾಸಕ್ತಿಗಳ ಬಗ್ಗೆ ಪ್ರತಿಪಾದನೆ ಮಾಡಿದರೂ ಅವು ನಿರ್ದಿಷ್ಟವಾಗಿ ಎಡ ಅಥವಾ ಬಲ, ಪುರೋಗಾಮಿ ಅಥವಾ ಪ್ರತಿಗಾಮಿ ಧೋರಣೆಯನ್ನು ಅನುಸರಿಸು ತ್ತಿವೆ ಎಂದು ಹೇಳುವುದು ಸಮರ್ಥನೀಯವಾಗಲಾರದು. ಪತ್ರಿಕೆಗಳ ಮಾಲಿಕರಿಗೆ ವಿಶಿಷ್ಟ ಜಾತಿ-ಪಂಥಗಳ ಮೇಲೆ ಪಕ್ಷಪಾತವಿರಬಹುದು; ವಿಶಿಷ್ಟ ಉದ್ಯಮ-ವಾಣಿಜ್ಯ ಗಳಲ್ಲಿ, ಆಸಕ್ತಿಯಿರಬಹುದು; ವಿಶಿಷ್ಟ ರಾಜಕೀಯ ಪಕ್ಷಗಳತ್ತ ಒಲವು ಇರಬಹುದು; ಸಾಮಾಜಿಕ ಮತ್ತು ಆರ್ಥಿಕ ವಿಷಯಗಳಲ್ಲಿ ನಿರ್ದಿಷ್ಟವಾದ ಅಭಿಪ್ರಾಯವಿರಬಹುದು. ಆದ್ದರಿಂದ ತಮ್ಮ ಒಡೆತನಕ್ಕೆ ಸೇರಿದ ಪತ್ರಿಕೆ ತಮ್ಮ ವಿಶಿಷ್ಟ ದೃಷ್ಟಿಕೋನವನ್ನು ಪ್ರತಿ ಪಾದಿಸದಿದ್ದರೂ ಪ್ರತಿನಿಧೀಕರಿಸಬೇಕು ಅಥವಾ ಪ್ರತಿಬಿಂಬಿಸಬೇಕೆಂದು ಅವರ ಹಂಬಲ ವಿರಬಹುದು. ಆ ಹಂಬಲ ಸ್ವಲ್ಪ ಮಟ್ಟಿಗೆ ಅವರ ಪತ್ರಿಕೆಯ ಧೋರಣೆಯಲ್ಲಿ ಇಣಿಕಿ ನೋಡಲೂ ಬಹುದು. ಆದರೆ ಸರ್ವಸಾಮಾನ್ಯವಾಗಿ ಕನ್ನಡ ಪತ್ರಿಕೆಗಳಲ್ಲಿ ಮಾಲಕರ ಹಸ್ತಕ್ಷೇಪ ಕಾಣಸಿಗುವುದು ದುರ್ಲಭವೆಂದರೂ ಸರಿಯೇ. ಅವುಗಳ ಧೋರಣೆಗಳು ಬಹುಮಟ್ಟಿಗೆ ಸಂಪಾದಕವರ್ಗದ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತಿವೆ ಎಂದು ಧಾರಾಳವಾಗಿ ಹೇಳಬಹುದು.

ಆದರೂ ದೇಶವೀಗ ಎದುರಿಸುತ್ತಿರುವ ನವ-ಮನ್ವಂತರದ ಆಹ್ವಾನವನ್ನು ಸ್ವೀಕರಿಸಲು ಕನ್ನಡ ಪತ್ರಿಕೆಗಳು ಎಷ್ಟರ ಮಟ್ಟಿಗೆ ಸಿದ್ಧವಾಗಿವೆ ಎಂಬುದನ್ನು ನಿರ್ಣಯಿಸುವುದು ಕಷ್ಟ. ಪತ್ರಿಕೆಗಳು ಕೇವಲ ಸುದ್ದಿಸಮಾಚಾರಗಳ ವಾಹಕಗಳಾಗಿಯೇ ಉಳಿಯುವುದು ಅಸಾಧ್ಯ. ಏಕೆಂದರೆ ರೇಡಿಯೋ ಮತ್ತು ಟೆಲಿವಿಜನ್‌ಗಳು ಅವುಗಳೊಡನೆ ಪೈಪೋಟಿಗೆ ನಿಲ್ಲುವ ಕಾಲ ಹೆಚ್ಚು ದೂರವಿಲ್ಲ. ವಿದೇಶಗಳಲ್ಲೂ ಪತ್ರಿಕೆಗಳು ಅತಿ ರಂಜನೆಯ ಮತ್ತು ಹಾರಿಕೆಯ ಸುದ್ದಿಗಳನ್ನೂ, ವಿಷಯಗಳನ್ನೂ ಪ್ರಕಟಿಸಿ ಹೇಗಾದರೂ ಬದುಕಲು ಯತ್ನಿಸುತ್ತಿವೆ. ಇಂಗ್ಲೆಂಡಿನಲ್ಲಿಯಂತೂ ಆರೋಪಮುಕ್ತರೆಂದು ನ್ಯಾಯಾಲಯಗಳಲ್ಲಿ ತೀರ್ಮಾನಿಸಲ್ಪಟ್ಟ ಅಪರಾಧಿಗಳ ರಸಪೂರ್ಣವಾದ ಆತ್ಮಕಥನಗಳನ್ನು ಪ್ರಕಟಿಸುವ ರೂಢಿಯನ್ನು ಪತ್ರಿಕೆಗಳು ಆಚರಣೆಗೆ ತಂದು ಓದುಗರ ಕೆಳಮಟ್ಟದ ಆಸಕ್ತಿಗಳನ್ನು ಕೆರಳಿಸತೊಡಗಿವೆ. ಯುದ್ಧದ ಸುದ್ದಿ, ಜಾರಚೋರರ ಕಥೆಗಳು ಜನಪ್ರಿಯವಾದವುಗಳೆಂಬುದು ನಮ್ಮಲ್ಲಿ ಹಳೆಯ ಮಾತು. ಈ ಹಳೆಯ ಔಷಧಿಯನ್ನೇ ಹೊಸ ಬಾಟಲಿಗಳಲ್ಲಿ ಪತ್ರಿಕೆಗಳು ಓದುಗರ ಮೇಲೆ ಪ್ರಯೋಗಿಸತೊಡಗಿರುವುದು ಆಶ್ಚರ್ಯವೇನೂ ಅಲ್ಲ.

ಸಮಾಜದ ದುಷ್ಟಪ್ರವೃತ್ತಿಗಳನ್ನು ನಿವಾರಿಸುವುದರಲ್ಲಿ ಪತ್ರಿಕೆಗಳು ಸಮರ್ಥ ಪಾತ್ರವನ್ನು ವಹಿಸಬಲ್ಲವು. ಉದಾಹರಣೆಗೆ ನಮ್ಮ ನಾಡಿನಲ್ಲಿ ಸರ್ವತ್ರ ವ್ಯಾಪಿಸಿದೆ ಎನ್ನಲಾಗುವ ಅಧಿಕಾರದ ದುರುಪಯೋಗ, ಭ್ರಷ್ಟಾಚಾರ, ಪಕ್ಷಪಾತಗಳನ್ನು ಪತ್ರಿಕಾ ಪ್ರಕಟಣೆಯ ಭಯವು ತಡೆಗಟ್ಟಬಲ್ಲುದಲ್ಲದೆ, ನಿವಾರಿಸಲೂ ಬಲ್ಲದು. ಇಂಥ ಚಳವಳಿಗಳಲ್ಲಿ ಭಾಗವಹಿಸುವ ಪತ್ರಿಕೆಗಳ ಮೇಲೆ, ಪತ್ರಿಕಾಕರ್ತರ ಮೇಲೆ ದುಷ್ಟ ಶಕ್ತಿಗಳು ಗದೆ ಎತ್ತಿದ ಪ್ರಸಂಗಗಳು ಅಮೆರಿಕದ ಪತ್ರಿಕೋದ್ಯಮದ ಇತಿಹಾಸದಲ್ಲಿ ಕಂಡುಬರುತ್ತಿವೆ. ಭಾರತೀಯ ಪತ್ರಿಕೆಗಳ ಮೇಲೂ ಆಗಾಗ ಹಲ್ಲೆ ನಡೆಸಿದ ಸುದ್ದಿಗಳು ಬರುತ್ತಿವೆ. ಒಂದು ವೈದ್ಯಶಾಲೆಗೆ ಸಂಬಂಧಿಸಿದ ಆಸ್ಪತ್ರೆಯಲ್ಲಿ ಒಬ್ಬ ರೋಗಿಗೆ ಯೋಗ್ಯವಾದ ಚಿಕಿತ್ಸೆಯನ್ನು ನೀಡದೆ ವೈದ್ಯರು ಕರ್ತವ್ಯಚ್ಯುತರಾದರೆಂದು ವರದಿಯನ್ನು ಇಂದೂರಿನ ಪತ್ರಿಕೆಯೊಂದು ಪ್ರಕಟಿಸಿದುದನ್ನು ಅಲ್ಲಿನ ವೈದ್ಯಕೀಯ ವಿದ್ಯಾರ್ಥಿಗಳು ಸಶಸ್ತ್ರವಾಗಿ ಪ್ರತಿಭಟಿಸಿದರೆಂಬ ಸುದ್ದಿ ತೀರ ಇತ್ತೀಚೆಗಿನದು.

ಕನ್ನಡದ ಪತ್ರಿಕೆಗಳು ಇಂಥ ಸಮಾಜದ ದುಷ್ಟಶಕ್ತಿಗಳ ಮೇಲೆ ಪರಿಣಾಮಕಾರಿಯಾದ ಚಳವಳವನ್ನು ನಡೆಸಿರುವುದು ಬಹಳ ಕಡಿಮೆ. ಆದರೆ ಅಧಿಕಾರಿವುಳ್ಳವರ ಮತ್ತು ಸಂಪತ್ತುಳ್ಳವರ ಮುಖಪತ್ರಗಳಾಗಿ ಕನ್ನಡ ಪತ್ರಿಕೆಗಳು ಪರಿವರ್ತನೆಗೊಳ್ಳದಿರುವುದು ಆಶಾದಾಯಕ ಸಂಗತಿ. ಅಂತೆಯೇ ಪ್ರಸರಣದ ಇಲ್ಲವೇ ವಾಣಿಜ್ಯ ಲಾಭದ ಪ್ರಲೋಭನದಿಂದ ಅವು ತಮ್ಮ ಶುಚಿ-ರುಚಿಗಳನ್ನು ಬಲಿಗೊಟ್ಟಿಲ್ಲವೆಂಬುದೂ ಅಭಿಮಾನಪೂರ್ವಕವಾಗಿ ಒಪ್ಪತಕ್ಕ ವಿಷಯ.

ಆದರೂ ಸತ್ಯದ ದಾರಿ ಕಠಿನವಾದುದೆಂಬಂತೆ ನಮ್ಮ ಪತ್ರಿಕೆಗಳು ಇನ್ನೂ ಹೆಚ್ಚು ನಿರ್ದಾಕ್ಷಿಣ್ಯದಿಂದ ಸಮಾಜದ ವಿಘಾತುಕ ಶಕ್ತಿಗಳನ್ನು ಹೊರದಬ್ಬಲು ಯತ್ನಿಸುವುದು ವಿಹಿತವಿದೆ. ಪ್ರಜಾಪ್ರಭುತ್ವದಿಂದ ನಮಗೆ ವರದಾನವಾಗಿ ಬಂದಿರುವ ದೇಶದ ಆಡಳಿತ ಸಂಸ್ಥೆಗಳು, ಸ್ಥಳೀಕ ಸಂಸ್ಥೆಗಳು ಅವುಗಳನ್ನು ನಡೆಸುವ ವ್ಯಕ್ತಿಗಳು ಅಡ್ಡದಾರಿ ಹಿಡಿಯದೆ

ಜನರ ಹಿತಾಸಕ್ತಿಗಳ ಅಭಿವೃದ್ಧಿಗಾಗಿ ದುಡಿಯುವಂತೆ ಮಾಡುವುದರಲ್ಲಿ ನಮ್ಮ ಪತ್ರಿಕೆಗಳು ಇನ್ನೂ ಸಮರ್ಥವಾದ ರೀತಿಯಲ್ಲಿ ದುಡಿಯಬೇಕಿದೆ. ವ್ಯಕ್ತಿಗಳ ಕಪಟತನ, ವಂಚನೆ, ಕ್ರೌರ್ಯ, ಮುಂತಾದ ದೋಷಗಳನ್ನು ಬಚ್ಚಿಟ್ಟು ಕೇವಲ ಅವರ ವ್ಯಕ್ತಿಪೂಜೆಯಲ್ಲಿ ನಿರತವಾಗುವ ಸಂದರ್ಭಸಾಧಕ ಪ್ರವೃತ್ತಿಯು ಯಾವ ಪತ್ರಿಕೆಗೂ ಶೋಭಿಸದು.

ಪತ್ರಿಕೆಗಳ ಸ್ವಂತ ನೀತಿ ಮತ್ತು ಧೋರಣೆಗಳ ಬಗ್ಗೆ ಅತಿ ಮಹತ್ವವನ್ನು ಕೊಡುವುದೂ ಸರಿಯಲ್ಲ. ಮುಖ್ಯವಾಗಿ ಚುನಾವಣೆಗಳ ಕಾಲದಲ್ಲಿ ಪತ್ರಿಕೆಗಳು ವ್ಯಕ್ತಪಡಿಸುವ ಅಭಿಪ್ರಾಯಗಳು ಸಾಮಾನ್ಯ ಮತದಾರರ ಅಭಿಪ್ರಾಯಕ್ಕೆ ವಿರುದ್ಧವಾಗಿರುತ್ತವೆ ಎಂಬುದು ಇತ್ತೀಚೆಗಿನ ಚುನಾವಣೆಗಳ ಫಲಿತಾಂಶಗಳಲ್ಲಿ ವ್ಯಕ್ತವಾಗುತ್ತದೆ. ಪತ್ರಿಕೆಗಳ ಪಕ್ಷಪ್ರೇಮವು ಅವುಗಳ ದೊಡ್ಡ ದೌರ್ಬಲ್ಯವೆಂದೇ ಹೇಳಬೇಕು. ಅಂದರೆ ಕನ್ನಡ ಪತ್ರಿಕೆಗಳು ನಿಷ್ಪಕ್ಷವಾಗಿರಲು ಸಾಕಷ್ಟು ಯತ್ನಿಸುತ್ತಿವೆ ಎಂಬುದು ಸ್ವಾಗತಾರ್ಹವಾದ ವಿಷಯವಾಗಿದೆ.

ಕನ್ನಡ ಪತ್ರಿಕೆಗಳ ಪ್ರಸಾರವು ಸುಧಾರಿಸದಿರುವುದು ಕಳವಳದ ಅಂಶವೇ ಆಗಿದೆ. ಎರಡು ಕೋಟಿಗಿಂತಲೂ ಹೆಚ್ಚು ಕನ್ನಡಿಗರಿರುವ ನಾಡಿನಲ್ಲಿ ಒಂದು ಲಕ್ಷದಷ್ಟು ಪ್ರಸಾರವಾಗುವ ಪತ್ರಿಕೆಯೊಂದಿಲ್ಲವೆಂಬುದು ಗಮನಾರ್ಹ. ಕನ್ನಡಿಗರಿಗಿಂತಲೂ ಕಡಿಮೆ ಜನಸಂಖ್ಯೆಯುಳ್ಳ ಕೇರಳದಲ್ಲಿ ಒಂದು ಲಕ್ಷ ಪ್ರಸಾರವನ್ನು ಮೀರಿಸಿದ ದಿನಪತ್ರಿಕೆಗಳ ಸಂಖ್ಯೆ ನಾಲ್ಕು. ಕನ್ನಡಿಗರು ಪತ್ರಿಕೆಗಳನ್ನು ಓದುವ ಅಭ್ಯಾಸವನ್ನು ಸಾಕಷ್ಟು ಬೆಳೆಸಿಕೊಂಡಿಲ್ಲವೆಂದು ಹೇಳಲಾಗದು; ಆದರೆ ಕನ್ನಡೇತರ ಭಾಷೆಯ ಪತ್ರಿಕೆಗಳ ಪ್ರಸಾರ ಕನ್ನಡ ನಾಡಿನಲ್ಲಿ ಕನ್ನಡ ಪತ್ರಿಕೆಗಳಷ್ಟೇ ಇದೆಯೆಂದರೆ ತಪ್ಪಾಗಲಾರದು. ಇಂಥ ಕನ್ನಡೇತರ ಪತ್ರಿಕೆಗಳ ಓದುಗರನ್ನು ತಮ್ಮೆಡೆಗೆ ಆಕರ್ಷಿಸುವ ಯತ್ನವನ್ನು ಕನ್ನಡ ಪತ್ರಿಕೆಗಳು ಮಾಡಬೇಕಾಗಿದೆ. ತಮ್ಮಲ್ಲಿ ಇಲ್ಲದುದು ಕನ್ನಡೇತರ ಪತ್ರಿಕೆಗಳಲ್ಲಿ ಏನಿದೆ, ಸುಶಿಕ್ಷಿತಕನ್ನಡಿಗರೇ ಕನ್ನಡ ಪತ್ರಿಕೆಗಳೆಂದರೆ ಏಕೆ ಮೂಗುಮುರಿದುಕೊಳ್ಳುತ್ತಾರೆ ಎಂಬ ಬಗ್ಗೆ ಕನ್ನಡ ಪತ್ರಿಕಾ ಅಧ್ವರ್ಯುಗಳು ಸಂಶೋಧನೆ ಮಾಡಬೇಕು. ಏಕೆಂದರೆ ಪ್ರಸಾರವನ್ನು ಬೆಳೆಸಿಕೊಳ್ಳಲಾರದ ಪತ್ರಿಕೆಗಳು ತಮ್ಮ ಪ್ರಭಾವವನ್ನು ಸಮಾಜದ ಮೇಲೆ ಸಮರ್ಪಕವಾಗಿ ಬೀರಲಾರವು. ಪತ್ರಿಕೆಗಳು ಉತ್ತಮಗೊಳ್ಳಬೇಕಾದರೆ ಅವುಗಳಿಗೆ ಹೇರಳ ಸಂಪಾದನೆ ಬೇಕು; ಸಂಪಾದನೆ ಬೇಕಾದರೆ ಹೆಚ್ಚು ಪ್ರಮಾಣದ ಪ್ರಸಾರ ಬೇಕು; ಪ್ರಸಾರ ಹೆಚ್ಚಬೇಕಾದರೆ ಪತ್ರಿಕೆಗಳ ಗುಣಮಟ್ಟ ಉತ್ತಮಗೊಳ್ಳಬೇಕು. ಇಂಥ ವಿಷಮ ವರ್ತುಲದೊಳಗೆ ಸಿಲುಕಿರುವ ಕನ್ನಡ ಪತ್ರಿಕೆಗಳು, ಆದರಿಂದ ಹೇಗಾದರೂ ಪಾರಾದರೆ ಅವುಗಳು ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ಶಕ್ತವಾಗಬಲ್ಲವು ಎಂಬುದು ನಿಸ್ಸಂದೇಹ.

# ಆದರ್ಶಗಳ ಪ್ರತಿಪಾದನೆ ಪತ್ರಿಕೆಗಳ ಕೆಲಸವಲ್ಲ

ಚರ್ಚೆಯಲ್ಲಿ

ಎನ್. ಎಸ್. ರಾಮುಪ್ರಸಾದ

ಸನ್ಮಾನ್ಯ ಅಧ್ಯಕ್ಷರೇ, ಶ್ರೀ ಸೇವ ನಮಿರಾಜ ಮಲ್ಲರು ಕೊಟ್ಟಿರತಕ್ಕ ಲೇಖನ, ಪತ್ರಿಕೆಗಳ ಬದಲಾಗುತ್ತಿರುವ ಮೌಲ್ಯ. ಇದರ ಕುರಿತು ನನ್ನದೇ ಆದಂಥ ಕೆಲವು ಪ್ರಶಂಸೆಯೂ ಇದೆ, ಅಭಿಪ್ರಾಯ ಭೇದವೂ ಇದೆ. ಅವರು ಮೊದಲು ಕನ್ನಡ ಪತ್ರಿಕೆಗಳ ವಿತರಣೆ ತೀವ್ರಗತಿಯಲ್ಲಿ ಆದಷ್ಟೂ ವ್ಯಾಪಕವಾಗಿ ಆಗುತ್ತಿದೆ ಎಂದು ಒಂದು ಮಾತು ಹೇಳಿ, ಅವುಗಳನ್ನು ಓದುತ್ತಿರುವ ಇಂದಿನ ಸುಶಿಕ್ಷಿತರ ಸಾಮಾನ್ಯ ಜ್ಞಾನ ಹಿಂದಿನ ಕಾಲಕ್ಕಿಂತ ಹೆಚ್ಚಾಗಿದೆ ಎನ್ನುವುದಕ್ಕೆ ಆಧಾರವಿಲ್ಲ ಎಂದು ಹೇಳಿದ್ದಾರೆ. ನಾನು ಇದನ್ನು ಒಪ್ಪಲಾರೆ. ಬದುಕೇ ಸಣ್ಣದಾಗಿ, ರಾಜಕೀಯ ವ್ಯಾಪಾರಗಳು ಬಹಳ ಕಡಮೆ ಪ್ರಮಾಣದಲ್ಲಿ ನಡೆಯುತ್ತಿದ್ದು, ವಿಜ್ಞಾನ, ವಾಣಿಜ್ಯ ಮೊದಲಾದ ಬದುಕೆಲ್ಲ ಹೆಚ್ಚು ಪ್ರಮಾಣದಲ್ಲಿ ಬೆಳೆಯದೆ ಇದ್ದಾಗ ಯಾವ ತೆರನಾದ ಪತ್ರಿಕೆಗಳನ್ನು ಪ್ರಕಟಮಾಡುತ್ತಿದ್ದರೋ ಅದನ್ನು ಓದುತ್ತಿದ್ದವರಿಗಿಂತ, ಈಗ ಇದೆಲ್ಲ ಬೆಳೆದುಬಂದಿರುವ ಯುಗದಲ್ಲಿ ಏನು ಪ್ರಕಟಣೆ ಮಾಡುತಿದ್ದೇವೆಯೋ ಅವುಗಳನ್ನು ಓದುವ, ಓದಲು ಬಯಸುವ, ಓದುಗರ ಸಂಖ್ಯೆ, ಸುಶಿಕ್ಷಿತರ ಸಂಖ್ಯೆ ಹೆಚ್ಚಾಗಿದೆ ಎಂದು ನನ್ನ ಅಭಿಪ್ರಾಯ.

ಇನ್ನು ಪತ್ರಿಕೆಗಳಲ್ಲಿ ಬರತಕ್ಕ ಕುತೂಹಲಕರವಾದ ಮಾತುಗಳು. ಇದರ ಬಗ್ಗೆ ಶ್ರೀ ಮಲ್ಲರು ಕೆಲವು ಟೀಕೆಗಳನ್ನು ಮಾಡಿದ್ದಾರೆ. ಮಾವೊ ಬದುಕಿದ್ದಾನೆ ಎಂದು ಒಂದು ಕಡೆ ವರದಿ ಬಂದರೆ, ಆತ ಬದುಕಿಲ್ಲ ಎನ್ನುವ ವರದಿ ಇನ್ನೊಂದು ಕಡೆ ಬಂದಿರುತ್ತದೆ ಎಂದು ಟೀಕೆ ಮಾಡಿದ್ದಾರೆ. ಈ ಸುದ್ದಿಯನ್ನು ತರುವಾತ ಮೂಲತಃ ವರದಿಗಾರ. ಸಂಪಾದಕೀಯವನ್ನು ಬಿಟ್ಟರೆ, ಒಂದು ಪತ್ರಿಕಾಲಯದಲ್ಲಿ ಮಾಡುವ ಕಾರ್ಯವೆಲ್ಲ ವರದಿಗಾರನದೇ. ನಾನಾ ಕಡೆಯಿಂದ ವರದಿಗಳು ಬಂದು ಪತ್ರಿಕಾಲಯ ಸೇರುತ್ತವೆ. ಅವುಗಳನ್ನು ಬಹಳಮಟ್ಟಿಗೆ ಅನುವಾದ ಮಾಡಲಾಗುತ್ತದೆ. ನಮ್ಮ ದೇಶದಲ್ಲಿ ಆಗಿರತಕ್ಕ ಒಂದು ಘಟನೆಯನ್ನು ನೆನಪು ಮಾಡಿಕೊಳ್ಳುವುದಾದರೆ, ಸುಭಾಸಚಂದ್ರ ಬೋಸರು ಸತ್ತು ಎರಡು ದಶಕಕ್ಕಿಂತ ಹೆಚ್ಚು ಕಾಲವಾಯಿತು. ಇಷ್ಟಾದರೂ ಕೂಡ ಆಗೊಮ್ಮೆ, ಈಗೊಮ್ಮೆ, ವಾದ ತಲೆದೋರುತ್ತಲೇ ಇರುತ್ತದೆ. ಸಂನ್ಯಾಸಿಯಾಗಿದ್ದಾರೆ, ಆ ಮರದಡಿ ಇದ್ದಾರೆ, ಅದನ್ನು ಕಂಡವನು ನಾನು ಎಂದು ಯಾರಾದರೂ ಒಬ್ಬರು ಸಾಕಾದಷ್ಟು ದೃಢವಾಗಿ ಮಾತನಾಡಿದಾಗ ಅದರ ನ್ಯಾಯವನ್ನು ತೂಕ ಮಾಡುವುದು ವರದಿಗಾರನ ಕೆಲಸವಲ್ಲ. ಸುದ್ದಿ ತನಗೆ ಮುಟ್ಟಿದೊಡನೆ ತಾನು ಯಾರೊಡನೆ ಆ ಸುದ್ದಿಯನ್ನು ಹಂಚಿ

ಕೊಳ್ಳಬೇಕೋ ಅದನ್ನು ಅವರಿಗೆ ಹಂಚಿಬಿಡುವುದು ಆತನ ಕೆಲಸ. ಇದರಲ್ಲಿ ವರದಿಗಳ ಮೇಲೆ ಜನಸಾಮಾನ್ಯರಿಗೆ ಇರುವ ಅವಿಶ್ವಾಸ ವಿಶ್ವವ್ಯಾಪಿ ಎನ್ನುವುದರ ಬಗ್ಗೆ ನನ್ನ ಆಕ್ಷೇಪಣೆ ಇಷ್ಟೆ. ಅವಿಶ್ವಾಸ ಹೊಂದಬೇಕಾಗಿಲ್ಲ. ಸುದ್ದಿ ಮುಟ್ಟಿದೊಡನೆ, ಇಂಥ ಗುಹೆಯಲ್ಲಿ ಸುಭಾಸಚಂದ್ರ ಬೋಸರು ಅಡಗಿದ್ದಾರೆ, ನಾವು ಇದನ್ನು ಕಂಡಿದ್ದೇವೆ ಎಂದು ತಿಳಿದಾಗ ಅದನ್ನು ವರದಿ ಮಾಡುವುದು ಪತ್ರಿಕಾಕರ್ತನ ಕೆಲಸ.

ಸ್ವಾತಂತ್ರ್ಯೋತ್ತರದ ಈ ಎರಡು ದಶಕದಲ್ಲಿ ಕನ್ನಡ ಪತ್ರಿಕೆಗಳು ಆದರ್ಶಗಳ ಅರಸುವಿಕೆಯಲ್ಲಿ ಅಥವಾ ಆದರ್ಶಗಳನ್ನು ಹಿಂಬಾಲಿಸುವಲ್ಲಿ ಅಷ್ಟೊಂದು ಕೃತಾರ್ಥವಾಗಿವೆ ಎನ್ನಲು ಸಾಧ್ಯವಿಲ್ಲ ಎಂದು ಮಲ್ಲರು ಹೇಳಿದ್ದಾರೆ. ಇನ್ನೂ ಮುಂದೆ ಅವರ ಲೇಖನದಲ್ಲಿ ಒಂದು ಮಾತನ್ನು ಅವರೇ ಹೇಳಿದ್ದಾರೆ; ಪತ್ರಿಕೆಗಳ ಗಾತ್ರ ದೊಡ್ಡದಾಗಿದೆ, ಅದು ಒಂದು ಉದ್ಯಮ ಎನ್ನುವ ಸ್ವರೂಪವನ್ನು ತೆಗೆದುಕೊಂಡಿದೆ ಎಂದು. ಈ ಮಾತನ್ನು ಒಪ್ಪಿಕೊಳ್ಳುವುದಾದರೆ ಒಂದು ಕಾಲದಲ್ಲಿ ಆದರ್ಶಕ್ಕಾಗಿ ಬದುಕಬೇಕೆಂದು ಹೊರಟ ಕಾರಂತರು ಪತ್ರಿಕೆ ನಡೆಸಿದಾಗ, ಪತ್ರಿಕಾಕರ್ತರ ವೃತ್ತಿ, ಪ್ರವೃತ್ತಿ ಎರಡೂ ಒಂದೇ ಆಗಿದ್ದಾಗ, ಅಂಥ ಗುಣಗಳೆಲ್ಲ ಅವನಲ್ಲಿ ಆರೋಪ ಮಾಡಬಹುದಾಗಿತ್ತು. ಈಗ ಪತ್ರಿಕಾಕರ್ತನ ವೃತ್ತಿಯೇ ಬೇರೆ ಪ್ರವೃತ್ತಿಯೇ ಬೇರೆ, ಪತ್ರಿಕಾ ಮಾಲೀಕರ ವೃತ್ತಿಯೇ ಬೇರೆ, ಪ್ರವೃತ್ತಿಯೇ ಬೇರೆ. ಆದ್ದರಿಂದ ಆದರ್ಶಗಳ ಪ್ರತಿಪಾದನೆ ಪತ್ರಿಕೆಗಳ ಕೆಲಸವಲ್ಲ. ಯಾವುದಾದರೂ ಒಂದು ಆದರ್ಶವನ್ನು, ಒಂದು ಮೌಲ್ಯವನ್ನು ಎತ್ತಿ ಹಿಡಿಯಬೇಕು, ಇಲ್ಲ, ಪತ್ರಿಕೆ ಇಂಥದ್ದು ಹೇಳಬೇಕು, ಇಂಥದ್ದು ಹೇಳಬಾರದು, ಇದಕ್ಕೆ ಕಟ್ಟುಪಾಡು ಹಾಕಬೇಕು ಎನ್ನುವುದಕ್ಕಿಂತ ಯಾವುದು ನಡೆದಿದೆ ಅದನ್ನು ಯಥಾವತ್ತಾಗಿ ಹೇಳುವುದು ಪತ್ರಿಕೆಯ ಕೆಲಸವಾಗಬೇಕು. ಆದರ್ಶದ ಬಗ್ಗೆ ಅಷ್ಟೊಂದು ನನ್ನ ಮನಸ್ಸಿಗೆ ಒಪ್ಪಿಗೆ ಆಗುವುದಿಲ್ಲ.

ಪತ್ರಿಕೆಗಳ ಧೋರಣೆಗಳು ಬಹುಮಟ್ಟಿಗೆ ಸಂಪಾದಕ ವರ್ಗದ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತವೆ ಎಂದು ಧಾರಾಳವಾಗಿ ಹೇಳಬಹುದು ಎಂದು ಮಲ್ಲರು ಹೇಳಿದ್ದಾರೆ ಪತ್ರಿಕಾಕರ್ತನಾಗಿ ನಾನು ಈ ಮಾತನ್ನು ಒಪ್ಪುವುದಿಲ್ಲ. ಬಹಳಮಟ್ಟಿಗೆ ಮೇಲಿನಿಂದ ಬಂದ ಆಜ್ಞೆಯನ್ನು ಅನುಸರಿಸಿ ಅವು ನಡೆಯುತ್ತವೆ. ಅದು ಯಾವಾಗ ಪತ್ರಿಕಾ ಒಡೆಯರ ಹಿತಾಸಕ್ತಿಯನ್ನು ಮುಟ್ಟುವುದಿಲ್ಲ, ಅಲ್ಲಿಯ ವರೆಗೆ ಮೇಲಿನಿಂದ ನಿರೂಪ ಬರುವುದಿಲ್ಲ. ಇಲ್ಲಿ ನಡೆದಂಥ ಗೋಷ್ಠಿ ಕುರಿತು ವರದಿ ಮಾಡುವುದಕ್ಕೆ ಪತ್ರಿಕಾ ಒಡೆಯರಿಂದ ನಿಜವಾದ ಆತಂಕವಿಲ್ಲ. ಆದರೆ ಅದೇ ಹೊರಗಡೆ ಬೇರೆ ಯಾವುದಾದರೂ ಒಂದು ಸಮಾರಂಭ ನಡೆದರೆ, ಅದು ಯಾರನ್ನು ಕುರಿತದ್ದು, ಯಾರು ಅದರಲ್ಲಿ ಭಾಗವಹಿಸಿದವರು ಎನ್ನುವುದು ಪರಿಗಣನೆಗೆ ಬರುತ್ತದೆ. ಇದಕ್ಕೆಲ್ಲ ಒಂದು ತೆರನಾದ ಮಿತಿ ಇದೆ, ಅದನ್ನು ಮಾಡಬೇಕು, ಮಾಡಬಾರದು ಎಂದು ಇದೆ.

ರೇಡಿಯೋ ಟೆಲಿವಿಷನ್‌ಗಳು ಪತ್ರಿಕೆಗಳೊಡನೆ ಪೈಪೋಟಿಗೆ ನಿಲ್ಲುವ ಕಾಲ ಹೆಚ್ಚು ದೂರವಿಲ್ಲ ಎಂದು ಮಲ್ಲರು ಅಭಿಪ್ರಾಯಪಟ್ಟಿದ್ದಾರೆ. ನನಗೆ ಆ ಭೀತಿ ಇಲ್ಲ. ನಾನು ಕೇಳಿರುವ ಮಟ್ಟಿಗೆ ಟೆಲಿವಿಷನ್, ರೇಡಿಯೋಗಳು ವಿದೇಶಗಳಲ್ಲಿ ಕೂಡ ಪತ್ರಿಕಾ ವ್ಯಾಪ್ತಿ ಮತ್ತು ಪ್ರಸಾರಕ್ಕೆ ಯಾವ ಅಡ್ಡಿಯನ್ನೂ ಮಾಡಿಲ್ಲ. ನಮ್ಮಲ್ಲಿ ಬಹಳ ಮಂದಿ ರೇಡಿಯೋ

ಹೊಂದಿದ್ದೇವೆ. ಆದರೆ ನಮ್ಮ ಬದುಕು, ವ್ಯಾಪಾರಗಳ ಕಾರಣದಿಂದ ಎಷ್ಟು ಜನಕ್ಕೆ ಅದು ಸುದ್ದಿಯನ್ನು ಪ್ರಸಾರ ಮಾಡುವ ಕಾಲದಲ್ಲಿ ಕುಳಿತುಕೊಂಡು ಕೇಳುವ ವ್ಯವಧಾನ ವಿರುತ್ತದೆ? ನಮಗೆ ಬೇಕೆಂದಾಗ ಕೈಗೆ ಸಿಕ್ಕುವುದು ಪತ್ರಿಕೆ. ಅದರಿಂದ ಸುದ್ದಿ ಸಿಕ್ಕುವು ದಕ್ಕೆ ಸಾಧ್ಯವೇ ಹೊರು ನಾವು ಬೇಕೆಂದಾಗ ಟೆಲಿವಿಷನ್‌ನಿಂದ ಸುದ್ದಿಯ ಪ್ರಸಾರಕ್ಕೆ ಸಾಧ್ಯವಿಲ್ಲ.

ಇನ್ನು ಕೆಲವು ಜಾರಚೋರರ ಕಥೆಗಳು, ಯುದ್ಧದ ಸುದ್ದಿ ಇವುಗಳ ಬಗ್ಗೆ ಮಲ್ಲರು ಕೆಲವು ಮಾತುಗಳನ್ನು ಆಡಿದ್ದಾರೆ. ಸನ್ಮಾನ್ಯ ಕಾರಂತರು ಇವುಗಳ ಬಗ್ಗೆ ತಮ್ಮದೇ ಆದ ನಿರ್ದಿಷ್ಟವಾದ ಅಭಿಪ್ರಾಯವನ್ನು ಹೊಂದಿದ್ದಾರೆ. ಅವನ್ನು ಇಲ್ಲಿ ಅವರ ಎದುರಿಗೆ ಹೇಳುವಷ್ಟು ನನಗೆ ಧೈರ್ಯವಿಲ್ಲ. ಒಂದು ಬಸ್‌ಸ್ಟಾಪಿನಲ್ಲಿ ಒಬ್ಬ ಕಂಡಕ್ಟರನಿಗೂ ಪ್ರಯಾಣಿಕನಿಗೂ ಜಗಳವಾದರೆ ನಮಗೆ ಸಂಬಂಧವಿರಲಿ, ಇಲ್ಲದೆ ಇರಲಿ ನಾವೆಲ್ಲ ಸೇರು ತ್ತೇವೆ. ಇದು ನಮ್ಮೆಲ್ಲರ ಪ್ರವೃತ್ತಿಯಾಗಿದೆ. ಗಲಭೆಗಳು, ಘರ್ಷಣೆ, ಹೋರಾಟ, ಜಗಳ ನಡೆದ ಜಾಗದಲ್ಲಿ ಜನರ ಕಿವಿ ಸ್ವಲ್ಪ ಹೋಗುತ್ತದೆ. ಅಸೆಂಬ್ಲಿ ಅಧಿವೇಶನ ನಡೆಯು ವುದು ಮಧ್ಯಾಹ್ನ ಒಂದರಿಂದ ರಾತ್ರಿ ಏಳರ ವರೆಗೆ. ಏಳು ಗಂಟೆ ಕಾಲದಲ್ಲಿ ಒಂದು ಗಂಟೆ ಮಾತ್ರ ಶೂನ್ಯವೇಳೆ ಎಂದರೆ ಜೀರೋ ಅವರ್ ಎಂದು ಇಟ್ಟುಕೊಂಡಿರುತ್ತಾರೆ. ನಮಗೆ ಸಿಕ್ಕತಕ್ಕ ಬಹುಪಾಲು ಸುದ್ದಿಯೆಲ್ಲ ಶೂನ್ಯವೇಳೆಯ ಗಲಾಟೆಯದು. ಬಹುಮಟ್ಟಿಗೆ ಅಸೆಂಬ್ಲಿ ನೋಡದೆ ಇರುವವರು ಈ ಮಾತನ್ನು ಅಂದುಕೊಂಡಿರಲಿಕ್ಕೇ ಸಾಕು, ಬೆಳಗಿ ನಿಂದ ಸಂಜೆಯ ವರೆಗೂ ಹೀಗೇ ಕದನವಾಡುತ್ತಾರೆಯೇ ಎಂದು. ಏಕೆಂದರೆ ಜೀರೋ ಅವರ್‌ಗೆ ಒಂದೆರಡು ಕಾಲಂನಷ್ಟು ಪ್ರಾಧಾನ್ಯತೆ ಸಿಕ್ಕಿರುತ್ತದೆ. ಬೇರೆ ಸಂದರ್ಭದಲ್ಲಿ ಕಾನ್‌ಸ್ಟಿಟ್ಯೂಷನ್ ಮೇಲೆ ನಡೆಯತಕ್ಕ ಚರ್ಚೆಯಾಗಿರಬಹುದು, ಕಾನೂನಿಗೆ ಸಂಬಂಧ ಪಟ್ಟ ಚರ್ಚೆಯಾಗುತ್ತಿರಬಹುದು. ಈ ಚರ್ಚೆ ಮೊದಲು ನಮಗೆ ಜೀರ್ಣವಾಗುವುದೇ ಬಹಳ ಕಡಿಮೆ. ನಾವು ಅದನ್ನು ಓದುಗರ ಜೊತೆಯಲ್ಲಿ ಹಂಚಿಕೊಳ್ಳಬೇಕಾದರೆ ಮತ್ತೂ ಕಷ್ಟ. ಎಷ್ಟೋ ವೇಳೆ ಇಂಥ ಮಸೂದೆ ಪಾಸಾಯಿತು ಎಂದು ಬರೆದಿರುವ ಸುದ್ದಿಯೂ ಉಂಟು.

ಹಾರುಸುದ್ದಿ, ಹೌಹಾರುಸುದ್ದಿ, ತೀರಾ ಕುತೂಹಲವನ್ನು ಉಂಟುಮಾಡತಕ್ಕ, ಕೆಟ್ಟ ಕುತೂಹಲವನ್ನು ಕೆರಳಿಸತಕ್ಕ ಸುದ್ದಿಗಳಿಗೆ ಪ್ರಾಧಾನ್ಯ ಕೊಡುತ್ತಿರುವುದು ಪತ್ರಿಕೆಗಳು ಬಹುಮಟ್ಟಿಗೆ ಓದುಗರ ದೆಸೆಯಿಂದ. ಕನ್ನಡ ಪತ್ರಿಕೆಗಳು ಸಮಾಜದ ದುಷ್ಟ ಶಕ್ತಿಗಳ ಮೇಲೆ ಪರಿಣಾಮಕಾರಿಯಾದ ಚಳುವಳಿಯನ್ನು ನಡೆಸಿರುವುದು ಬಹಳ ಕಡಿಮೆ ಎಂದು ಮಲ್ಲರು ಹೇಳಿದ್ದಾರೆ. ಘೇರಾವೊ ಅಂತಹ ಚಟುವಟಿಕೆಯನ್ನು ಯಾವ ಪತ್ರಿಕೆಯೂ ಬೆಂಬ ಲಿಸಿದ್ದು ನಾನು ಕಾಣೆ. ಹಾಗೆಯೇ ವಿದ್ಯಾರ್ಥಿಗಳ ಚಳುವಳಿ, ಒಂದು ಮಕ್ಕಳ ಚಳುವಳಿಯ ಬಗ್ಗೆ ವರದಿ ಬರುವಾಗ ಎಲ್ಲ ಸುದ್ದಿ ಸತ್ಯವಾಗಿ ಬರುತ್ತದೆ ಎಂದು ತಿಳಿದುಕೊಳ್ಳಬೇಡಿ, ಬಹಳ ಎಚ್ಚರಿಕೆಯಿಂದ ಬರೆಯಬೇಕು. ಇಲ್ಲದೆ ಹೋದರೆ ಪತ್ರಿಕಾಲಯ ಉಳಿಯುವು ದಿಲ್ಲ. ಬೆಂಗಳೂರಿನ ಒಂದು ಪತ್ರಿಕೆ ಒಂದೆರಡು ದಿನ ನಿಷ್ಪಕ್ಷಪಾತವಾಗಿ ವರದಿ ಕೊಡುವು ದಕ್ಕೆ ಪ್ರಯತ್ನಪಟ್ಟಾಗ ಆ ವರದಿಗಾರರ ಮೇಲೆ ಹಲ್ಲೆ ನಡೆಯುವ ವರೆಗೂ ಹೋಯಿತು. ಆ ಸಂದರ್ಭದಲ್ಲಿ ತನ್ನ ಜೀವ ಉಳಿಸಿಕೊಳ್ಳುವುದಕ್ಕೆ ಅವನು ಪ್ರಯತ್ನ ಮಾಡುತ್ತಾನೆ.

ಕೆಟ್ಟದ್ದು ಕಂಡಾಗ, ಘೇರಾವೊ ಪ್ರವೃತ್ತಿ ಕಂಡಾಗ ಪತ್ರಿಕೆಗಳು ಬಹಳಮಟ್ಟಿಗೆ ಟೀಕಿಸಿವೆ. ಇದಕ್ಕಿಂತ ಹೆಚ್ಚು ಏನು ಮಾಡುವುದಕ್ಕೆ ಸಾಧ್ಯ ?

ಶ್ರೀ ಮಲ್ಲರು ಈ ಲೇಖನದಲ್ಲಿ ಬದಲಾಗುತ್ತಿರುವ ಮೌಲ್ಯಗಳು ಎಂದು ತೆಗೆದು ಕೊಂಡು ಭಾಷಾ ಮೌಲ್ಯದ ಬಗ್ಗೆ ಹೇಳಿಯಾರು ಎಂದು ನಿರೀಕ್ಷೆ ಮಾಡಿದ್ದೆ. ಕನ್ನಡ ಪತ್ರಿಕೆ ಗಳ ಭಾಷಾ ಮೌಲ್ಯ ಹೇಗೆ ಬದಲಾಗಿದೆ, ಬದಲಾಯಿಸುತ್ತಿದೆ ಎಂದು ಅವರು ಹೇಳ ಬೇಕು ಎಂದು ನಾನು ಕೇಳುತ್ತೇನೆ.

# ಗುಣ ಹೆಚ್ಚಿದರೆ ಪ್ರಸಾರ ಹೆಚ್ಚದು

ಗುಂಡ್ಮಿ ಚಂದ್ರಶೇಖರ ಐತಾಳ

ಶ್ರೀ ಮಲ್ಲರ ಪ್ರಬಂಧದಲ್ಲಿ ಪತ್ರಿಕೆಗಳ ಪ್ರಸಾರ ಹೆಚ್ಚಬೇಕಾದರೆ, ಪತ್ರಿಕೆಗಳ ಗುಣಮಟ್ಟ ಉತ್ತಮಗೊಳ್ಳಬೇಕು ಎನ್ನುವ ಮಾತಿದೆ. ನನ್ನ ಅಭಿಪ್ರಾಯದಲ್ಲಿ ಇದು ತದ್ವಿರುದ್ಧ. ಪ್ರಸಾರ ಹೆಚ್ಚಬೇಕಾದರೆ ಪತ್ರಿಕೆಗಳ ಗುಣಮಟ್ಟ ಕಡಿಮೆಯಾಗಬೇಕು. ಇದಕ್ಕೆ ನಮ್ಮ ಜಿಲ್ಲೆಯ ಉತ್ತಮ ಪತ್ರಿಕೆಗಳು ಹೇಗೆ ಸೋಲನ್ನು ಹೊಂದಿದುವು ಎನ್ನುವುದಕ್ಕೆ ಸಾಕ್ಷಿಗಳಿವೆ: ಕಾರಂತರ ಪತ್ರಿಕೆಗಳು ಮತ್ತು ಕಡಂಗೋಡ್ಲು ಶಂಕರಭಟ್ಟರ ಪತ್ರಿಕೆಗಳು. ಪ್ರಸಾರ ಹೆಚ್ಚಬೇಕಾದರೆ ಚಲನಚಿತ್ರ ತಾರೆಯರ ಮುಖಗಳು, ಲಕ್ಸ್ ಟಾಯಿಲೆಟ್ ಸೋಪ್ ಉಪಯೋಗಿಸಿದ ಸೌಂದರ್ಯ, ಭವಿಷ್ಯದ ಕಾಲಂ ಬರಬೇಕಾಗುತ್ತದೆ. ಕೇವಲ ಗುಣಮಟ್ಟದಿಂದ ಮಾತ್ರ ಪ್ರಸಾರ ಹೆಚ್ಚಾಗುವುದಿಲ್ಲ ಎಂದು ನನ್ನ ಅಭಿಪ್ರಾಯ.

# ಸುದ್ದಿಕೊಟ್ಟು ಕೈ ತೊಳೆದುಕೊಳ್ಳುವುದಲ್ಲ

ಸೇವ ನಮಿರಾಜ ಮಲ್ಲ

ನಾನು ಪತ್ರಿಕೆಗಳನ್ನು ಓದುವಂತಹ ಸಾಮಾನ್ಯ ವ್ಯಕ್ತಿಯ ದೃಷ್ಟಿಯಿಂದ ನನ್ನ ಪ್ರಬಂಧವನ್ನು ಮತ್ತು ನನ್ನ ವಿಚಾರವನ್ನು ಹೇಳಿದ್ದೇನೆ. ಭಾಷೆಯ ಮಟ್ಟಿಗೆ ನಮಗೆಲ್ಲ ತಿಳಿಯುವಂತಹದು ಏನೆಂದರೆ ಮಂಗಳೂರಿನ ಒಂದು ಪತ್ರಿಕೆಯಲ್ಲಿ ರವಿವಾರ ಎಂದು ಇದ್ದರೆ ಹೆಚ್ಚುಕಮ್ಮಿ ಶಿವಮೊಗ್ಗ ದಾಟುವಾಗ ಅದು ಭಾನುವಾರವಾಗುತ್ತದೆ. ಧಾರವಾಡ ಮುಟ್ಟುವಾಗ ಹೆಚ್ಚುಕಮ್ಮಿ ಅದು ಆದಿತ್ಯವಾರವಾಗುತ್ತದೆ. ಈ ತರಹ ವಾರದ ಮಟ್ಟಿಗೇ ಸಾಮಾನ್ಯವಾದ ಒಂದು ಶಬ್ದವನ್ನು, ಶೈಲಿಯನ್ನು ರೂಪಿಸಲಿಕ್ಕೆ ಈವರೆಗೆ ನಮ್ಮ ಕನ್ನಡ ಪತ್ರಿಕಾಕರ್ತರು ಯತ್ನಿಸಿಲ್ಲ ಎಂಬುದು ಸ್ಪಷ್ಟ. ಇವತ್ತಿನ ಕಾರ್ಯನಿರತ ಪತ್ರಿಕಾಕರ್ತರು ಮತ್ತು ಆ ಕ್ಷೇತ್ರದಲ್ಲಿ ಮುಖಂಡರಾದಂತಹರು ಒಂದು ಕಡೆ ಕಲೆತು, ಇದರ ಬಗ್ಗೆ ಸಾಮಾನ್ಯವಾದ ಒಂದು ನಿರ್ಣಯ ತೆಗೆದುಕೊಳ್ಳಬೇಕಾಗಿದೆ. ಜನಸಾಮಾನ್ಯರನ್ನು ನಾವು ಮೆಚ್ಚಿಸುತ್ತೇವೆ, ಜನಸಾಮಾನ್ಯರಿಗೆ ಆಹಾರವಾಗಿ ಈ ಸುದ್ದಿಗಳನ್ನು ಕೊಡುತ್ತೇವೆ, ನಮಗೆ ತಿಳಿದಂತಹ ಭಾಷೆಯಲ್ಲಿ ನಮ್ಮ ಕೈಯಿಂದ ಕಳುಹಿಸಿ ನಮ್ಮ ಕೈ ತೊಳೆದುಕೊಳ್ಳುತ್ತೇವೆ ಎಂಬ ಧೋರಣೆ ಒಳ್ಳೆಯದಲ್ಲ ಎಂಬುದು ನನ್ನ ಭಾವನೆ. ಟೆಲಿಪ್ರಿಂಟರಿನಲ್ಲಿ ಬಂದದ್ದನ್ನು ಕತ್ತರಿಸಿ ಭಾಷಾಂತರ ಮಾಡುವವರನ್ನು ಪತ್ರಿಕಾಕರ್ತರೆಂದು ಕರೆಯಲಿಕ್ಕೆ ಕೂಡದು. ಒಂದೋ ಅವರನ್ನು ಭಾಷಾಂತರಕಾರರು ಎಂದು ಹೇಳಬೇಕು, ಇಲ್ಲವೇ ಗುಮಾಸ್ತೆಯರು ಎಂದು ಹೇಳಬೇಕು. ನಿಜವಾದ ಪತ್ರಿಕಾಕರ್ತರು ಬಂದದ್ದನ್ನು, ನಡೆದದ್ದನ್ನು ಯಾವ ಸುದ್ದಿ ಬದಲಾಗುತ್ತಿರುವ ಮೌಲ್ಯಗಳಿಗೆ ಅನುಗುಣವಾಗಿದೆ, ಸಮಾಜ ಪೋಷಕವಾಗಿದೆ, ಶುಚಿರುಚಿಯಿಂದ ಕೂಡಿದೆ ಎಂಬುದನ್ನು ನಿರ್ಣಯಿಸುವಂತಹ ನಿಷ್ಠುರ ಮನೋಭಾವವನ್ನು ಪಡೆದಿರಬೇಕು. ಇಂತಹ ಪತ್ರಿಕೋದ್ಯಮಿ ಯಾವುದೇ ಧರ್ಮಯುದ್ಧದ ಮುಂಚೂಣಿಯಲ್ಲಿರಬೇಕಾದವನು.

# ಪತ್ರಿಕೆಗಳು ಮತ್ತು ರಾಷ್ಟ್ರೀಯಧರ್ಮ

ಪ್ರಬಂಧ

**ಹ. ವೆಂ. ನಾಗರಾಜರಾವ್**

**ಅಖಿಲ ಭಾರತ ರಂಗ**

'ಪತ್ರಿಕೆಗಳು ಮತ್ತು ರಾಷ್ಟ್ರೀಯಧರ್ಮ' ಎನ್ನುವ ಶೀರ್ಷಿಕೆಯಲ್ಲಿಯೆ ಈ ಎರಡರ ಪರಸ್ಪರ ಪೂರಕ ಮತ್ತು ಅವಿನಾಭಾವ ಸಂಬಂಧಗಳು ವ್ಯಕ್ತಪಡುತ್ತವೆ. ರಾಷ್ಟ್ರೀಯ ಧರ್ಮವುಳಿದ ಪತ್ರಿಕೆಯುಂಟೆ? ಒಂದು ವೇಳೆ ಹಾಗಿದ್ದರೂ ಅದು ಜೀವಚ್ಛವದಂತೆ. ರಾಷ್ಟ್ರೀಯಧರ್ಮ ಪತ್ರಿಕೆಗಳ ಜೀವನಾಡಿ. ಆ ಕರ್ತವ್ಯ ವಿಮುಖ ವಾದ ಪತ್ರಿಕೆಗಳು, ಕನಕದಾಸರ ಸಾಲುಗಳಂತೆ –

'ದೇವರಿಲ್ಲದ ಗುಡಿಯು । ಹಾಳುಬಿದ್ದಂಗಡಿಯು
ಭಾವವಿಲ್ಲದ ಭಕುತಿ ಕುಹಕ ಯುಕುತಿ'

ಎಂಬಂತೆಯೇ ಸರಿ.

ಈ ರಾಷ್ಟ್ರೀಯ ಭಾವನೆಯಿಂದಲೆ ಸ್ಫುರಿತವಾದುದು ಅಖಿಲ ಭಾರತ ಪತ್ರಿಕೋದ್ಯಮ. ಹಲವು ಹೋರಾಟಗಳನ್ನು ಅದು ನಡೆಸಿದೆ. ದೇಶ ಸ್ವಾತಂತ್ರ್ಯದ ಜೊತೆಗೇ ತನ್ನ ಸ್ವಾತಂತ್ರ್ಯಕ್ಕೂ ಧೀರೋದಾತ್ತತೆಯಿಂದ ಕಾದಾಡಿದೆ. ತನ್ನ ಮೇಲೆರಗಿದ ಹಲವು ಕರಾಳ ಶಾಸನಗಳನ್ನು ಎದುರಿಸಿದೆ. ಸರ್ಕಾರದ ದುರಾಗ್ರಹವಾಗಲಿ, ಆರ್ಥಿಕ ದುಸ್ಥಿತಿಯಾಗಲಿ ಭಾರತೀಯ ಪತ್ರಿಕಾರಂಗದ ಧೃತಿಗೆಡಿಸಲಿಲ್ಲ. ವರ್ಷ 1780ರಲ್ಲಿ ಬಂಗಾಳದಲ್ಲಿ 'ಹಕ್ಕೀ ಗಜೆಟ್' ಪ್ರಾರಂಭವಾಗಿ ಭಾರತದ ವೃತ್ತಪತ್ರಿಕೋದ್ಯಮ ಮೊದಲಿಟ್ಟಂದಿನಿಂದ ಈ 189 ವರ್ಷಗಳ ಚರಿತ್ರೆಯಲ್ಲಿ ಅದು ಹಲವು ಘಟ್ಟಗಳನ್ನು ಹಾದಿದೆ. 'ಹಕ್ಕೀ ಗಜೆಟ್ಟ'ನಿಂದ 1857ರ ಸಿಪಾಯಿದಂಗೆ ವರೆಗೆ; ಸಿಪಾಯಿದಂಗೆಯಿಂದ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿತವಾದ ವರೆಗೆ; ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಿಂದ ರಾಷ್ಟ್ರ ಜೀವನಕ್ಕೆ ಗಾಂಧಿ ಪ್ರವೇಶವಾಗುವ ವರೆಗೆ; ಗಾಂಧಿ ಪ್ರವೇಶದಿಂದ ಭಾರತ ಸ್ವಾತಂತ್ರ್ಯ ಸಿದ್ಧಿಸುವ ವರೆಗೆ; ಸ್ವಾತಂತ್ರ್ಯ ಬಂದಂದಿನಿಂದ ಇಂದಿನ ವರೆಗೆ – ಪ್ರಧಾನ ಘಟ್ಟಗಳನ್ನು ಭಾರತ ಪತ್ರಿಕೋದ್ಯಮ ಕಂಡಿದೆ. 1857ರ ದಂಗೆ ಭಾರತದ ವಿದ್ಯಮಾನಗಳನ್ನು ಮಹತ್ತರವಾಗಿ ಬದಲಿಸಿತು. ದೇಶಭಾಷಾಪತ್ರಿಕೋದ್ಯಮಕ್ಕೆ ಸ್ಫೂರ್ತಿ ಇತ್ತಿತು. ಭಾಷಾ ಪತ್ರಿಕೋದ್ಯಮದಲ್ಲಿ ಪಶ್ಚಿಮ ಬಂಗಾಳ ಮಾರ್ಗದರ್ಶನ ಮಾಡಿತು. 1871ರಲ್ಲಿ ಬಂಗಾಳದ 'ಅಮೃತಬಜಾರ್ ಪತ್ರಿಕೆ'ಯ (ಸ್ಥಾಪನೆ 1808) ಸಂಪಾದಕ ಸಿಸಿರಕುಮಾರ ಘೋಷ್ ನ್ಯಾಯಾಲಯದಲ್ಲಿ ತಮ್ಮ ಪತ್ರಿಕೆಯ ಮೇಲೆ ಮಾಡಲಾದ ರಾಜದ್ರೋಹದ

ಆಪಾದನೆ ಎದುರಿಸುತ್ತ, "ರಾಷ್ಟ್ರಪ್ರೇಮವನ್ನು ಜಾಗೃತಗೊಳಿಸುವುದೇ ನಮ್ಮ ಪತ್ರಿಕೆಯ ಧ್ಯೇಯ" ಎಂದು ದಿಟ್ಟತನದ ಉತ್ತರವಿತ್ತರು. ಘೋಷರ ರಾಷ್ಟ್ರೀಯ ಪತ್ರಿಕೋದ್ಯಮ ಮಹಾರಾಷ್ಟ್ರದ ತಿಲಕರಿಗೆ ಸ್ಫೂರ್ತಿ ನೀಡಿತು. 'ಕೇಸರಿ'ಯಾಗಿ ಅವರು ಹೂಂಕರಿಸಿದರು. ಬಂಗಾಳ, ಮಹಾರಾಷ್ಟ್ರ, ಮದ್ರಾಸು ಇಲ್ಲೆಲ್ಲ ರಾಷ್ಟ್ರೀಯ ಧರ್ಮವೇ ಧ್ಯೇಯವಾಗುಳ್ಳ ಪತ್ರಿಕೆಗಳು ಹುಟ್ಟಿಕೊಂಡವು. ರಾಷ್ಟ್ರನಾಯಕರೇ ಈ ಪತ್ರಿಕೆಗಳ ಸಂಪಾದಕರೂ ಒಡೆಯರೂ ಆಗಿದ್ದರು. 1920ರಲ್ಲಿ ಗಾಂಧೀಜಿ ರಾಷ್ಟ್ರಜೀವನ ಪ್ರವೇಶಿಸುವ ಹೊತ್ತಿಗೆ ದಾದಾಭಾಯಿ ನವರೋಜಿ, ರಾನಡೆ, ತಿಲಕ್, ಗೋಖಲೆ, ಸಿಸಿರಕುಮಾರ ಘೋಷ್, ಅರಬಿಂದೊ – ಮುಂತಾದವರು ತಮ್ಮ ಧೀರ-ವೀರ ಪತ್ರಿಕೋದ್ಯಮದಿಂದ ನಾನಾ ಕ್ಷೇತ್ರಗಳಲ್ಲಿ ರಾಷ್ಟ್ರಚೇತನವನ್ನು ಪುನರುಜ್ಜೀವನಗೊಳಿಸಿದ್ದರು. ತಿಲಕರ ಆವೇಶ ಮತ್ತು ಆಕ್ರೋಶ, ಗೋಖಲೆಯವರ ಶಾಸನಬದ್ಧಾತ್ಮಕ ಹೋರಾಟ, ಅರವಿಂದರ ಕ್ರಾಂತಿಕಾರಕ ಭಾವನೆ – ಈ ಎಲ್ಲ ಪ್ರಧಾನ ಲಕ್ಷಣಗಳನ್ನೂ – ಶಕ್ತಿಗಳನ್ನೂ ಒಟ್ಟಿಗೆ ಹೊಂದಿಸಿ ಗಾಂಧೀಜಿ ಸತ್ಯ, ಅಹಿಂಸೆ, ಅಸಹಕಾರಗಳ ಅಸ್ತ್ರವನ್ನು ಜನತೆಗೆ ಕೊಟ್ಟರು. ಇಡಿಯ ಜನಾಂಗವೇ ರಾಷ್ಟ್ರೀಯ ಸಮರದಲ್ಲಿ ಸಕ್ರಿಯವಾಗಿ ಭಾಗವಹಿಸಿತು. ಇದೊಂದು ಅದ್ಭುತ. ರಾಷ್ಟ್ರೀಯ ಚೇತನದಲ್ಲಿ ಪತ್ರಿಕೆಗಳು ಹುರಿಗೊಂಡುವು. ದೇಶಸ್ವಾತಂತ್ರ್ಯ ಏಕೈಕ ಗುರಿಯಾಯಿತು. ಸ್ವಾತಂತ್ರ್ಯ ಸಿದ್ಧಿಸುವ ವರೆಗೂ ಈ 'ಏಕನಿಷ್ಠೆ' ಭಾರತ ಪತ್ರಿಕಾಲೋಕದ ರಾಷ್ಟ್ರೀಯಧರ್ಮವೆನಿಸಿತು.

**ಕರ್ನಾಟಕದಲ್ಲಿ**

ಅಖಿಲಭಾರತ ಪತ್ರಿಕೋದ್ಯಮದ ಈ ರಾಷ್ಟ್ರೀಯ ಹಿನ್ನೆಲೆಯಲ್ಲಿಯೆ ಹುಟ್ಟಿ ಬೆಳೆದುದು ನಮ್ಮ ಕರ್ನಾಟಕ ಪತ್ರಿಕೋದ್ಯಮ. ರಾಷ್ಟ್ರೀಯ ಪತ್ರಿಕೋದ್ಯಮದ ಅಂಗ ನಮ್ಮ ಪತ್ರಿಕಾರಂಗ. ರಾಷ್ಟ್ರೀಯ ಸಂವೇದನೆಗಳಿಗೆಲ್ಲ, ಅದರ ಸುಕ್ಷ್ಮಾನುಸೂಕ್ಷ್ಮ ಕಂಪನಗಳಿಗೆಲ್ಲ ಕನ್ನಡ ಪತ್ರಿಕೋದ್ಯಮ ತನ್ನ ಪ್ರತಿಕ್ರಿಯೆ ತೋರಿಸಿದೆ. ಒಂದು ಶತಮಾನದ ಇತಿಹಾಸ ಇದರದು. ಪಂಚಮುಖವಾಗಿ ಒಡೆದುಹೋಗಿದ್ದ ಕರ್ನಾಟಕದಲ್ಲಿ ಪಂಚಮುಖ ಬ್ರಹ್ಮನಂತೆ ಕನ್ನಡ ಪತ್ರಿಕೋದ್ಯಮ ಬೆಳೆದಿದೆ. ಈ ಎಲ್ಲವೂ ರಾಷ್ಟ್ರೀಯ ವ್ರತ ತೊಟ್ಟ ಪತ್ರಿಕೆಗಳು. ಸಾತ್ತ್ವಿಕ ತೇಜಸ್ಸಿನಿಂದ, ಕ್ಷಾತ್ರ ತೇಜಸ್ಸಿನಿಂದ ಅವು ಮೆರೆದಿವೆ. ಸಾರ್ವತ್ರಿಕ ಜನಜಾಗೃತಿಗೆ, ಕರ್ತವ್ಯಪ್ರಜ್ಞೆಗೆ, ಸಾಂಸ್ಕೃತಿಕ ಪುನರುತ್ಥಾನಕ್ಕೆ, ಭಾಷೆಯ ಏಳ್ಗೆಗೆ – ಅವು ನಿರಂತರ ದುಡಿದಿವೆ. ಕನ್ನಡ ಪತ್ರಿಕೋದ್ಯಮದ ಈ ಉಪಕಾರವನ್ನು ಮರೆಯಲು ಸಾಧ್ಯವಿಲ್ಲ. "ನುಡಿಯಿಂದ ನಾಡು ಜಾಗ್ರತವಾಯಿತೆಂದು" ಹೇಳುವುದುಂಟು. ಕನ್ನಡಿಗರಲ್ಲಿ ನುಡಿ ಜಾಗೃತಿ ಉಂಟುಮಾಡಿ ಆ ಮೂಲಕ ನಾಡ ಜಾಗೃತಿ ತಂದ ಶ್ರೇಯಸ್ಸೂ ಪತ್ರಿಕೆಗಳದು. ಕನ್ನಡ ಭಾಷೆಯನ್ನು ಅವು ತಿದ್ದಿವೆ; ಹೊಸ ಪ್ರಪಂಚದ ಹೊಸ ವಿಷಯಗಳಿಗೆ ಕನ್ನಡಭಾಷೆಯನ್ನು ಬೆಳೆಸಿವೆ; ಹದಗೊಳಿಸಿವೆ. ಪತ್ರಿಕಾ ಕಚೇರಿಗಳು ಹಲವು ಹೊಸ ಹೊಸ ಪದಗಳ ಟಂಕಸಾಲೆಗಳಾಗಿವೆ. ರಾಷ್ಟ್ರಜೀವನದ ನಾನಾ ಮುಖ ಜವಾಬ್ದಾರಿಯನ್ನು ಅವು ಹೊತ್ತಿವೆ.

**ಎರಡು ಪತ್ರಿಕೆಗಳು:**

139 ವರ್ಷಗಳ ಕೆಳಗೆ – ವರ್ಷ 1830ರಲ್ಲಿ – ಮಂಗಳೂರಲ್ಲಿ ಬಾಸೆಲ್ ಮಿಷನ್ ಪ್ರೆಸ್‌ನವರು ಕನ್ನಡ ನಾಡಿಗೆ ಮೊತ್ತಮೊದಲ ಮುದ್ರಣಯಂತ್ರ ತಂದರು. ಇನ್ನೊಂದು ದಶಕದಲ್ಲಿ ಬೆಂಗಳೂರಲ್ಲಿ ವೆಸ್ಲಿಯನ್ ಮಿಷನ್ ಪ್ರೆಸ್‌ನವರು ಕನ್ನಡದ ಅಚ್ಚುಮೊಳೆಗಳನ್ನು ಶೋಧಿಸಿದರು. 1842ರಲ್ಲಿ ಕನ್ನಡದ ಪ್ರಥಮ ಪತ್ರಿಕೆ ಪ್ರಕಟವಾಯಿತು. ಕ್ರೈಸ್ತ ಪ್ರಚಾರದ ಮುಖಪತ್ರವಾದ ಇದರ ಹೆಸರು – "ಕನ್ನಡ ಸಮಾಚಾರ". ಸ್ವದೇಶ ಪ್ರೇಮ, ಸಾರ್ವಜನಿಕ ಸೇವೆಗಳಿಂದ ಪ್ರೇರಿತವಾದ ಕನ್ನಡದ ಮೊತ್ತಮೊದಲಿನ ಪತ್ರಿಕೆಯೆಂದರೆ 1859ರಲ್ಲಿ ಬೆಂಗಳೂರಿಂದ ಹೊರಟ "ಮೈಸೂರು ವೃತ್ತಾಂತ ಬೋಧಿನಿ". 57ರ ಕ್ರಾಂತಿಯ ಬಿರುಗಾಳಿ, ಮೈಸೂರಲ್ಲಿ ರಾಜಮನೆತನದ ಕೈತಪ್ಪಿ ಹೋಗಿದ್ದ ಸಿಂಹಾಸನವನ್ನು ಮತ್ತೆ ಒಡೆಯರ ಮನೆತನಕ್ಕೆ ಹಿಂದಿರುಗಿಸಬೇಕೆಂದು ನಡೆಯುತ್ತಿದ್ದ ಸಾರ್ವತ್ರಿಕ ಚಳವಳಿ – ಇವೆರಡೂ "ವೃತ್ತಾಂತ ಬೋಧಿನಿ"ಯ ಪ್ರೇರಕ ಧಾತುಗಳಾಗಿದ್ದವು. ಭಾಷ್ಯಂ ಭಾಷ್ಯಾಚಾರ್ಯರು ಇದರ ಸಂಪಾದಕರು. ಪತ್ರಿಕೆಯ ಧ್ಯೇಯವೇನೆಂಬುದನ್ನು ಅವರು ನಿರೂಪಿಸಿದ್ದಾರೆ:

> "ನಾವು ನಿಜವನ್ನು ನುಡಿಯುತ್ತೇವೆ; ನಿಜವನ್ನು ಹೇಳಲಪೇಕ್ಷಿಸುತ್ತೇವೆ; ನಿಜವನ್ನು ನಂಬುತ್ತೇವೆ. ಈ ಪ್ರತಿಜ್ಞೆಯಿಂದ ಅನ್ಯರು ನಿಜವನ್ನು ನುಡಿದಾರೆಂದು ಎದುರು ಕೋರುತ್ತೇವೆ. ಅದು ಅನ್ಯಥಾ ಆದರೆ ಅದು ಅನ್ಯರ ದೋಷವಾಗಿರುತ್ತೆ. ಸ್ವ-ಪರ ಅಭಿಪ್ರಾಯಗಳಿಗೆ ಭೇದವನ್ನು ತಿಳಿಯದ ಜಡಮತಿಗಳ ಮನೋವಿಕಾರವು ನಮಗೆ ಲಕ್ಷ್ಯದಲ್ಲಿರಲಾರದು. ಅವರು ಇತರರ ಅಪಹಾಸ್ಯದಿಂದ ನಾಚಿಕೊಂಡು ತಮ್ಮ ತಪ್ಪನ್ನು ತಿದ್ದಿಕೊಳ್ಳಲಿ."

"ಸತ್ಯ, ಸತ್ಯ ಬಿಟ್ಟು ಬೇರೆ ಇಲ್ಲ" ಎನ್ನುವುದು ಪತ್ರಿಕಾಲೋಕದ ಪರಮಾದರ್ಶ. ಸತ್ಯ ಪ್ರತಿಜ್ಞೆ ಮಾಡಿದ "ವೃತ್ತಾಂತಬೋಧಿನಿ" ಕನ್ನಡ ಪತ್ರಿಕೋದ್ಯಮದ ನಾಂದಿಯೆಂಬುದು ಹೆಮ್ಮೆಯ ಸಂಗತಿ. 1865ರಲ್ಲಿ ಜನ್ಮ ತಳೆದ "ಕರ್ಣಾಟಕ ಪ್ರಕಾಶಿಕಾ" ಎಂಬ ಪತ್ರಿಕೆಯ ವ್ಯಾಪ್ತಿ ಇನ್ನೂ ದೊಡ್ಡದು. ವಿಶಾಲ ಭಾರತಖಂಡ, ಅಖಂಡ ಪ್ರಪಂಚದ ವಿಷಯುಗಳನ್ನೆಲ್ಲ ಅದು ತನ್ನದಾಗಿಸಿಕೊಂಡಿತ್ತು. ಕಾಲು ಶತಮಾನಕ್ಕೂ ಹೆಚ್ಚು ಸಕ್ರಿಯವಾಗಿ ಬದುಕಿದ ಪತ್ರಿಕೆ ಇದು. ಪತ್ರಿಕೆ ಪ್ರಾರಂಭವಾದ ಏಳು ವರ್ಷಗಳ ಅನಂತರವೂ, ಅದು ಬರೆದ ವಾಕ್ಯಗಳನ್ನು ನೋಡಿದರೆ ಅದರ ಧ್ಯೇಯನಿಷ್ಠೆ ಪ್ರಕಟವಾಗುತ್ತದೆ:

> "ಈ ಪತ್ರಿಕೆ ಪ್ರವರ್ತಿಸಿ ಈ ತಿಂಗಳೊಡನೆ ಏಳು ವರ್ಷಗಳೂ ಒಂಬತ್ತು ತಿಂಗಳೂ ಆಯಿತು. ಈ ದೇಶೀಯರ ಕ್ಷೇಮ ಸಹಾಯಕಗಳಾದ ವಿಷಯಗಳನೇಕ ಈ ಪತ್ರಿಕೆಯೊಳು ವಿಚಾರ ಮಾಡಲ್ಪಟ್ಟು ಅವು ಆಯಾ ಕಾಲದಲ್ಲಿ ಯಥೋಚಿತ ಪ್ರಯೋಜನಕಾರಿಗಳೂ ಆಗಿರುತ್ತವೆ. ಈ ಸಂದರ್ಭದಲ್ಲಿ ಒಂದಂಶವನ್ನು ಈ ದೇಶೀಯರಿಗೆ ತಿಳಿಸಲಿಕ್ಕೆ ನಾವು ಸಂತೋಷವುಳ್ಳವರಾಗಿದ್ದೇವೆಂದರೆ ಲೋಕದಲ್ಲಿ ವಿಲಕ್ಷಣರಾದ ಇಂಗ್ಲಿಷಿನವರ ಆಳ್ವಿಕೆ ಪ್ರಚುರಗೊಂಡಿರುವ ಈ ಕಾಲದಲ್ಲಿ ಆಳತಕ್ಕವರಿಗೂ ಪ್ರಜೆಗಳಿಗೂ ಇರುವ ಸಂಬಂಧ, ಪ್ರಜೆಗಳ ಸ್ವಾತಂತ್ರ್ಯ ಹಕ್ಕುದಾರಿಗಳು,

ಅವುಗಳ ಮೇಲೆ ಆಳತಕ್ಕವರು ನಡೆಸಬೇಕಾದ ಅಧಿಕಾರ ಪ್ರಭಾವಗಳು, ಈ ಮುಂತಾದ ಅಂಶಗಳು ಎಲ್ಲರಿಗೂ ತಿಳಿಯಬೇಕಾಗಿರುವುದರಿಂದ ಇವುಗಳನ್ನು ಆಯಾ ಸಂದರ್ಭಗಳಲ್ಲಿ ಚರ್ಚಿಸುವ ಪಾಲ್ಯ-ಪಾಲಕರ ಕರ್ತವ್ಯಗಳನ್ನು ತಿಳಿಸು ವುದಕ್ಕೆ ಮಧ್ಯ ವರ್ತಿರೂಪಗಳಾದ 'ಸ್ವತಂತ್ರ ವೃತ್ತಾಂತಪತ್ರಿಕೆಗಳಲ್ಲಿ ಮುಖ್ಯ ಸಾಧನಗಳಾಗಿರುತ್ತವೆ. ಹಾಗೆ ಲೋಕೋಪಕಾರ ಹೇತುವಾದ ಸ್ವಾತಂತ್ರ್ಯವು ನಮಗೆ ಜನ್ಮತಃ ಪ್ರಾಪ್ತವಾಗಿದ್ದಾಗ್ಯೂ, ಮಧ್ಯೆ ಅದು ನಮಗೆ ಸಲ್ಲ ದೆಂದು ಭಾವಿಸಿದವರ ಹಂಗುಹರಿದು, ಪುಣ್ಯವಶದಿಂದ ಅಂತಾ ಸ್ವಾತಂತ್ರ್ಯವು ಪೂರ್ತಿಯನ್ನೈದಿತು. ಇನ್ನು ಪ್ರಜೆಗಳ ಹಕ್ಕು ಮುಂತಾದವುಗಳನ್ನು ಹೇರಳವಾಗಿ ಚರ್ಚಿಸುವುದೇ ನಮಗೆ ಮುಖ್ಯ ಕರ್ತವ್ಯವೆಂದು ಭಾವಿಸುತ್ತೇವೆ."

ಈ ನುಡಿಗಳಲ್ಲಿ ಪತ್ರಿಕೆಯ ಋಜುತ್ವ, ದಿಟ್ಟತನ, ಸಾಮಾಜಿಕ ಪ್ರಜ್ಞೆಗಳು ವ್ಯಕ್ತ ಪಡುತ್ತವೆ. ತನ್ನ ನಿರ್ಭಯ ಟೀಕೆಗಳಿಂದ ಮೈಸೂರನ್ನು ನಡುಗಿಸಿದ ಇನ್ನೊಂದು ಹಳೆಯ ಪತ್ರಿಕೆಯಾದ "ದೇಶಾಭಿಮಾನಿ" ಸರ್ಕಾರದ ಕರಾಳ ಶಾಸನಕ್ಕೆ ಸಿಕ್ಕಿ ನಿಂತುಹೋಯಿತು.

ಉತ್ತರ ಕರ್ಣಾಟಕದ ಕಲಾದಗಿಯಿಂದ ""ಹಿತೇಚ್ಛು" – 1870ರಲ್ಲಿ ಪ್ರಾರಂಭ ವಾಯಿತು. ರಾಜರ ಮೈಸೂರಲ್ಲಿ ಪ್ರಥಮ ದಿವಾನರಾದ ರಂಗಾಚಾರ್ಲು ದೇಶದ ಮೊತ್ತ ಮೊದಲ ಪ್ರಜಾಪ್ರತಿನಿಧಿಸಭೆ ಸ್ಥಾಪಿಸಿದ್ದರು. ಇದೇ ಸುಮಾರಿಗೆ ರಾಷ್ಟ್ರೀಯ ರಂಗದಲ್ಲಿ ಕಾಂಗ್ರೆಸಿನ ಸ್ಥಾಪನೆಯೂ ನಡೆಯಿತು. ಸಾರ್ವಜನಿಕ ಆಸಕ್ತಿ ಹೆಚ್ಚಿತು. ಪ್ರಜಾಸತ್ತಾತ್ಮಕ ಹಕ್ಕುಬಾಧ್ಯತೆಗಳಿಗೆ ಪತ್ರಿಕೋದ್ಯಮ ಸಾಧನವಾಯಿತು. ಮೈಸೂರಿನ 'ತಾತಯ್ಯ'ರಾದ ಎಂ. ವೆಂಕಟಕೃಷ್ಣಯ್ಯನವರು ನೂತನ ಪತ್ರಿಕೋದ್ಯಮದ ಅಸ್ತಿಭಾರ ಹಾಕಿದರು. ಆಳವಾದ ಅಭ್ಯಾಸ, ಟೀಕೆಗಳಲ್ಲಿ ಸಂಯಮ ಮತ್ತು ಜವಾಬ್ದಾರಿ, ಸರಳ ಗದ್ಯ, ನೇರ ಪ್ರತಿಪಾದನೆ, – ಈ ಎಲ್ಲ ಗುಣಗಳಿಂದ ವೆಂಕಟಕೃಷ್ಣಯ್ಯನವರದು ಸಫಲ ಪತ್ರಿಕೋ ದ್ಯಮ. ಇಂಗ್ಲಿಷ್-ಕನ್ನಡಗಳೆರಡರಲ್ಲೂ ಅವರು ಪತ್ರಿಕೆ ನಡೆಸಿದರು. ಏಕಪ್ರಕಾರವಾದ ದೀರ್ಘ ಪತ್ರಿಕಾ ವ್ಯವಸಾಯ ನಡೆಸಿದ ಇವರು ಮುಂದೆ ಹಲವು ಪತ್ರಿಕೆಗಳಿಗೆ, ಪತ್ರಿಕಾ ಕರ್ತರಿಗೆ ಆದರ್ಶಪ್ರಾಯರಾದರು. ಹೀಗೆ ಸ್ಫೂರ್ತಿ ಪಡೆದವರಲ್ಲಿ ಒಬ್ಬರು ಇಂದಿಗೂ ನಮ್ಮ ಮಧ್ಯೆ ಪತ್ರಕರ್ತರಾಗಿರುವ ಹಿರಿಯ ಶ್ರೀ ಡಿ.ವಿ.ಜಿ. ಅವರು. ಕೆಚ್ಚೆದೆಯ 'ವಿಶ್ವ ಕರ್ಣಾಟಕ'ದ ತಿರುಮಲೆ ತಾತಾಚಾರ್ಯ ಶರ್ಮರು ಇನ್ನೊಬ್ಬರು.

**ಹೋರಾಟಜೀವನ:**

ಕನ್ನಡಪತ್ರಿಕೋದ್ಯಮ ಸುಸೂತ್ರವಾಗಿ ಬೆಳೆದುದೇನೂ ಅಲ್ಲ. ಹಲವು ಹೋರಾಟ ಗಳ ಮೈಲುಗಲ್ಲುಗಳನ್ನು ಅದು ಕಂಡಿದೆ. ಪತ್ರಿಕೆಗಳ ಕರಾಳ ಶಾಸನಕ್ಕೆ ಗುರಿಯಾಗಿದೆ. ಅಧಿಕಾರಶಾಹಿಯನ್ನೆದುರಿಸಿದ ಸಂಪಾದಕ ಶ್ರೀ ಎಂ. ಶ್ರೀನಿವಾಸಯ್ಯಂಗಾರ್ಯರು ಸಂಸ್ಥಾನವನ್ನೆ ಬಿಟ್ಟು ತೆರಳಿದರು. ಪತ್ರಿಕಾಕರ್ತರು ರಾಷ್ಟ್ರೀಯ ಸಮರದಲ್ಲಿ ಧುಮುಕಿ ಬ್ರಿಟಿಷರ ಬಂದೀಖಾನೆಯೊಳಗೆ ಹೋದರು. ಶ್ರೀ ಡಿ. ವಿ. ಗುಂಡಪ್ಪನವರು ತಮ್ಮ 'ಭಾರತಿ' ಪತ್ರಿಕೆ ನಿಲ್ಲಿಸಿದರು. ಅವರ ಎರಡನೆಯ ಪತ್ರಿಕೆ 'ಕರ್ಣಾಟಕ'ವು ವೃತ್ತಪತ್ರಿಕಾ ಶಾಸನಕ್ಕೆ ಗುರಿಯಾಗಿ ನಿಂತಿತು (1922–23). ಈ ಪತ್ರಿಕೆಯ ರಾಷ್ಟ್ರಧೋರಣೆ ಆಗಿನ

ಬ್ರಿಟಿಷ್ ರೆಸಿಡೆಂಟರಿಗೆ ಸರಿಬೀಳುತ್ತಿರಲಿಲ್ಲ. ಪತ್ರಿಕೆಯನ್ನು ದಂಡಿಸಬೇಕೆಂದು ಮೈಸೂರು ಸರ್ಕಾರಕ್ಕೆ ಸಲಹೆ ಕೊಡುತ್ತಿದ್ದರು. ಡಾ. ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದ ಅವಧಿ. ಡಾ. ಎಂ. ವಿ. ಅವರು ವೃತ್ತಪತ್ರಿಕೆಗಳ ಗೌರವ, ಸ್ವಾತಂತ್ರ್ಯಕ್ಕೆ ಮನ್ನಣೆ ಇತ್ತವರು, "ವೃತ್ತಪತ್ರಿಕಾ ಕಾನೂನೆಂಬ ಒರಟು ದೊಣ್ಣೆಯನ್ನು ನಾನು ಮುಟ್ಟಲಾರೆ" ಎನ್ನುತ್ತಿದ್ದರು. ದೇಶೀಯ ಪತ್ರಿಕೆಗಳ ಈ ಇತ್ತಂಡ ಪರಿಸ್ಥಿತಿಯನ್ನು ಡಾ. ಎಂ. ವಿ. ಅವರೇ ತಮ್ಮದೊಂದು ಭಾಷಣದಲ್ಲಿ ಚಿತ್ರಿಸಿದ್ದಾರೆ:

> "ನಮ್ಮ ಹಿಂದೂಸ್ಥಾನದಲ್ಲಿ ದೇಶೀಯ ಪತ್ರಿಕೆಗಳು ಬಡತನದಲ್ಲಿ ಬಾಳುತ್ತ, ಸರಕಾರದ ಆಗ್ರಹಕ್ಕೆ ಗುರಿಯಾಗಿವೆ. ಬ್ರಿಟಿಷ್ ಇಂಡಿಯಾದಲ್ಲಿಯೂ, ದೇಶೀಯ ಸಂಸ್ಥಾನಗಳಲ್ಲಿಯೂ ಬಗೆಬಗೆಯ ಪ್ರೆಸ್ ಆಕ್ಟ್ (ವೃತ್ತಪತ್ರಿಕಾ ಶಾಸನ)ಗಳೂ ನಿರ್ಬಂಧಗಳೂ ಪತ್ರಿಕೆಗಳನ್ನು ನಾನಾ ವಿಧದಲ್ಲಿ ತಡೆಗಟ್ಟಿವೆ. ದೇಶದ ಯಾವ ಭಾಗದಲ್ಲಿಯೂ ಪತ್ರಿಕೆಗಳಿಗೆ ರಾಜಕೀಯ ಬಲವುಳ್ಳ ಜನದ ವರ್ಗಗಳಿಂದ ಉತ್ಸಾಹಪೂರ್ವಕವಾದ ಒತ್ತಾಸೆ ದೊರೆಯುತ್ತಿಲ್ಲ." (1920).

ರಾಜಕೀಯದಲ್ಲಿ ಗೋಖಲೆಪಂಥದ ಡಾ. ಡಿ. ವಿ. ಗುಂಡಪ್ಪನವರ ಪತ್ರಿಕಾಧರ್ಮ ತುಂಬ ಸಂಯಮದ್ದು, ಜವಾಬುದಾರಿಯದು. ಅಭ್ಯಾಸ, ವಿಷಯ ನಿಷ್ಕೃಷ್ಟತೆ, ತರ್ಕಬದ್ಧ ವಿಚಾರಸರಣಿ, ಆಕ್ರೋಶವಿಲ್ಲದ ಬರವಣಿಗೆ – ಇವರದು. ಇಂದಿಗೂ ಡಾ. ಡಿ.ವಿ.ಜಿ. ಪತ್ರಿಕಾಕರ್ತರಾಗಿಯೆ ನಮ್ಮ ಮಧ್ಯೆ ಇದ್ದು ಗೋಖಲೆ ಸಂಸ್ಥೆಯ 'ಪಬ್ಲಿಕ್ ಅಫೇರ್ಸ್' ಆಂಗ್ಲ ಮಾಸಪತ್ರಿಕೆ ನಡಸುತ್ತಿದ್ದಾರೆ. ಶ್ರೀ ತಿರುಮಲೆ ತಾತಾಚಾರ್ಯ ಶರ್ಮರ ಪತ್ರಿಕೋದ್ಯಮವಾದರೋ ಕ್ಷಾತ್ರಧರ್ಮದ್ದು. ಖಡ್ಗವನ್ನು ಒರೆಯಿಂದ ಸೆಳೆದು ನಿಂತವರಂತೆ ಅವರ ಮಾತು, ಶೈಲಿ. ಇದೇ ರೀತಿಯ ಮನಃಪ್ರವೃತ್ತಿ 'ವೀರ ಕೇಸರಿ' ಸೀತಾರಾಮ ಶಾಸ್ತ್ರಿಗಳದು. ಉತ್ತರ ಕರ್ಣಾಟಕದಲ್ಲಿ ಮುದವೀಡು ಕೃಷ್ಣ ರಾಯರ "ಕರ್ಣಾಟಕ ವಾರ್ತಾ", ಜಯರಾವ್ ದೇಶಪಾಂಡೆಯವರ "ಕರ್ಣಾಟಕ ವೈಭವ", ದಕ್ಷಿಣ ಕರ್ಣಾಟಕದಲ್ಲಿ ಹುರುಳಿ ಭೀಮರಾಯರ 'ಕಂಠೀರವ', 'ಸ್ವದೇಶಾಭಿ ಮಾನಿ', 'ರಾಷ್ಟ್ರಮತ' ಮುಂತಾದ ಪತ್ರಿಕೆಗಳು ಕನ್ನಡಿಗರಲ್ಲಿ ರಾಷ್ಟ್ರೀಯ ಜಾಗೃತಿ ಉಂಟುಮಾಡಿದವು. ದೇಶಜಾಗೃತಿ ಜೊತೆಗೆ ಕರ್ಣಾಟಕ ಏಕೀಕರಣದ ಕರ್ತವ್ಯವೂ ಕನ್ನಡ ಪತ್ರಿಕೆಗಳಿಗೆ ಬಂದಿತು. ಸಂಯುಕ್ತ ಕರ್ಣಾಟಕ, ಕರ್ಮವೀರ, ನವಯುಗ ಮತ್ತು ವಿಶಾಲ ಕರ್ಣಾಟಕಗಳು ಹುಬ್ಬಳ್ಳಿಯಿಂದ, ಜನವಾಣಿ ಮತ್ತು ಪ್ರಜಾಮತಗಳು ಬೆಂಗಳೂರಿಂದ, ನವಭಾರತ ಮಂಗಳೂರಿನಿಂದ ಹೊರಟವು. ರಾಷ್ಟ್ರಕಧರ್ಮದಿಂದ ಕೆಲಸಮಾಡಿದ ಇವು ಒಂದೊಂದರ ಇತಿಹಾಸವೂ ಕನ್ನಡ ಪತ್ರಿಕೋದ್ಯಮದ ಪುಟಗಳು. ಇಂದು ರಾಜ್ಯದ ಬೃಹತ್ ಪತ್ರಿಕೆಗಳಾಗಿರುವ ಪ್ರಜಾವಾಣಿ ಮತ್ತು ಡೆಕ್ಕನ್ ಹೆರಲ್ಡ್, ಇತ್ತೀಚೆಗೆ ಪ್ರಾರಂಭವಾದ 'ಕನ್ನಡಪ್ರಭ' ಸ್ವಾತಂತ್ರ್ಯಾನಂತರದಲ್ಲಿ ಹುಟ್ಟಿದವು. ಇನ್ನೂ ಅನೇಕ ಪತ್ರಿಕೆಗಳು ಕನ್ನಡ ನಾಡಿನಲ್ಲಿ ಹುಟ್ಟಿ ಕೆಲಸಮಾಡಿವೆ.

**ವಿಶಾಲ ಅರ್ಥ:**

ಪತ್ರಿಕೆಗಳ ದೀರ್ಘ ಪಟ್ಟಿ ಕೊಡುವುದು ಇಲ್ಲಿನ ಉದ್ದೇಶವಲ್ಲ. ನಮ್ಮ ಪತ್ರಿಕೆಗಳು

ಅಂದು ಮತ್ತು ಇಂದು ರಾಷ್ಟ್ರೀಯ ಧರ್ಮವನ್ನು ಎಷ್ಟುಮಟ್ಟಿಗೆ ಹಿಡಿದು ನಡಸಿವೆ, ಸಾರ್ವಜನಿಕ ಕರ್ತವ್ಯಗಳಿಗೆ ಹೇಗೆ ಎಚ್ಚೆತ್ತಿವೆ – ಎನ್ನುವುದು ಮುಖ್ಯ.

ರಾಷ್ಟ್ರೀಯ ಧರ್ಮವೆನ್ನುವುದು ಬೃಹತ್ ಅರ್ಥವ್ಯಾಪ್ತಿಯುಳ್ಳ ಕಲ್ಪನೆ. ಅದರ ಎಲ್ಲೆ ಇಂತಿಷ್ಟೇ ಎಂದು ಸೀಮಿತವಲ್ಲ. ಪತ್ರಿಕೆಗಳ ರಾಷ್ಟ್ರೀಯ ಧರ್ಮವಾದರೋ ನಾನಾ ಸ್ವರೂಪದ್ದು, ನಾನಾ ಲಕ್ಷಣದ್ದು. ರಾಷ್ಟ್ರದ ಯಾವ ಸಮಸ್ಯೆ ಪತ್ರಿಕೆಗೆ ಬೇಡ? ಯಾವ ಹೊಣೆಗಾರಿಕೆಯಿಂದ ಅದು ದೂರ ಉಳಿಯುತ್ತದೆ? ರಾಜಕೀಯ ವಿಷಯ ವೊಂದೇ ಅದರ ವಸ್ತುವೆ? ಪ್ರಕೃತ ಸಂಗತಿಗಳಿಗೇ ಅದು ಮೀಸಲೆ? ಪತ್ರಿಕೆಯ ರಾಷ್ಟ್ರೀಯ ಧರ್ಮ ವಿಶ್ವವಿಶಾಲ. ಸೂರ್ಯನ ಕೆಳಗೆ ಏನೇನು ಉಂಟೋ ಅದೆಲ್ಲದರ ಬಗ್ಗೆಯೂ ಪತ್ರಿಕೆಯ ತೀವ್ರ ಕಾಳಜಿ ಉಂಟು. ವ್ಯಕ್ತಿಯ ಹೊರ ಚಟುವಟಿಕೆಗಳಿಂದ ಅವನ ಅಂತರಂಗ ಸಂಸ್ಕಾರದವರೆಗೂ ಪತ್ರಿಕೆಯ ಕರ್ತವ್ಯ ಪ್ರಜ್ಞೆ ಇದೆ. ಕನ್ನಡ ಪತ್ರಿಕೋದ್ಯಮವು ಇದೆಲ್ಲ ಆಸಕ್ತಿಗಳನ್ನೂ ತಳೆದಿದೆ.

**ಸ್ವಾತಂತ್ರ್ಯಾನಂತರ:**

ಎಲ್ಲ ದೇಶಭಾಷಾ ಪತ್ರಿಕೋದ್ಯಮಗಳಂತೆ ಕರ್ಣಾಟಕ ಪತ್ರಿಕೋದ್ಯಮ ಕೂಡ. ಸ್ವಾತಂತ್ರ್ಯ ಪೂರ್ವ ಚರಿತ್ರೆಯೇ ಬೇರೆ, ಸ್ವಾತಂತ್ರ್ಯಾನಂತರದ ಪರಿಸ್ಥಿತಿಯೆ ಬೇರೆ. ದೇಶದ ಕರೆಗೆ ಓಗೊಟ್ಟು ಪತ್ರಿಕಾರಂಗಕ್ಕೆ ಧುಮುಕಿದವರೆ ಹೆಚ್ಚು. ಅವರೇ ಪತ್ರಿಕಾ ಸಂಪಾದಕರು, ಮಾಲಿಕರು ಕೂಡ. "ಪತ್ರಿಕೋದ್ಯಮ ನನಗೆ ವ್ಯಕ್ತಿಗಿಂತ ದೇಶದ ಕರೆ" ಎಂದ ದಿವಂಗತ ಖಾಸಾ ಸುಬ್ಬರಾಯರ ನುಡಿ ಇಲ್ಲಿ ಸ್ಮರಣೆಗೆ ಬರುತ್ತದೆ. ಅಂದು ವೃತ್ತಪತ್ರಿಕೆಗಳಿಗೆ ಸರ್ಕಾರದ ಕರಾಳಶಾಸನದ ಭಯವಿತ್ತು, ಇಂದು ಆ ಭಯ ಬೇರೆ ರೀತಿಯದಾಗಿದೆ. ಪತ್ರಿಕೆಗಳನ್ನು ಜಾಹಿರಾತುಗಳೇ ಮುಂತಾದ ಸಹಾಯಗಳ ಹಂಗಿನಲ್ಲಿ ಸಿಲುಕಿಸುವ ಭಯವಿದೆ. ಅಂದು ಸಣ್ಣಪುಟ್ಟ ಪತ್ರಿಕೆಗಳು ಸ್ವತಂತ್ರವಾಗಿ ಬದುಕುತ್ತಿದ್ದವು, ಇಂದು ಬೃಹತ್ ಪತ್ರಿಕೋದ್ಯಮ ಬಲಿಯುತ್ತಿದೆ. ಅಂದು 'ಏಕನಿಷ್ಠೆ' ಇತ್ತು, ಇಂದು 'ಬಹುನಿಷ್ಠೆ' ಪ್ರಾಪ್ತವಾಗಿದೆ. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ಆರ್ಥಿಕ ವ್ಯವಸ್ಥೆಯೂ ಬದಲಾಗಿದೆ. ರಾಷ್ಟ್ರದ ಪತ್ರಿಕೆಗಳ ಮೇಲೆ ಅದು ಪ್ರಬಲ ಪರಿಣಾಮ ಬೀರಿದೆ. ಬೃಹತ್ ಬಂಡವಾಳವಿಲ್ಲದ ಪತ್ರಿಕೆಗಳು ಇಂದು ಬದುಕಲಾರವು. ಭಾರಿ ಕೈಗಾರಿಕೋದ್ಯಮದಂತೆ ಅದು ನಡೆಯುತ್ತಿದೆ. ಭಾರಿ ಉದ್ದಿಮೆದಾರರು, ಬಂಡವಾಳ ದಾರರು ಪತ್ರಿಕಾ ಕ್ಷೇತ್ರಕ್ಕೆ ಬಂದಿದ್ದಾರೆ, ತಮ್ಮ ಹಿಂದೆಯೇ ತಮ್ಮ ಆಮಿಷ, ಆಶೋತ್ತರ ಗಳನ್ನೂ ತಂದಿದ್ದಾರೆ. ಈ ಬದಲಾದ ಪರಿಸ್ಥಿತಿಯನ್ನು ಹಿರಿಯ ಪತ್ರಿಕಾಕರ್ತ ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಹೀಗೆ ವರ್ಣಿಸಿದ್ದಾರೆ:

"ಪತ್ರಿಕೋದ್ಯಮದಲ್ಲಿ ಹತ್ತಿಪ್ಪತ್ತು ವರ್ಷಗಳು ನುರಿತ ಅನುಭವಸ್ಥರೇ ಪತ್ರಿಕಾ ಸಂಪಾದಕರಾಗಿಯೂ, ಪತ್ರಿಕೆಯ ಅಧಿಪತಿಗಳಾಗಿಯೂ ಇರುವ ವಾಡಿಕೆ ಇತ್ತು. ಅದು ಕೊನೆಮುಟ್ಟಿದಂತಾಗಿದೆ. ಪತ್ರಿಕೆಗಳ ಮಾಲಿಕರೇ ಬೇರೆ, ಅಧಿಕಾರಿಗಳೇ ಬೇರೆ. ಸಂಪಾದಕರುಗಳೇ ಬೇರೆ, ಪತ್ರಿಕೋದ್ಯಮಿಗಳೇ ಬೇರೆ. ಎಷ್ಟು ಯೋಚನೆ ಮಾಡಿದರೂ ನನ್ನ ಮನಸ್ಸಿಗೆ ಇದು ಹಿತಕರವಾಗಿ ತೋರುವುದಿಲ್ಲ, ಪ್ರಿಯಕರವೂ

ಅಲ್ಲ. ಆದರೆ ಬೇರೆ ಗತ್ಯಂತರವೇ ಇಲ್ಲ. ಇನ್ನು ಮುಂದೆ ಹೀಗೆಯೇ ನಡೆಯ ತಕ್ಕದ್ದು – ಅದು ಕಾಲಧರ್ಮ."

ಸ್ವತಂತ್ರ ಭಾರತದಲ್ಲಿ ಬದಲಾದ ಈ ಪರಿಸ್ಥಿತಿಯನ್ನು ಪ್ರೆಸ್ ಕಮಿಷನ್ ಹತ್ತು ವರ್ಷಗಳ ಹಿಂದೆಯೇ ಗಮನಿಸಿತು. ದೆಹಲಿಯಲ್ಲಿ ಇತ್ತೀಚೆಗೆ ನಡೆದಂತಹ ಪತ್ರಿಕೋದ್ಯಮದ ಸೆಮಿನಾರ್ ಕೂಡ ಈ ವಿಚಾರವಾಗಿ ವಿಪುಲ ಚರ್ಚೆ ನಡೆಸಿದೆ. ಭಾರಿ ಉದ್ದಿಮೆದಾರರು ಬಂಡವಾಳದಾರರು ಪತ್ರಿಕೋದ್ಯಮದ ಬಹಿರಂಗ – ಅಂತರಂಗಗಳನ್ನು ಬಹುವಾಗಿ ಬದಲಾಯಿಸಿದ್ದಾರೆ. ಇಂದು ಪತ್ರಿಕೋದ್ಯಮ – ಇನ್ನಿತರ ಕೈಗಾರಿಕೆಗಳಂತೆಯೇ ಒಂದು ಶಾಖೆ. ಸಂಪಾದಕ ಇಂಥ ಭಾರಿ ಕೈಗಾರಿಕೋದ್ಯಮದ ಮುಖ್ಯ ಕಾರ್ಯನಿರ್ವಾಹಕ, (executive) ಅಷ್ಟೆ.

ಸ್ವಾತಂತ್ರ್ಯಪೂರ್ವದಲ್ಲಿ ರಾಷ್ಟ್ರೀಯ ಧ್ಯೇಯಾದರ್ಶಗಳನ್ನು ಹೊಂದಿದ್ದವರೆ ಪತ್ರಿಕೋದ್ಯಮಕ್ಕೆ ಬರುತ್ತಿದ್ದರು. ಇಂದು ಬರುತ್ತಿರುವ ಪತ್ರಿಕಾಕರ್ತರಿಗೆ ಆ ರಾಷ್ಟ್ರಕನಿಷ್ಠೆ ಇಲ್ಲವೆಂದಲ್ಲ. ಆದರೆ ಪತ್ರಿಕಾಕರ್ತರೆ ಬೇರೆ, ಪತ್ರಿಕೆಗಳ ಮಾಲಿಕರೇ ಬೇರೆ. ಪತ್ರಿಕೋದ್ಯೋಗಿಯ ಋಜುತ್ವ, ಧ್ಯೇಯಾದರ್ಶ, ಸೇವಾಕಾಂಕ್ಷೆಗಳಿಗೆ ಇಲ್ಲಿ ಎರಡನೆಯ ಸ್ಥಾನ, ಪ್ರಥಮ ಸ್ಥಾನ ಮಾಲಿಕನ ಹಿತ.

**ರಾಷ್ಟ್ರೀಯಧರ್ಮ – ಇಂದು:**

ಹಾಗೆ ನೋಡಿದರೆ, ಸ್ವಾತಂತ್ರ್ಯಪೂರ್ವಕ್ಕಿಂತಲೂ ಸ್ವತಂತ್ರ ಭಾರತದಲ್ಲಿ ಪತ್ರಿಕೆಯ ಜವಾಬ್ದಾರಿ ಹೆಚ್ಚು. ಪ್ರಜಾಪ್ರಭುತ್ವಪದ್ಧತಿಯನ್ನು ನಾವು ಹೊಂದಿದ್ದೇವೆ, ಸಂವಿಧಾನ ಬದ್ಧ ಆಡಳಿತ ರಚಿಸಿಕೊಂಡಿದ್ದೇವೆ. ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ತಿಳಿವಳಿಕೆಯಿಂದ, ಸಕ್ರಿಯವಾಗಿ ಭಾಗವಹಿಸಿದಾಗಲೇ ಪ್ರಜಾತಂತ್ರದ ಯಶಸ್ಸು. ಈ ಹೊಣೆಗಾರಿಕೆಗೆ ಜನರನ್ನು ಎಚ್ಚರಿಸುವುದೇ ಇಂದು ಪತ್ರಿಕೆಗಳ ರಾಷ್ಟ್ರೀಯಧರ್ಮ.

ಆರೋಗ್ಯಕರವಾದ ಪ್ರಜಾಪ್ರಭುತ್ವವನ್ನು ಹೊಂದಲು ನಾವಿಂದು ಹೋರಾಡುತ್ತಿದ್ದೇವೆ. ಇಲ್ಲಿ ಹಲವು ರಾಜಕೀಯ ಪಕ್ಷಗಳುಂಟು; ನಾನಾ ಜಾತಿ-ಧರ್ಮಗಳುಂಟು; ಪಕ್ಷಪಕ್ಷಗಳಲ್ಲೇ ಎಡ-ಬಲ ಕಕ್ಷಿಗಳುಂಟು; ಧರ್ಮರಾಜ್ಯವೇ – ಲೌಕಿಕರಾಜ್ಯವೇ ಎನ್ನುವ ತಕರಾರುಂಟು. ರಾಜ್ಯ ರಾಜ್ಯಗಳಲ್ಲಿಯೂ ಗಡಿ ವಿವಾದ, ಜಲವಿವಾದಗಳಿಗೆ – 'ಲಕ್ಷ ರಾವಣರಿರುವ ಯಕ್ಷಗಾನ'ದಂತೆ ಏರ್ಪಟ್ಟಿರುವ ಇಂದಿನ ಭಾರತದಲ್ಲಿ ಪತ್ರಿಕೆಗಳು ಎಷ್ಟರ ಮಟ್ಟಿಗೆ, ವ್ಯಕ್ತಿರಹಿತವಾಗಿ, ಜಾತಿರಹಿತವಾಗಿ, ಪಕ್ಷರಹಿತವಾಗಿ ದೇಶದ ಹಿತಕ್ಕೆ ದುಡಿಯಬಲ್ಲವು? ತಮ್ಮ ರಾಷ್ಟ್ರೀಯಧರ್ಮವನ್ನು ಹೇಗೆ ನಡಸಬಲ್ಲವು? ಶ್ರೀ ಚಂಚಲಸರ್ಕಾರರು ನಮ್ಮ ಪತ್ರಿಕೋದ್ಯಮಕ್ಕೆ ದೃಷ್ಟಿದೋಷ ಬಡಿದಿದೆಯೆಂದೂ, ಕಣ್ಣಿನ ಪರೆ ಬೆಳೆದಿದೆಯೆಂದೂ ಅದರ ಬೆಳವಣಿಗೆಯೇ 'ಕುಬ್ಜ'ವಾಗಿದೆಯೆಂದೂ ಆರೋಪಿಸುತ್ತಾರೆ.

ಸ್ವಾತಂತ್ರ್ಯಾನಂತರದ ಪತ್ರಿಕೋದ್ಯಮದ ಸಮಸ್ಯೆಗಳನ್ನು ಹೀಗೆ ಕ್ರೋಢೀಕರಿಸಬಹುದೆನ್ನಿಸುತ್ತದೆ:

೧. ಭಾರಿ ಕೈಗಾರಿಕೋದ್ಯಮಿಗಳು ಪತ್ರಿಕಾರಂಗ ಪ್ರವೇಶಿಸುತ್ತಿದ್ದಾರೆ. ಬಹು ಪತ್ರಿಕೆಗಳ "ಏಕಸ್ವಾಮಿತ್ವ" ಹೆಚ್ಚುತ್ತಿದೆ.

೨. ಇನ್ನಿತರ ಕೈಗಾರಿಕೆಗಳಂತೆಯೇ ಪತ್ರಿಕೋದ್ಯಮವೂ ಒಂದು ಕೈಗಾರಿಕೆ ಯಾಗುತ್ತಿದೆ.

೩. ಸಂಪಾದಕನ ಸ್ಥಾನಮಾನ ಕುಗ್ಗುತ್ತಿದೆ.

೪. ಸ್ವತಂತ್ರ ಪತ್ರಿಕೋದ್ಯಮ ಕಣ್ಮರೆಯಾಗುತ್ತಿದೆ.

೫. ರಾಷ್ಟ್ರಹಿತಕ್ಕೆ ದುಡಿಯುವ ಬದಲು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಿಸಿದ ಪತ್ರಿಕಾಕರ್ತರು ಮಾಲಿಕನ ಹಿತಕ್ಕೆ ದುಡಿಯುತ್ತಿದ್ದಾರೆ.

**ಭವಿಷ್ಯವೇನು?**

ಈ ಎಲ್ಲ ಪರಿಧಿಯೊಳಗೆ ಇಂದಿನ ಪತ್ರಿಕಾ ವ್ಯವಸಾಯ ನಡೆಯುತ್ತಿದೆ. ಸ್ವಾತಂತ್ರ್ಯ ಹರಣವಾದ ಸಂಪಾದಕನ ಸ್ವತಂತ್ರ ವಿಚಾರಧೋರಣೆಗೂ, ನಿರೂಪಣೆಗೂ ಬೆಲೆಯೂ, ಎಡೆಯೂ ಈಗಿಲ್ಲ. ಈ ಎಲ್ಲ ಸಮಸ್ಯೆಗಳನ್ನು ನಾವಿಂದು ಎದುರಿಸುತ್ತಿದ್ದೇವೆ. ಪ್ರೆಸ್ ಕಮಿಷನ್ (ಪತ್ರಿಕಾ ಆಯೋಗ) ಕೂಡ ಈ ಹತ್ತು ವರ್ಷಗಳ ಹಿಂದೆಯೇ ಭಾರತ ಪತ್ರಿಕೋದ್ಯಮದಲ್ಲಿ ತಲೆಹಾಕುತ್ತಿರುವ ಈ ಎಲ್ಲ ಪರಿಸ್ಥಿತಿಗಳನ್ನೂ ಮುಂಗಂಡಿತ್ತು. ಅದಕ್ಕೆ ಪರಿಹಾರರೂಪವಾಗಿ Trust Form of Ownership ಅನ್ನು ಸೂಚಿಸಿತ್ತು. 'ಕಂಪೆನಿ'ಯನ್ನು 'ಟ್ರಸ್ಟ್' ಮಾಡಿದಾಕ್ಷಣ ಸಮಸ್ಯೆಗಳು ಬಗೆಹರಿಯಲಾರವು. ಹಾಗೆಯೇ ಸಣ್ಣ ಪತ್ರಿಕೆಗಳಿಗೆ ಉತ್ತೇಜನ ಕೊಡಬೇಕೆನ್ನುವ ಸಲಹೆ. ಭಾರಿ ಪತ್ರಿಕೋದ್ಯಮದ ಮುಂದೆ ಈ ಸಣ್ಣ ಪತ್ರಿಕೆಗಳು ಅವೆಷ್ಟೇ ದಕ್ಷತೆಯಿಂದ ಸಂಸ್ಥೆ ನಡಸಲಿ, ಪ್ರಭಾವಶಾಲಿ ಬರವಣಿಗೆ ಮಾಡಲಿ, ಪತ್ರಿಕೆಯ ಶ್ರೇಷ್ಠ ಮಟ್ಟ ಎತ್ತಿ ಹಿಡಿಯಲಿ, ಉಳಿಯಲು ಸಾಧ್ಯವೆ? ದೊಡ್ಡ ಮೀನು ಸಣ್ಣ ಮೀನನ್ನು ನುಂಗುತ್ತದೆ. ಸ್ವತಂತ್ರ ಪತ್ರಿಕೋದ್ಯಮವನ್ನು ಭಾರಿ ಬಂಡವಾಳ ಪತ್ರಿಕೆಗಳು ನುಂಗುತ್ತವೆ. ಇದೆಲ್ಲವೂ ಪತ್ರಿಕೆಯ, ಪತ್ರಿಕಾಕರ್ತನ ರಾಷ್ಟ್ರೀಯ ಧರ್ಮದ ಮೇಲೆ ಪರಿಣಾಮ ಬೀರುತ್ತದೆ. ಆರ್ಥಿಕವಾಗಿ ಬದಲಾದ ಪತ್ರಿಕಾರಂಗದಲ್ಲಿ ಭಾರತೀಯ ಪತ್ರಿಕಾಕರ್ತ ವೀರ ಅಭಿಮನ್ಯುವಿನಂತೆ ಚಕ್ರವ್ಯೂಹದಲ್ಲಿ ಸಿಲುಕಿಬಿದ್ದಿದ್ದಾನೆ. ಅವನ "ಪೇನಾ" ತೆರೆದಿದೆ; ಅವನ ಹೃದಯ ವೀರಾವೇಶದಿಂದ ತುಂಬಿದೆ. ಅವನ ಕೈಗಳು ಹಿಂದಿನಿಂದ ಛದ್ಮದಿಂದ ಕತ್ತರಿಸಲ್ಪಟ್ಟಿವೆ. ಆದರೂ – ಅವನು ಹೋರಾಡುತ್ತಲೇ ಇದ್ದಾನೆ. ರಾಷ್ಟ್ರದ ಮೇಲೆ ಶತ್ರುಗಳ ದಾಳಿನಡೆದಾಗ, ದುಷ್ಟ ಸಾಮಾಜಿಕ ಶಕ್ತಿಗಳು ಹೆಡೆಯೆತ್ತಿದಾಗ, ರಾಷ್ಟ್ರಮರ್ಯಾದೆಗೆ ಧಕ್ಕೆ ತಗಲಿದಾಗ – ಅವನ ರಾಷ್ಟ್ರೀಯ ಧರ್ಮ ಜಾಗೃತವಾಗುತ್ತದೆ. ಇದು ಅವನು ಬದುಕಿರುವುದಕ್ಕೆ ಸೂಚಕ. ಪತ್ರಿಕಾ ಸ್ವಾತಂತ್ರ್ಯ ದೊರಕಿಸಿಕೊಟ್ಟು, ಆ ಸ್ವಾತಂತ್ರ್ಯ ರಕ್ಷಣೆ ನಿರ್ವಹಣೆಗೆ ಯೋಗ್ಯ ವಾತಾವರಣ ನಿರ್ಮಿಸಿ, ಪತ್ರಿಕೆಯ ಶ್ರೇಷ್ಠ ಮಟ್ಟಗಳನ್ನು ಕಾಯ್ದುಕೊಂಡು, ಅದರ ಸಾಮಾಜಿಕ ಹೊಣೆಗಾರಿಕೆ, ಧ್ಯೇಯಾದರ್ಶಗಳನ್ನು ಸಾಧಿಸಲು ನೆರವಾಗುವಂತೆ ಪ್ರೆಸ್‌ಕೌನ್ಸಿಲ್' ರಚಿತವಾಗಿದೆ. ಆ ಧ್ಯೇಯವನ್ನು 'ಪತ್ರಿಕಾಸಮಿತಿ' ಸಾಧಿಸಲು ಎಂದು ಸಾಧ್ಯವಾಗುವುದೋ. (ಬ್ರಿಟನ್ನಿನಲ್ಲಿಯೂ ಇಂಥ ಸಮಸ್ಯೆ ಒದಗಿ ಎರಡು ರಾಯಲ್ ಕಮಿಷನ್‌ಗಳು ನೇಮಿಸ

ಲ್ಪಟ್ಟರೂ ಪರಿಣಾಮಕಾರಿ ಪರಿಹಾರವನ್ನು ಕಂಡುಹಿಡಿಯಲು ಸಾಧ್ಯವಾಗದೆ ಇದೆ.)

ವಿಕ್‌ಹ್ಯಾಂ ಸ್ಟೀಡ್‌ನ ಮಾತುಗಳು ಈ ಸಂದರ್ಭದಲ್ಲಿ ನೆನೆಯತಕ್ಕವು:

"To be king over all the children of pride, to chasten the haughty and succour the weak, to scorn the bigot and confound the sceptic, to serve truth without fear, to admonish the people and expose-the demagogue, to chide the wayward and embolden the faint heart, in a word, to provide sound comment upon public life in all its aspects, should be the task of the Press, and the source of its power, and it is the danger lest it cuts itself off from this source by becoming a mere industry, by pandering to the public for the sake of big circulation which bring big revenues. That makes the problem of the Press today the central problem of democracy"

## ಪತ್ರಿಕೆಯ ಸ್ವಾತಂತ್ರ್ಯಕ್ಕೆ
## ರಾಷ್ಟ್ರದ ಕಟ್ಟುಪಾಡು ಇಲ್ಲ

ಉಪಸಂಹಾರ

**ಶಿವರಾಮ ಕಾರಂತ**

ನಿಜವಾಗಿ ಪತ್ರಿಕೆಗಳನ್ನು ಅಥವಾ ಅವುಗಳಿಗೆ ಬರುವ ಸುದ್ದಿಗಳನ್ನು ಗಂಭೀರ ವಾಗಿ ಪರಿಗಣಿಸುವ ಕಾಲ ನಮ್ಮಲ್ಲಿ ಮಾತ್ರವಲ್ಲ, ಇತರ ದೇಶಗಳಲ್ಲೂ ಬಂದಿಲ್ಲವೆನ್ನ ಬಹುದು. ನಮ್ಮ ರಾಜ್ಯದ ಈ ಭಾಗದಲ್ಲಿ ಗೆಜೆಟ್ ಸುದ್ದಿ ಎಂದರೆ ಸುಳ್ಳುಸುದ್ದಿಯ ಇನ್ನೊಂದು ಹೆಸರು. ಪೇಪರ್ ಎನ್ನುವುದನ್ನು ಒಟ್ಟಿನ ದೃಷ್ಟಿಯಲ್ಲಿ ತೆಗೆದುಕೊಳ್ಳುವು ದಾದರೆ ಅದನ್ನು ವಾರಪತ್ರಿಕೆ ಅಥವಾ ಮಾಸಪತ್ರಿಕೆ ಎಂದು ಹೇಳಲು ಸಾಧ್ಯವಿಲ್ಲ; ತಾತ್ಕಾಲಿಕ ಪತ್ರಿಕೆ ಎಂದರೆ ದೈನಿಕ ಪತ್ರಿಕೆ ಎಂದು ಮಿತಿ ಇಟ್ಟುಕೊಳ್ಳತಕ್ಕದ್ದು. ಆಗ ಈ ಚರ್ಚೆಗೆ ಒಂದು ಮುಖ ಕೊಡುವುದಕ್ಕೆ ಬರುತ್ತದೆ. ಇವತ್ತು ಪತ್ರಿಕೆ ಎಂದರೆ ಕೋಟಿ ಗಟ್ಟಲೆ ಹಣ ಚೆಲ್ಲಿ ನಡೆಸುವ ಒಂದು ಉದ್ಯಮ. ಕೆಲವು ಪತ್ರಿಕೆಗಳು ದಿವಾಳಿಯಾಗಿವೆ. ನಮ್ಮ ಮುಂಬೈಯಲ್ಲಿ ಕೆಲವು ವರ್ಷಗಳ ಕೆಳಗೆ ಒಂದು ಪತ್ರಿಕೆಯನ್ನು ಪ್ರಾರಂಭಿಸಲೇ ಬೇಕೆಂದು ಪ್ರಯತ್ನ ಮಾಡಿದರು; ಆದರೆ ಅದು ಹೊರಕ್ಕೇ ಬರಲಿಲ್ಲ. ಇಷ್ಟು ಹಣ ಹಾಕಿದ ಮೇಲೂ ತನ್ನ ಸಮಾಜಕ್ಕೆ ಬೇಕಾದ ವಿಷಯಗಳನ್ನು ಅಳವಡಿಸಿಕೊಳ್ಳುವುದಕ್ಕೆ ಒಬ್ಬ ಸಂಪಾದಕ ಸಾಲದು. ಅಂಥಾ ಬ್ರಹ್ಮ ಹುಟ್ಟಿಲ್ಲ. ಪತ್ರಿಕೆ ಎಂದಮೇಲೆ ಎಲ್ಲಾ ವಿಚಾರಗಳೂ ಬೇಕಾಗುತ್ತದೆ. ಜನಗಳ ಅಪೇಕ್ಷೆಯನ್ನು ತಿಳಿದು ಅದಕ್ಕೆ ಸಮರ್ಪಕವಾದ ಯೋಜನೆಯನ್ನು ಮಾಡಬೇಕು. ಈ ದೇಶಕ್ಕೂ ಇನ್ನೊಂದು ದೇಶಕ್ಕೂ ಇರುವ ಸಂಪರ್ಕ, ಸಂಬಂಧ ತಿಳಿದುಕೊಂಡು ಜನಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನೂ, ವ್ಯಕ್ತಿಗಳಿಗೆ ಸಂಬಂಧಪಟ್ಟ ವಿಷಯಗಳನ್ನೂ ಪ್ರಕಟಿಸಬೇಕಾಗುತ್ತದೆ. ಪತ್ರಿಕಾ ಸ್ವಾತಂತ್ರ್ಯ ಎಂಬ ಕೂಗು ಎದ್ದಿದೆ ಎನ್ನಿ: ಇದು ಯಾವ ವಿಷಯಗಳಿಗೆ ಅನ್ವಯಿಸುತ್ತದೆ? ಜನರ ಮನಸ್ಸಿಗೆ ಸಂಸ್ಕಾರ ಕೊಡುವ ವಿಚಾರಗಳು ಯಾವುವು ಎಂಬುದನ್ನು ತಿಳಿದುಕೊಂಡಾಗ ಅದಕ್ಕೆ ತಕ್ಕಂತೆ ಪತ್ರಿಕೆಗಳಲ್ಲಿ ವರ್ತಮಾನ ಬರುವುದು, ಅಭಿಪ್ರಾಯ ಬರುವುದು, ಸುದ್ದಿಯೂ ಬರುವುದು; ಜನರಿಗೆ ರಂಜನೆ ಕೊಡುವ ಅನೇಕ ಕಲೆಗಳ ವಿಚಾರವೂ ಬರಬಹುದು. ನಮ್ಮ ಪತ್ರಿಕೆಗಳಲ್ಲಿ ಸಿನಿಮಾ ತಾರೆಯರ ವಿಚಾರ ಬಿಟ್ಟರೆ ಉಳಿದುದೆಲ್ಲವನ್ನೂ ರಾಜಕೀಯ ಪುಡಾರಿಗಳು ಒದಗಿಸುತ್ತಾರೆ. ಇಂಥದಕ್ಕೆ ಹೆಚ್ಚಿನ ಶ್ರಮವಾಗುವುದಿಲ್ಲ. ಸುದ್ದಿಗಳ ಪ್ರಶ್ನೆ ಬಂದಾಗ ಒಬ್ಬ ಪತ್ರಿಕಾಕರ್ತರು ನಮ್ಮ ಜವಾಬ್ದಾರಿ ಇಷ್ಟೆ, ಪೋಸ್ಟಾಫೀಸ್ ಕೆಲಸ, ಕನ್ನಡದಲ್ಲಿ ಬಟವಾಡೆ ಮಾಡುವ ಕೆಲಸ, ಸತ್ಯ – ಅಸತ್ಯದ ವಿಚಾರ ಇಲ್ಲ ಎಂದು ಹೇಳಿ

ದ್ದಾರೆ. ಜಾಗ್ರತೆ ವಾರ್ತೆಯನ್ನು ತಿಳಿಯುವುದಕ್ಕೆ ನಮ್ಮಲ್ಲಿ ಸಾಧನ ಸಂಪರ್ಕ ಇಲ್ಲದೇ ಪಿ.ಟಿ.ಐ., ರ್‍ಯಾಟರ್ ಮುಂತಾದುವುಗಳ ಸಹಾಯದಿಂದ ವರ್ತಮಾನ ಬರುತ್ತದೆ. ಇದಲ್ಲದೆ ಬೇರೆ ಉಪಾಯವೇ ಇಲ್ಲ. ಆದರೆ ಜವಾಬ್ದಾರಿಯುಳ್ಳ ಒಂದು ಪತ್ರಿಕೆ ಒಂದು ದೇಶದ ಪ್ರಭಾವಿ ವಿದ್ಯಮಾನಗಳನ್ನು ತಿಳಿಯುವುದಕ್ಕೆ ಸ್ವಂತ ಸುದ್ದಿಗಾರರನ್ನು ನೇಮಿಸಿ ಕೊಳ್ಳಬೇಕಾಗುತ್ತದೆ. ಆ ತ್ರಾಣ ಇಲ್ಲದೇ ಇರುವವರು ಈ ಕೆಲಸವನ್ನು ನಿರ್ವಹಿಸ ಲಾರರು. ನಮಗೆ ಸ್ವಂತ ಸುದ್ದಿಗಾರರಿಂದ ಮಣಿಪಾಲದಲ್ಲಿ ಕಂಬಳ ಆಯಿತು ಎಂಬ ಸುದ್ದಿ ಬರಬಹುದು; ಆದರೆ ಹೊಚಿಮಿನ್ ವಿಚಾರವಾಗಲೀ, ನಿಕ್ಸನ್ ವಿಚಾರವಾಗಲೀ, ಅಮೇರಿಕದ ವಿದೇಶಾಂಗ ಧೋರಣೆ ವಿಚಾರವಾಗಲೀ ರ್‍ಯಾಟರ್ ಸುದ್ದಿ ಕೊಟ್ಟರೆ ಉಂಟು, ಇಲ್ಲದೇ ಇದ್ದರೆ ಇಲ್ಲ.

ಬೊಂಬಾಯಿ ಬಂದರಿನಲ್ಲಿ ಚಿನ್ನ ತುಂಬಿದಂತಹ ಒಂದು ಹಡಗು ಸ್ಫೋಟವಾಗಿ ಮುಳುಗಿದಾಗ ಆ ಸುದ್ದಿಯನ್ನು ಸಂಗ್ರಹಿಸುವುದಕ್ಕೆ ನಾವು ಸ್ವಂತವಾಗಿ ಏರ್ಪಾಡು ಮಾಡದೆ ಇರುವುದರಿಂದ ಇತರ ಪತ್ರಿಕೆಗಳಿಂದ ಕಡ ತೆಗೆದುಕೊಳ್ಳಬೇಕಾಗುತ್ತದೆ. ಈಗ ನ್ಯೂಯಾರ್ಕ್, ಬಾನ್‌ನಲ್ಲಿ ಪ್ರತಿನಿಧಿಗಳು ಇದ್ದಾರೆ; ಇತರ ಇಂಗ್ಲಿಷ್ ಪತ್ರಿಕೆಗಳ ಪ್ರತಿನಿಧಿಗಳೂ ಇದ್ದಾರೆ. ಅವರು ಬರೆಯುವ ಸುದ್ದಿಗೂ ನಮ್ಮ ಸುದ್ದಿಗೂ ಬಹಳ ವ್ಯತ್ಯಾಸ ಇರುತ್ತದೆ. ನಮ್ಮ ಸುದ್ದಿ ಕೆಲವು ಮಟ್ಟಿಗೆ ಇತರ ಪತ್ರಿಕೆಗಳಲ್ಲಿ ಬಂದ ವಿಚಾರ ವಾಗಿರುತ್ತದೆ. ತಂತಿ ರೂಪದಲ್ಲಿ, ಲಂಡನ್ ಪತ್ರ, ಬರ್ಲಿನ್ ಪತ್ರ – ಹೀಗೆ ವಾರ್ತೆ ಬರುವಾಗ ಆ ಸುದ್ದಿಯ ಸಂಪೂರ್ಣ ಹೊಣೆ ನಮ್ಮ ಪ್ರತಿನಿಧಿಯ ಮೇಲೆ ಇರುತ್ತದೆ. ಅದನ್ನು ಜನರಿಗೆ ಬಟವಾಡೆ ಮಾಡುತ್ತಾರೆ.

ಅಂದಮೇಲೆ ಹೊಣೆ ಪತ್ರಿಕೆಯ ಮೇಲೂ ಇದೆ. ಅದನ್ನು ನಂಬಿ ಎಲ್ಲಿಯಾದರೂ ಅಗ್ರಲೇಖ ಬರೆದರೆ ಆಗಲೂ ಹೊಣೆ ಸಂಪಾದಕನದಾಗುತ್ತದೆ. ಇದು ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ ಬರತಕ್ಕ ಕೆಲಸ ಅಂತ ತಿಳಿದುಕೊಂಡರೆ ಮಾತ್ರ ಈ ಹೊಣೆ ತಪ್ಪಿಸಿ ಕೊಳ್ಳಬಹುದು.

ಇನ್ನು ಎರಡನೆಯದು ಜನಕ್ಕೆ ಏನು ಬೇಕಾಗುತ್ತದೆ ಎನ್ನುವ ವಿಚಾರ. ಜನಕ್ಕೆ ತಮ್ಮ ಭಾವನೆಗೆ ಸಂಬಂಧಪಟ್ಟ ಪ್ರತಿಯೊಂದು ವಿಚಾರವೂ ಬೇಕಾಗುತ್ತದೆ. ಆದರೆ ಏನು ಅನ್ನುವುದು ಅವರಿಗೇ ಗೊತ್ತಿರುವುದಿಲ್ಲ. ಅವರನ್ನು ಮೇಲಕ್ಕೆ ಎತ್ತುವ ಕೆಳಕ್ಕೆ ಹಾಕುವ ಹೊಣೆ ಹೊತ್ತಿರತಕ್ಕವರು ನಾವು. ಅವರ ದುಡ್ಡಿನ ಮೇಲೆ ಬದುಕತಕ್ಕಂತಹ ಪತ್ರಿಕೆಯ ಹೊಣೆ ಏನೆಂಬುದನ್ನು ಮೊದಲು ತಿಳಿಯಬೇಕಾಗುತ್ತದೆ. ಫ್ರೀಡಂ ಆಫ್ ದಿ ಪ್ರೆಸ್ ಎಂದರೆ ಏನು? ತನ್ನ ತನ್ನ ಉದ್ಯೋಗ ಮಾಡತಕ್ಕ ಪ್ರಜೆಗೆ ಇರುವ ಮೂಲಭೂತ ಹಕ್ಕು ಯಾವುದು? ಜಗತ್ತಿನ ವಿದ್ಯಮಾನದಿಂದ ಅದಕ್ಕೆ ಬರಬಹುದಾದ ಧಕ್ಕೆ ಏನು? ಪಾರ್ಲಿಮೆಂಟಿನಲ್ಲಿ ಆಗುವ ಶಾಸನಗಳಿಂದ ಆಗತಕ್ಕ ಧಕ್ಕೆ ಏನು? ಇದನ್ನು ನಾವು ತಿಳಿದುಕೊಳ್ಳಬೇಕಾಗುತ್ತದೆ. ಪತ್ರಿಕಾ ಸ್ವಾತಂತ್ರ್ಯ ಬಿಡಿ, ನಾಟಕ ಆಡುವ ಸ್ವಾತಂತ್ರ್ಯ, 'ಫ್ರೀಡಂ ಆಫ್ ದಿ ಡ್ರಾಮ' ನಾನು ತೆಗೆದುಕೊಳ್ಳುತ್ತೇನೆ. ಒಬ್ಬ ಪ್ರಸಿದ್ಧ ಪತ್ರಿಕಾಕರ್ತರು ನಾಟಕಗಳ ಸೆನ್ಸಾರ್‌ಗೆ ಬೆಂಗಳೂರಿನಲ್ಲಿ ಕೈ ಹಚ್ಚಿದ್ದಾರೆ, ಮಂತ್ರಿಗಳನ್ನು ಲೇವಡಿ ಮಾಡಿದ್ದಕ್ಕೆ. ನಾಟಕವನ್ನು ಸೆನ್ಸಾರ್ ಮಾಡಬೇಕೆ? ಈ

ಕಲ್ಪನೆ ಇದ್ದರೆ, ಅಂತಹ ಕಲ್ಪನೆ ಉಳ್ಳಂತಹ ವ್ಯಕ್ತಿಗಳು ಜನಗಳ ಹಿತವನ್ನು ಎಂದಿಗೂ ಸಾಧಿಸಲಾರರು.

ಮೂಲಭೂತವಾದ ಹಕ್ಕುಗಳ ವಿಚಾರವಾಗಿ ಕೋಲಾಹಲ ನಡೆದದ್ದನ್ನು ನೋಡಿದ್ದೀರಿ. ಪಕ್ಷ ಪ್ರತಿಪಕ್ಷಗಳು ಎಲ್ಲಾ ವಿಷಯದಲ್ಲೂ ಇವೆ. ಇದ್ದರೂ ಕೂಡ ಕನ್ನಡ ಪತ್ರಿಕೆಗಳು ಆ ಸಂದರ್ಭದಲ್ಲಿ ಯಾವ ಪಾತ್ರವನ್ನು ವಹಿಸಿದ್ದಾವೆ? ನಮ್ಮ ಸಂವಿಧಾನ ಅಭ್ಯಾಸ ಮಾಡಿದ್ದಾರೆಯೇ? ಸಂಬಂಧಪಟ್ಟ ನ್ಯಾಯಶಾಸ್ತ್ರದ ಪುಟಗಳನ್ನು ಕಂಡಿದ್ದಾರೆಯೆ? ಭಾರತೀಯ ಪ್ರಜೆಯ ಜನ್ಮಸಿದ್ಧವಾದ ಹಕ್ಕನ್ನು ಉಳಿಸುವುದಕ್ಕಾಗಿ ತಮ್ಮ ಮಾತಿನ ಯಾವ ಕಾಣಿಕೆಯನ್ನು ಸಲ್ಲಿಸಿದ್ದಾರೆ? ಇದು ನಮ್ಮಲ್ಲಿರುವ ಎಲ್ಲಾ ಪತ್ರಿಕೆಗಳನ್ನೂ ನೋಡಿದರೆ ತಮಗೆ ಗೊತ್ತಾಗುತ್ತದೆ–ಪಾರ್ಲಿಮೆಂಟ್‌ನಲ್ಲಿ ಏನು ತೀರ್ಮಾನವಾಯಿತೋ ಅದನ್ನು ನಮಗೆ ಒಪ್ಪಿಸಿದ್ದಾರೆ. ತಮ್ಮ ತಲೆಯ ಮೇಲೆ ಬಿದ್ದ ಭಾರದಿಂದ ಜನಗಳ ಜೀವನ ಏನಾಗುತ್ತದೆ? ಯಾವ ಪಕ್ಷವನ್ನೇ ವಹಿಸಿ, ನನಗೆ ಅದು ದೊಡ್ಡದಲ್ಲ. ಆದರೆ ನಿಮ್ಮ ಅಭಿಪ್ರಾಯವೇನು? ಇದು ಪ್ರಶ್ನೆ. ಪತ್ರಿಕೆ ಎಂದರೆ ಅದರಲ್ಲಿ ಪೂರ್ಣ ರಾಜಕೀಯವೇ ಹೊರತು ಇನ್ನೇನೂ ಇಲ್ಲವೇ ಎಂಬ ಪ್ರಶ್ನೆ ಬರುತ್ತದೆ. ಯೂರೋಪಿನ ಯಾವ ಪತ್ರಿಕೆಯನ್ನು ತೆಗೆದುಕೊಂಡರೂ ದಿವಸಕ್ಕೆ ಹದಿನಾರು ಕಡೆ ಮಂತ್ರಿಗಳ ಮುಖವನ್ನು ನಾವು ಕಾಣುವುದಿಲ್ಲ. ಎಲ್ಲರ ಹಾಗೆ ಮಂತ್ರಿಗಳು. ಮಾಸ್ಟರು ಎಷ್ಟು ಪವಿತ್ರರೋ ಮಂತ್ರಿಗಳೂ ಅಷ್ಟೇ ಪವಿತ್ರರು. ಒಬ್ಬ ಕಸುಬುದಾರ, ಒಬ್ಬ ಕಲಾವಿದ ಕೂಡ ಅಷ್ಟೇ ಪವಿತ್ರ. ಇವತ್ತು ಪತ್ರಿಕೆಗಳು ರಾಜಕೀಯ ಸುದ್ದಿ, ರಾಜಕೀಯ ವ್ಯಕ್ತಿಗಳಿಗೆ ಕೊಡತಕ್ಕ ಪ್ರಾಧಾನ್ಯ ನೋಡಿದರೆ ಇವರು ಪತ್ರಿಕೆಯ ಧರ್ಮವನ್ನು ಪೂರ್ತಿಯಾಗಿ ಮರೆತಿದ್ದಾರೆ ಎನ್ನಬೇಕು. ರಾಜಕೀಯದ ತೂಕ ಅಳತೆ ಮೀರಿ, ಜೀವನಕ್ಕೆ ಸಂಬಂಧಪಟ್ಟ ಇತರ ವಿಷಯಗಳಿಗೆ ಸ್ಥಾನ ಸಿಗದೆ ಹೋಗಿದೆ – ಹಿರಿಯಡಕದಲ್ಲಿ ಇಂಥವರ ಅಧ್ಯಕ್ಷತೆಯಲ್ಲಿ, ಇಂಥ ಬಾಲಕರಿಂದ ಇಂತಹ ಕಾರ್ಯಕ್ರಮ ಆಯಿತು, ಆ ಶಾಲೆಯ ತರ್ಕಸಭೆಯಲ್ಲಿ 9ನೇ ಕ್ಲಾಸ್‌ನವರು ಕಾಗೆ ಮೇಲೋ, ಕೋಳಿ ಮೇಲೋ ಎಂದು ವಾದಿಸಿದರು ಅಂತ ಕೆಲವು ಪತ್ರಿಕೆಗಳಲ್ಲಿ ಬಂದ ವರ್ತಮಾನದಿಂದ ಜನಜೀವನವನ್ನು ಸುಧಾರಿಸಲು ಸಾಧ್ಯವೆ? ಇಲ್ಲಿ ಏನು ನೋಡುತ್ತೇವೆ? ಹಿರಿಯಡಕಕ್ಕೆ ಎಷ್ಟು ಪತ್ರಿಕೆಗಳು ಹೋಗುತ್ತವೆ, ನಾಲ್ಕು ಜನರ ಹೆಸರು ಇಲ್ಲದಿದ್ದರೆ, ಪತ್ರಿಕೆ ಕೊಳ್ಳುವುದಿಲ್ಲ, ಏನು ಮಾಡಬೇಕು? ನಮ್ಮ ಮಟ್ಟ ಹೆಚ್ಚಾಗುತ್ತಿದೆಯೇ, ಕಡಿಮೆಯಾಗುತ್ತಿದೆಯೆ; ಅಳತೆಯಲ್ಲಿದೆಯೇ ಅಂತ ಒಂದು ಅನುಮಾನ ವಿಮರ್ಶಿಸುವಾಗ ಬರುತ್ತದೆ.

ವರದಿಗಾರ ಸಾರ್ಥಕವಾಗಿ ಕೆಲಸ ಮಾಡಬೇಕಾದರೆ, ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದರೆ ಎರಡು ದಾರಿ ಇದೆ. ಒಂದು ಈ ಸಂಪಾದಕ ಬೇಕು ಎಂಬ ಅನಿಸಿಕೆಯನ್ನು ಪತ್ರಿಕಾ ಮಾಲೀಕರಲ್ಲಿ ಹುಟ್ಟಿಸಬೇಕು. ಇವನನ್ನು ತೆಗೆದುಕೊಂಡರೆ, ನಮ್ಮ ಪತ್ರಿಕೆಗೆ ಪ್ರತಿಷ್ಠೆ ಬರುತ್ತದೆ, ಜನತೆ ನೋಡುತ್ತದೆ, ಸರ್ಕಾರ ಸ್ವಲ್ಪ ಆಲೋಚನೆ ಮಾಡುತ್ತದೆ ಅನ್ನುವಂತಹ ಪ್ರತಿಷ್ಠೆಯನ್ನು ಆತ ಗಳಿಸಬೇಕು. ಒಟ್ಟು ಹಿಂದುಸ್ತಾನದಲ್ಲಿ ಅಂತಹ ಪ್ರತಿಷ್ಠೆಯನ್ನು ಸಂಪಾದಿಸಿದ 4–5 ಮಂದಿ ಪತ್ರಿಕಾಕರ್ತರು ಇದ್ದಾರೆಯೋ ಏನೋ, ಉಳಿದವರಿಗೆ ಅಂತಹ ಪ್ರತಿಷ್ಠೆ ಬಂದಿಲ್ಲ. ಅವರ ಲೇಖನಗಳಿಂದ ಅವರು

ಅದನ್ನು ಹುಟ್ಟಿಸಿಲ್ಲ. ಹುಟ್ಟಿಸಿದರೂ, "ಹಿಂದೂ ಸೇಸ್", "ಮೇಲ್ ಸೇಸ್", "ಸ್ಟೇಟ್ಸ್‌ಮನ್ ಸೇಸ್" ಅಂತ ಹೊರಗಿನವರು ನಮ್ಮ ಪತ್ರಿಕೆಗಳನ್ನು ಉದ್ಧರಿಸುವುದುಂಟೆ? ಪಬ್ಲಿಕ್ ಒಪೀನಿಯನ್ ಅಂತ ಪ್ರತಿಪಾದಿಸತಕ್ಕ ಯಾವ ಸಂಪಾದಕನ ಅಭಿಪ್ರಾಯಗಳನ್ನು ಹೊರಗಿನ ದೇಶದವರು ಎತ್ತಿಕೊಳ್ಳುತ್ತಾರೆ, ಯಾವ ಪತ್ರಿಕೆಯಿಂದ ಎಂಬುದನ್ನು ನೋಡಬೇಕು. ಇಡೀ ದಕ್ಷಿಣ ಹಿಂದೂಸ್ತಾನಕ್ಕೆ ಹಿಂದೂ ಮಾತು ಬಂದದ್ದು ಉಂಟು. ಬೊಂಬಾಯಿನ ಟೈಂಸ್ ಮಾತು ಬಂದದ್ದು ಉಂಟು, ಸ್ಟೇಟ್ಸ್‌ಮನ್ ಮಾತು ಬಂದದ್ದು ಉಂಟು. ಹಿಂದಿನ ಕಾಲದಲ್ಲಿ ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ 'ಮೇಲ್' ಮಾತು ಬಂದದ್ದು ಉಂಟು. ಏಕೆ? ಇದು ಸಂಪಾದಕರು ತಾವೇ ಪ್ರಶ್ನೆ ಮಾಡಿಕೊಳ್ಳಬೇಕಾದ ವಿಚಾರ. ಆತನಿಗೆ ಸಾರ್ವಜನಿಕ ಜೀವನದಲ್ಲಿ, ರಾಜಕೀಯ. ಶಾಸನಗಳ ವಿಚಾರದಲ್ಲಿ, ವಿದೇಶಾಂಗ ನೀತಿಯಲ್ಲಿ ಬರತಕ್ಕ ಸಮಸ್ಯೆ, ಇವುಗಳ ಹಿನ್ನೆಲೆ, ತಿಳಿದಿರಬೇಕಾಗುತ್ತದೆ. ಕಳೆದ ಮಹಾ ಯುದ್ಧದ ಕಾಲದಲ್ಲಿ "ಎಲವೋ ಚರ್ಚಿಲ್‌ನೇ ಬಾ ಇಲ್ಲಿ ರಂಗಸ್ಥಳಕ್ಕೆ" ಎಂದು ಕನ್ನಡದಲ್ಲಿ ಬರೆದ ಸಂಪಾದಕರಿದ್ದಾರೆ. ಚರ್ಚಿಲ್ ಯಾರು? ಅವನ ಪ್ರಭಾವ ಏನು? ಇದು ಗೊತ್ತಿಲ್ಲದೆ ಅಷ್ಟು ದೂರದಲ್ಲಿರುವವನನ್ನು ಧೈರ್ಯವಾಗಿ ಬಾರಯ್ಯ ಅಂತ ಕರೆಯಲಿಕ್ಕೆ ಅಡ್ಡಿ ಏನೂ ಇಲ್ಲ. ಆದರೆ ಈ ಮಕ್ಕಳಾಟಿಕೆಯಿಂದ ಏನು ಪ್ರಯೋಜನ? ಮೊದಲು ಧೀಮಂತಿಕೆಯನ್ನು ಸಂಪಾದಿಸಬೇಕು.

ನ್ಯೂಸ್ – ಸುದ್ದಿ – ಪ್ರಶ್ನೆ ಬರುವಾಗ ಸುದ್ದಿಯನ್ನು ಸ್ವಂತ ಸಂಪಾದನೆ ಮಾಡುವವನಿಗೆ ಎಷ್ಟು ಸಂಗ್ರಹ ಮಾಡಬೇಕಾಗುತ್ತದೆ, ಎಲ್ಲಿ ತಿರುಗಾಡಬೇಕಾಗುತ್ತದೆ, ಹೇಗೆ ಸಂಪಾದನೆ ಮಾಡಬೇಕಾಗುತ್ತದೆ ಎಂಬ ಪ್ರಶ್ನೆ ಬರುತ್ತದೆ. ಯಾವ ವ್ಯಕ್ತಿ ತನ್ನ ಯೋಗ್ಯತೆಯಿಂದ, ತನ್ನ ಪ್ರೌಢಿಮೆಯಿಂದ, ತನ್ನ ಸ್ನೇಹಪರತೆಯಿಂದ ರಾಜಕೀಯಕ್ಕೋ, ಆರ್ಥಿಕ ಸ್ಥಿತಿಗತಿಗೋ, ಕಲೆಗೋ ಸಂಬಂಧಪಟ್ಟ ಮಾತನ್ನು ಹೇಳುತ್ತಾನೋ ತನ್ನ ಪ್ರತಿಷ್ಠೆ ಬೆಳೆಸಿಕೊಂಡಿದ್ದಾನೋ ಅಂಥವನಿಗೆ ಮಂತ್ರಿಗಳಲ್ಲಿ, ಇನ್ನೊಬ್ಬರಲ್ಲಿ ಪ್ರವೇಶ ಸುಲಭ. ರಾಜಕೀಯ ವರ್ತುಲದಲ್ಲಿ ವರ್ಚಸ್ಸು ಉಳ್ಳವರ ಮನೆಗೆ ಟೆಲಿಫೋನ್ ಎತ್ತಿ ಮಾತನಾಡತಕ್ಕ ಸೌಕರ್ಯ ಒಬ್ಬ ಪತ್ರಿಕಾಕರ್ತನಿಗೆ ಬಂದರೆ ಅದು ಅವನ ಸ್ವಂತ ಯೋಗ್ಯತೆ ಪ್ರತಿಷ್ಠೆಯಿಂದಾಗಿ ಬಂದಿರುತ್ತದೆ. ಇನ್ನೊಂದು ಸುಲಭದ ದಾರಿ ಉಂಟು: ಮಾನ್ಯ ಮಂತ್ರಿಗಳು ಇಂತಹ ಕೆಲಸ ಮಾಡಿದರು ಎಂದು ಅವರ ಹಿಂದೆ ಹೋಗಿ, ಅವರ ಫೋಟೋ ಹಾಕಿ ಮೇಲಿಂದ ಅವರನ್ನು ಹೊಗಳಿದರೆ ಆಯಿತು. ಅವರು ಎಚ್ಚರ ಇದ್ದೋ ತಪ್ಪಿಯೋ ಬಾಯಿ ಬಿಡುತ್ತಾರೆ. ಅಂತೂ ಅವರು ಆಡಬಾರದ ಮಾತುಗಳು. ಬಹಿರಂಗಕ್ಕೆ ಬರದಂತಹ ವರ್ತಮಾನವನ್ನು ಹೊರಗೆ ಹಾಕುವುದಕ್ಕೆ ಒಂದು ಅವಕಾಶವಾಗುತ್ತದೆ. ಅಥವಾ ಅವನು ಹೇಳಲಿಕ್ಕೆ ಉದ್ದೇಶಪಡದ ಮಾತನ್ನು ನಿಮ್ಮ ಬುದ್ಧಿವಂತಿಕೆಯಿಂದ ಇಂತಹ ಪ್ರಮೇಯದಲ್ಲಿ ಏನು ಮಾಡುತ್ತೀರಿ ಎಂದು ಕೆಣಕಿ ಎಳೆಯಬಹುದು. 'I refuse to talk' ಎಂದರೆ ನಿಮ್ಮ ತೀರ್ಮಾನ ನೀವೇ ಮಾಡಬಹುದು. ಬಾಯಿ ಬಿಟ್ಟರೆ ಹೇಗೂ ಬರುತ್ತದೆ. ಇದು ವರದಿಗಾರನ ತಂತ್ರ. ಅನೇಕ ಜವಾಬ್ದಾರಿ ಪತ್ರಿಕೆಗಳು ಇಂತಹ ನಾಲ್ಕು ವರದಿಗಾರರನ್ನು ಛೂ ಬಿಡುತ್ತಾರೆ. 1918ನೇ ಇಸವಿಯಲ್ಲಿ ವರ್ಸಾಯಿ ಒಪ್ಪಂದಕ್ಕೆ ಸಹಿ ಬೀಳುವುದಕ್ಕೆ 22 ಗಂಟೆಗಳ ಮೊದಲೇ ಸುದ್ದಿ

ನ್ಯೂಯಾರ್ಕ್ ಪತ್ರಿಕೆಯಲ್ಲಿ ಪ್ರಕಟವಾಯಿತು. ಇದು ಹೇಗೆ ಸಾಧ್ಯ? ಚರ್ಚೆ ಮುಗಿದಿರಲಿಲ್ಲ. ಯುದ್ಧ ಮೊದಲಾದ ವಿಚಾರದಲ್ಲಿಯೂ ಇದೇ ಪ್ರಶ್ನೆ ಬರುತ್ತದೆ – ಇನ್ನೂ ಅಪಾಯಕಾರಿ ಪ್ರಶ್ನೆ. ಸೈಗಾನಿನ ಮೇಲೆ ಪ್ರತಿಭಟನೆ ಬಂದಾಗ ಅಮೆರಿಕನ್ ಪತ್ರಿಕಾ ಕರ್ತರು ಅಲ್ಲೇ ಹೋಗಿ ತಮ್ಮ ಸರ್ಕಾರವನ್ನು ಕೇಳದೆ ಬೇಕುಬೇಕಾದ ವರ್ತಮಾನವನ್ನು ಹೊರಡಿಸಿ ಇವತ್ತು ಜನತೆ ಯುದ್ಧ ನಿಲ್ಲಿಸಿ ಎಂದು ಹೇಳುತ್ತಾ ಇದ್ದಾರೆ ಎಂದು ಸಾರಿದರು. ಅವರ ಸಾಹಸ, ಧೈರ್ಯ ಎಷ್ಟು ಎಂಬುದು ನಮಗೆ ಗೊತ್ತಾಗುತ್ತದೆ. ನಮ್ಮ ಸುದ್ದಿಗಾರರು, ಪತ್ರಿಕಾಕರ್ತರು ತಮ್ಮ ಸ್ಥಳಬಿಟ್ಟು ಇಂತಹ ಸಮಸ್ಯೆಗಳಿರುವ ತೊಡಕಿನ ಕೇಂದ್ರಗಳಿಗೆ ಯಾವುದೇ ಒಂದು ವಿಷಯಕ್ಕೆ ಹೋದದ್ದು ಉಂಟೇ ಎಂದು ನಾನು ಕೇಳುತ್ತೇನೆ. ಹೇಗೆ ಜನರನ್ನು ಎಚ್ಚರಿಸುತ್ತಾರೆ? ಯಾವ ಸುದ್ದಿಗೆ? ನಾವೇ ಹಾಸಿಗೆಯಿಂದ ಏಳದೆ, ಉಳಿದವರನ್ನು ಎಬ್ಬಿಸುವುದು ಹೇಗೆ?

ಹಿಂದಿನ ಕಾಲದಲ್ಲಿ ಇಂಥ ತಾರೀಖಿನ ವರೆಗೆ ಒಂದು ರಾಷ್ಟ್ರೀಯ ಧರ್ಮ ಇತ್ತು ಈಗ ಸ್ವಾತಂತ್ರ್ಯ ಬಂದ ಮೇಲೆ ಹೋಯಿತು. ಆ ರಾಷ್ಟ್ರೀಯ ಧರ್ಮ ಇದ್ದಾಗ ಒಳ್ಳೆಯ ಪತ್ರಿಕಾಕರ್ತರು ಸಿಕ್ಕುತ್ತಾ ಇದ್ದರು, ಈಗ ಇಲ್ಲ. ಯುದ್ಧ ಯೂರೋಪಿನಲ್ಲಿ ತೊಡಗಿದ್ದ ಕಾಲ, ಚೇಂಬರ್‌ಲೇನ್ ಕೊಡೆ ಮಡಚಿದರು. ಚರ್ಚಿಲ್ ಇಂಗ್ಲೆಂಡಿನ ರಾಷ್ಟ್ರೀಯ ಸರ್ಕಾರದ ನಾಯಕರಾದರು. ಯುದ್ಧ ಮುಗಿದಾಕ್ಷಣ ಅಲ್ಲಿನ ಜನ ಅವರನ್ನು ಕೆಳಗೆ ಹಾಕಿತು, ಆಟ್ಲಿ ಸರ್ಕಾರ ಬಂತು. ಯುದ್ಧಕಾಲಕ್ಕೆ ಚರ್ಚಿಲ್ ಅನಿವಾರ್ಯ, ಶಾಂತಿ ಕಾಲಕ್ಕೆ ಆತ ಹಿತವಲ್ಲ ಎಂಬ ತೀರ್ಮಾನವನ್ನು ಜನತೆ ಮಾಡಿತು. ಇದೇ ರೀತಿ ದೇಶಭಕ್ತಿಯನ್ನು ಕೆರಳಿಸಿ, ಬ್ರಿಟಿಷರನ್ನು ದೂಷಿಸಿ ಸ್ವಲ್ಪ ಕಾಲ ಕಳೆಯಬಹುದು. ಆದರೆ ನಮ್ಮ ಜವಾಬ್ದಾರಿಯನ್ನು ನಾವು ಹೊರುವಾಗ ಎಲ್ಲಾ ಸಮಸ್ಯೆಗಳು ಬರುತ್ತವೆ. ಆಗ ರಾಷ್ಟ್ರಭಕ್ತಿ ಒಂದೇ ಸಾಲದು. ರಾಷ್ಟ್ರ ಏನಾಗಬೇಕು? ಅದನ್ನು ರೂಪಿಸುವ ದಾರಿ ಏನು? ಅದಕ್ಕೆ ಸಂಬಂಧಪಟ್ಟ ಆರ್ಥಿಕ ನೀತಿ ಏನು, ರಾಜಕೀಯ ನೀತಿ ಏನು? ಜನಗಳ ಮನಸ್ಸನ್ನು ಸಂಸ್ಕರಿಸತಕ್ಕ ವಿಧಾನ ಯಾವುದು ಎಂಬ ಪ್ರಜ್ಞೆ ಇರತಕ್ಕ ಸಂಪಾದಕ ಬೇಕು. ರಾಷ್ಟ್ರೀಯ ಮನೋಧರ್ಮ, ರಾಷ್ಟ್ರಾಂಧತೆಯ ಮನೋಧರ್ಮ ಮೃತ್ಯುಕಾರಿ ಆಗಲೂಬಹುದು. ಜಗತ್ತಿನೊಡನೆ ಹೊಂದಿಕೊಂಡಿರುವ ಯಾವುದೇ ದೇಶ ಕೇವಲ ತನ್ನ ಹಿತದ ಸಲುವಾಗಿಯೇ ವರ್ತಿಸುತ್ತಾ ಇದ್ದರೆ ಅಪಾಯ ಬರಲೂಬಹುದು. ಅದನ್ನು ಪಾಕಿಸ್ತಾನ ಮಾಡುತ್ತಾ ಇದೆ. ನೀವು ಒಪ್ಪಿಕೊಳ್ಳಲಿಕ್ಕೆ ತಯಾರಾಗಿದ್ದೀರಾ? ಪಾಕಿಸ್ತಾನ್ ಪತ್ರಿಕಾ ಸಂಪಾದಕರು ಪಾಕಿಸ್ತಾನ್ ರಾಷ್ಟ್ರೀಯತೆಯನ್ನು ಪ್ರಚೋದಿಸುತ್ತಾ ಇದ್ದಾರೆ. ಅದರ ಪರಿಣಾಮ ಅವರ ಪತ್ರಿಕೆಯಲ್ಲಿ ಬರುವಂಥಾದ್ದು ನಮ್ಮ ಹೊಟ್ಟೆಗೆ ತಂಪು ಕೊಡುತ್ತದೆಯೇ? ಇಂತಹ ಪ್ರಶ್ನೆಯಲ್ಲಿ ಪತ್ರಕರ್ತರು ತಮಗೆ ಹೊರಿಸಿದಂತಹ ಕಾರ್ಯದಲ್ಲಿ ಒಟ್ಟು ಹಿತದೃಷ್ಟಿಯಿಂದ ಯಾವುದು ಒಳ್ಳೆಯದು ಎಂದು ನೋಡಬೇಕಾಗುತ್ತದೆಯೇ ಹೊರತು ಪತ್ರಿಕೆಯ ಸ್ವಾತಂತ್ರ್ಯಕ್ಕೆ, ಮನೋಧರ್ಮಕ್ಕೆ ರಾಷ್ಟ್ರದ ಕಟ್ಟುಪಾಡು ಇಲ್ಲ ಎಂದು ನನಗೆ ತೋರುತ್ತದೆ.

ಸಾಮಾಜಿಕ ಮೌಲ್ಯಗಳ ಬದಲಾವಣೆಯ ಈ ಸಂಧಿಕಾಲದಲ್ಲಿ ಜನಸಾಮಾನ್ಯರ ಒಲವು ಹೇಗೆ ಸಂದರ್ಭಸಾಧಕತನಕ್ಕಾಗಿ ವಾಲುತ್ತಿದೆಯೋ ಅದೇ ಪ್ರವೃತ್ತಿ ಹೆಚ್ಚಾಗಿ

ಪತ್ರಿಕೆಗಳಲ್ಲೂ ಕಂಡುಬರುತ್ತದೆ ಎಂದು ಪ್ರಬಂಧಕಾರರು ಹೇಳಿದ್ದಾರೆ. ಯಾರು ಯಾವ ಕಡೆ ವಾಲುತ್ತಿದ್ದಾರೆ, ಜನಗಳ ಕಡೆಗೆ ಪತ್ರಿಕೆಗಳು ವಾಲುತ್ತಿವೆಯೇ, ಪತ್ರಿಕೆಗಳ ಕಡೆಗೆ ಜನರು ವಾಲುತ್ತಿದ್ದಾರೆಯೇ ಎಂಬುದನ್ನು ಹೇಳುವುದು ಕಷ್ಟ. ನಾನು ಕನ್ನಡ ಪತ್ರಿಕೆಗಳನ್ನೂ ತೆಗೆದುಕೊಳ್ಳುತ್ತೇನೆ, ಇಂಗ್ಲೀಷು ಪತ್ರಿಕೆಗಳನ್ನೂ ತೆಗೆದುಕೊಳ್ಳುತ್ತೇನೆ. ವರ್ತಮಾನ ತಿಳಿಯಬೇಕಾದರೆ ಮೊದಲು ಇಂಗ್ಲೀಷ್ ನೋಡಿಕೊಂಡು ಆಮೇಲೆ ಕನ್ನಡಕ್ಕೆ ಬರುತ್ತೇನೆ. ಇದು ಪ್ರಾಮಾಣಿಕವಾದ ವಿಚಾರ. ಎರಡನೆಯದು ಕೆಲವು ಭಾರತೀಯ ಇಂಗ್ಲಿಷ್ ಪತ್ರಿಕೆಗಳಲ್ಲೂ ಕೂಡ ಭೂಮಂಡಲವೇ ಇಲ್ಲ ಅಂತ ಕಾಣುತ್ತದೆ. ಜಗತ್ತಿನ ವರ್ತಮಾನವೆ ಇಲ್ಲದ ದೈನಿಕ ಇರಲಿಕ್ಕೆ ಸಾಧ್ಯವಿದೆ ಎಂದು ನನಗೆ ಕನಸಿನಲ್ಲೂ ಕಾಣುವುದಿಲ್ಲ. ಪ್ರತಿಯೊಂದು ದೇಶದ ಚಾಲ್ತಿ ರಾಜಕೀಯವನ್ನೂ ತಿಳಿಯದೆ ಸಂಪಾದಕನ ಶಕ್ತಿ ಬೆಳೆದೀತೆ? ಎಷ್ಟೋ ಜನ ಸಂಪಾದಕರು ದಿನದಿನದ ವಾರ್ತಾ ಪತ್ರಿಕೆಗಳಿಗೆ ಸಹಾಯವಾಗುವಂತಹ ಬೇರೆ ಬೇರೆ ದೇಶಗಳ ರಾಜಕೀಯವನ್ನು, ಇತರ ರಾಜಕೀಯವನ್ನು ಪ್ರಕಟಿಸುವ ಪೀರಿಯಾಡಿಕಲ್ಸ್ ಓದುತ್ತಾರೆಯೇ ಎಂಬ ಪ್ರಶ್ನೆಯನ್ನು ನಾನು ಕೇಳಬೇಕಾಗಿದೆ. ಅವರು ಓದಿದ್ದರ ದಾಖಲೆ ಅವರ ಪತ್ರಿಕೆಯಲ್ಲಿ ಕಾಣುವುದಿಲ್ಲ. ಎರಡನೆಯದಾಗಿ ಜನರನ್ನು ತಯಾರು ಮಾಡಬೇಕಾದರೆ ಹೊರಗಿನ ದೇಶಗಳಲ್ಲಿ ಹೀಗೆ ಹೀಗೆ ಆಗಿದೆ ಎಂದು ಎಚ್ಚರಿಕೆ ಕೊಡುವ ಹೊಣೆ ನಿಮ್ಮದು. ನಮ್ಮ ಜನಕ್ಕೆ ಅಂಗೋಲ ಎಲ್ಲಿದೆ, ಸೌತ್ ಆಫ್ರಿಕಾ ಎಲ್ಲಿದೆ, ಇಂತಹ ವ್ಯಕ್ತಿ ಯಾರು, ಚಿಲಿ ಇತ್ಯಾದಿ ದೇಶಗಳಲ್ಲಿ ಎಷ್ಟೆಷ್ಟು ಕ್ರಾಂತಿಯಾಗುತ್ತಾ ಇದೆ? ಇದಕ್ಕೂ ನಮಗೂ ಏನು ಸಂಬಂಧ? ಏಕೆ ಹಾಕಬೇಕು? ಅಶಿಕ್ಷಿತ ಜನರು, ಪೇಪರ್ ಓದದಿದ್ದವರು, ಓಟಿಗೆ ಸಹ ಕೈ ಎತ್ತದಿದ್ದವರು, ಸ್ವಾತಂತ್ರ್ಯ ಗಳಿಸಿದ ಮೇಲೆ ರಾಜ್ಯಗಳ ಸರ್ವಾಧಿಕಾರಿಗಳಾಗಿದ್ದಾರೆ. ಪಾರ್ಲಿಮೆಂಟುಗಳು ಎಂಟು ಎಂಟು ದಿವಸಕ್ಕೆ ಉರುಳುವುದನ್ನು ಬೇರೆ ದೇಶಗಳಲ್ಲಿ ಕಾಣುತ್ತಾ ಇದ್ದೇವೆ. ಈ ಧರ್ಮ ಕ್ಷೇತ್ರವಾದ ಹಿಂದೂಸ್ತಾನದಲ್ಲಿ ಇಂಥದೇನೂ ಆಗುವುದಿಲ್ಲ, ಆಗುವುದು ಅಸಾಧ್ಯ ಎಂದು ನಾವು ತಿಳಿದುಕೊಂಡಿದ್ದೇವೆ. ಜನಗಳನ್ನು ಈ ಪ್ರವೃತ್ತಿಯ ಬಗ್ಗೆ ಎಚ್ಚರಿಸಬೇಕು. ಎಚ್ಚರಿಸಬೇಕಾದರೆ ಪ್ರತಿಯೊಂದು ದೇಶದಲ್ಲಿ ಕ್ರಾಂತಿ ಹೇಗೆ ಆಯಿತು, ಅದರ ಹಿನ್ನೆಲೆ ಏನು ಎಂಬುದನ್ನು ನಾವು ತಿಳಿಯಬೇಕು. ಇಂಥಾದ್ದು ಇನ್ನೊಂದು ದೇಶದಲ್ಲಿ ಆಗುತ್ತಾ ಇದೆ, ಎಚ್ಚರ ಎಂದು ನಾವು ಹೇಳಬೇಕಾಗುತ್ತದೆ.

ಘೇರಾವೋ ಮುಂತಾದುವುಗಳನ್ನು ಗಮನಿಸಿ ಪತ್ರಿಕೆಗಳಲ್ಲಿ ಎಚ್ಚರಿಕೆಯಿಂದ ವರ್ತಮಾನವನ್ನು ಕೊಡಬೇಕಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಶಾಂತಿ ನೆಲಸುವಂತೆ, ರಾಷ್ಟ್ರದ ಕಾರ್ಯಸಾಧನೆಯಾಗುವಂತೆ, ಸ್ವಾತಂತ್ರ್ಯ ರಕ್ಷಣೆಗೆ ಅನುಕೂಲವಾಗುವಂತೆ ಒಂದು ಹೊಸ ಧೋರಣೆ ಅನುಸರಿಸಬೇಕಾಗುತ್ತದೆ. ಅದಕ್ಕೆ ತಕ್ಕ ಜನರನ್ನು ತಯಾರು ಮಾಡುತ್ತಿಲ್ಲ.

ಈ ದಿವಸ ಪತ್ರಿಕೆಗಳ ಸಂಖ್ಯೆ ಬೆಳೆಯುತ್ತಿದೆ, ಅದಕ್ಕೆ ಹಾಕುವ ಬಂಡವಾಳ ಹೆಚ್ಚುತ್ತಿದೆ. ಅದರ ಉಪಯೋಗ ಪಡೆಯುವುದು ಹೆಚ್ಚಾಗಿದೆ. ಮುದ್ರಣ ಚೆನ್ನಾಗಿರಬಹುದು, ರೋಟರಿ ಬಂದಿರಬಹುದು. ಆದರೆ ಹೊರಬರುವ ಮಾಲನ್ನು ನೋಡಿದರೆ ಸ್ಪಷ್ಟವಾಗಿ

ಹೇಳುವುದಾದರೆ ಇದು ಮಕ್ಕಳ ಆಟದ ಕ್ಷೇತ್ರವೇ ಹೊರತು ಪ್ರಾಯಪ್ರಬುದ್ಧರದಲ್ಲ ಎನಿಸುತ್ತದೆ. ದೇಶ ಎದುರಿಸುತ್ತಿರುವ ನವ–ಮನ್ವಂತರದ ಆಹ್ವಾನವನ್ನು ಸ್ವೀಕರಿಸಲು, ಕನ್ನಡ ಪತ್ರಿಕೆಗಳು ಎಷ್ಟರ ಮಟ್ಟಿಗೆ ಸಿದ್ಧವಾಗಿವೆ ಎಂಬುದನ್ನು ನಿರ್ಣಯಿಸುವುದು ಕಷ್ಟ. ಲೋಕದ ಅಪರಾಧಿಗಳ ರಸಪೂರ್ಣವಾದ ಆತ್ಮಕಥನಗಳನ್ನು ಪ್ರಕಟಿಸುತ್ತ ಓದುಗರ ಕೆಳಮಟ್ಟದ ಆಸಕ್ತಿಗಳನ್ನು ಕೆರಳಿಸಿ, ಮಾರಾಟ ಹೆಚ್ಚಿಸಿಕೊಂಡರೆ ನವ ಮನ್ವಂತರದ ಆಹ್ವಾನ ಇದಿರಿಸುವ ಶಕ್ತಿ ಹುಟ್ಟೀತೆ? ಇಂಥ ಕೀಳು ಆತ್ಮಕಥನಗಳನ್ನು, ಕೀಲರ್ ಕಥೆ ಮುಂತಾದ ಸಮಾಚಾರವನ್ನು ಪ್ರಕಟಿಸುವುದರಿಂದ ಜನರ ಮೇಲೆ ಯಾವ ರೀತಿಯ ಪರಿಣಾಮ ಆಗಬಹುದು ಎಂಬುದನ್ನು ಗಮನಿಸಬೇಕು. ಇಂಥ ಕುರುಕು ಸುದ್ದಿಯನ್ನು ಜನರಿಗೆ ಬಟವಾಡೆ ಮಾಡುವಾಗ ಸಮಾಜದ ಮೇಲೆ ಏನು ಪರಿಣಾಮ ವಾಗುವುದು ಎನ್ನುವಂತಹುದನ್ನು ಗಮನಿಸಬೇಕು. ಮುಖ್ಯ ಮುಖ್ಯ ಸಮಾಚಾರಗಳ ಕುರಿತಾದರೂ ಸಂಪಾದಕರಿಗೆ ಪರಿಣತ ಜ್ಞಾನ ಇರಬೇಕು. ಬಂದದ್ದನ್ನೆಲ್ಲ, ಬಂದಷ್ಟನ್ನೇ ವಿತರಣೆ ಮಾಡುವ ಅಂಚೆಖಾತೆ ಕೆಲಸ ಸಂಪಾದಕರದ್ದಲ್ಲ. ನಮ್ಮ ಚೀನೀ ಸಮರದ ತರುವಾಯ ದೇಶ ರಕ್ಷಣೆಯ ಬಗ್ಗೆ ಕೌಲ್, ದಳವಿ ಇಂಥವರು ಬರೆದ ಪುಸ್ತಕ ಎಷ್ಟು ಸಂಪಾದಕರು ಓದಿದ್ದಾರೆ? ಈ ದೇಶ ಸುಭದ್ರವಾಗಿರಬೇಕು, ಇದರ ರಕ್ಷಣೆಯಾಗ ಬೇಕು, ಎಂದು ಅಗ್ರಲೇಖ ಬರೆಯುವವರು ದೇಶದ ಸುರಕ್ಷಾ ಸ್ಥಿತಿ ಯಾವ ರೀತಿ ಇದೆ ಎಂಬುದನ್ನು ತಿಳಿಯಬೇಕಾಗುತ್ತದೆ. ಹಾಗೆಯೇ ದೇಶವಿದೇಶಗಳ ಪರಸ್ಪರ ಸಂಬಂಧವನ್ನು ಅರಿಯಬೇಕಾಗುತ್ತದೆ. ಬರೀ ರಾಜಕೀಯ ಪುಢಾರಿಗಳ ಬಾಯಿಂದ ಉದುರಿದ ಮಾತಿನ ಪ್ರಚಾರದಿಂದ ದೇಶದ ರಕ್ಷಣೆಯಲ್ಲ ಭಕ್ಷಣೆಯಾಗಬಹುದು. ಯಾವ ಸಿದ್ಧತೆ, ಹತ್ಯಾರು, ಸರಂಜಾಮು ಇಲ್ಲದೆ ನಮ್ಮ ಜವಾನರು ನೇಫಾದಲ್ಲಿ ಹೋರಾಡಿ ಸತ್ತರು. ಇದಕ್ಕೆ ಹೊಣೆ ಯಾರೆಂಬುದನ್ನು ತತ್ಕಾಲದಲ್ಲಿ ಪತ್ರಿಕಾಕರ್ತರು ಶೋಧಿಸಿದ್ದುಂಟೆ? ಇಷ್ಟು ದೊಡ್ಡ ದೇಶದಲ್ಲಿ ಯುದ್ಧಕ್ಕೆ ಆರ್ಡರು ಕೊಟ್ಟವರು – ನಮ್ಮ ವಿದೇಶಾಂಗ ಸಚಿವರಲ್ಲ – ಯಾರೋ ಯಃಕಶ್ಚಿತ್ ಇಲಾಖೆ ಕಾರ್ಯದರ್ಶಿ ಎಂದರೆ ಎಂಥ ನಾಚಿಕೆಗೇಡಿತನ? ಇಂಡಿಯಾ – ಟಿಬೆಟ್ ಪ್ರಶ್ನೆ ಎದ್ದಾಗ ಕೆಲವು ಸಲ ಸವಲತ್ತುಗಳನ್ನು ನಾವು ಬಿಟ್ಟು ಕೊಟ್ಟೆವು. ಈ ಮಾತು ಎರಡು ವರ್ಷಗಳ ನಂತರ ಪಾರ್ಲಿಮೆಂಟಿನಲ್ಲಿ ಬಂತು. ಆದರೆ ಯಾರೂ ಪ್ರಶ್ನೆ ಮಾಡಲಿಲ್ಲ. ನಮಗಿದ್ದ ಪಾರಾ ಮೌಂಟ್ಸ್ ಇದ್ದಕ್ಕಿದ್ದ ಹಾಗೆ ಬಿಟ್ಟುಕೊಡುವ ಅಧಿಕಾರ ಹೇಗೆ ಬಂತು ಎಂದು ಪ್ರಶ್ನೆ ಮಾಡಲಿಲ್ಲ.

ಈ ಪ್ರಬಂಧದಲ್ಲಿ ಧರ್ಮದ ವಿಚಾರ ಬಂದಿದೆ. ಅನೇಕ ಸಂದರ್ಭಗಳಲ್ಲಿ ಅಂತರ ರಾಷ್ಟ್ರೀಯ ನೀತಿಯ ಪ್ರಶ್ನೆ ಬಂದಾಗ ಒಪ್ಪಂದದ ಪ್ರಶ್ನೆ ಬಂದಾಗ ನಮ್ಮ ಧೋರಣೆ ಏನು ಎಂಬುದು ವಿದಿತವಾಗುತ್ತದೆ. ಸೂಯೇಜ್ ಆಕ್ರಮಣ ಆದಾಗ ನಮ್ಮ ಪತ್ರಿಕೆಗಳು ಏನು ಹೇಳಿವೆ? ಇರಾಣ್ ತೈಲೋದ್ಯಮ ರಾಷ್ಟ್ರೀಕರಣ ಮಾಡಿದಾಗ ನಮ್ಮ ಪತ್ರಕರ್ತರು ಬೆನ್ನು ತಟ್ಟಿ ಭೇಷ್ ಎಂದರು. ರಾಷ್ಟ್ರೀಕರಣ ಆದಾಗ ಖುಷಿ ಕಾಣುತ್ತದೆ. ಆದರೆ ರಾಷ್ಟ್ರ ರಾಷ್ಟ್ರಗಳಲ್ಲಿ ನಡೆಯುವ ಒಡಂಬಡಿಕೆ, ಅನ್ಯೋನ್ಯ ಗೌರವಕ್ಕೆ ಸಂಬಂಧಪಟ್ಟ ಪ್ರಶ್ನೆ. ಅದರಿಂದಾಗಿರುವ ಪರಿಣಾಮವೇನು? ಮೆಕ್

ಮೋಹನ್ ಲೈನ್ 25 ವರ್ಷಗಳ ಹಿಂದೆ ಯಾರೋ ಹಾಕಿದ್ದು, ನಮಗೆ ಸಂಬಂಧವಿಲ್ಲ ಎಂದು ಚೀನಾ ಧಿಕ್ಕರಿಸುವಾಗ ನಮಗೆ ಯಾಕೆ ಖುಷಿ ಆಗುವುದಿಲ್ಲ? ಊರಿಗೆ ಬಂದ ಮಾರಿ ನಮಗೆ ಬರುವಾಗ ನೋವು ತಿಳಿಯುತ್ತದೆ. ಮಾಡಿಕೊಂಡಿರುವ ಕರಾರಿಗೆ ಬದ್ಧರಾಗಿಲ್ಲದಿದ್ದರೆ ಪ್ರಯೋಜನವೇನು? ಪ್ರೀವಿಪರ್ಸ್ – ರಾಜಧನ – ವಿಚಾರ ಬಂದಾಗ ಸರಕಾರವೇ ಕೊಟ್ಟ ಮಾತಿನಂತೆ ನಡೆಯದಿದ್ದಾಗ ನಿಮ್ಮ ಪತ್ರಿಕಾಧರ್ಮ ಏನು ಹೇಳುತ್ತದೆ? ಎಲ್ಲ ನಾಗರಿಕರಂತೆ ನಿಮಗೂ ಆದರ್ಶಗಳಿದ್ದರೆ ಅವುಗಳ ಪ್ರತಿಪಾದನೆಯಾಗಬೇಕು. ದೇಶದಲ್ಲಿ ಅನೇಕ ಪಕ್ಷಗಳಿರಬಹುದು, ಅನೇಕ ಧ್ಯೇಯಗಳಿರಬಹುದು, ವರದಿಗಾರ ನಿರ್ಲಿಪ್ತನಾಗಿ ಸತ್ವವನ್ನು ಕಾಪಾಡಬೇಕು. ನಮ್ಮ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ನನಗೆ ಕಾಣುವ ಹಾಗೆ ಸ್ವತಂತ್ರ ಬುದ್ಧಿಜೀವನ, ವಿಮರ್ಶೆ, ಉತ್ತಮ ಜೀವನಕ್ಕನುಗುಣವಾದ ದಿಟ್ಟತನ, ಅಭ್ಯಾಸ, ಮುಂತಾದ ಯಾವುದೂ ನಮ್ಮ ಸಂಪಾದಕರಲ್ಲಿ ಎದ್ದು ಕಾಣುತ್ತಿಲ್ಲ. ಮಂತ್ರಿಗಳ ಅನುಗ್ರಹ ದೊರೆತರೆ ಸಾಕು, ಅಧಿಕಾರ ಉಳಿದರೆ ಸಾಕು, ಬೆಂಗಳೂರು ಎಕ್ಸ್‌ಟೆನ್‌ಷನ್‌ನಲ್ಲಿ ಒಂದು ಸೈಟು ಸಿಗಬೇಕು, ಮಂತ್ರಿಗಳ ಆಫೀಸಿನಲ್ಲಿ ರಸಪಾನೀಯ ದಕ್ಕಿದರೆ ಸಾಕು – ಇಂಥ ಆಶೆಗಳು ಇರುವ ವರೆಗೆ ಸಂಪಾದಕತ್ವದ ಹೊಣೆಯನ್ನು ನಿರ್ವಹಣೆ ಮಾಡುವುದಕ್ಕಾಗುವುದಿಲ್ಲ ಎಂದು ನನಗೆ ತೋರುತ್ತದೆ. ಆಮೇಲೆ ಸಂಪಾದಕತ್ವಕ್ಕೆ ಬೇಕಾದ ಶಾಸ್ತ್ರಾಭ್ಯಾಸ, ನಡವಳಿಕೆ, ಜ್ಞಾನಸಂಗ್ರಹ, ಪತ್ರಿಕೆಗಳನ್ನು ಓದುವ ಚಟ, ಮುಖ್ಯವಾಗಿ ಗಮನಿಸಬೇಕಾದ ವಿಚಾರಗಳಾಗಿವೆ. ಸಂಪಾದಕರ ಮೇಜಿನ ಮೇಲೆ ಎಷ್ಟು ಪತ್ರಿಕೆಗಳು ಇವೆ, ಎಷ್ಟು ಕೆಂಪು ಗೀಟುಗಳನ್ನು ಹಾಕಿದ್ದಾರೆ ಎನ್ನುವುದನ್ನು ನೋಡಿದರೆ ಅವರ ಹೊಣೆ ಗೊತ್ತಾಗುತ್ತದೆ.

ದೇಶೀಯ ಪತ್ರಿಕೆಗಳ ಬಡತನದ ಪ್ರಶ್ನೆಯನ್ನು ನಾಗರಾಜರಾಯರು ತೆಗೆದುಕೊಂಡಿದ್ದಾರೆ. ಇದು ಇದ್ದದ್ದೇ. ಸಣ್ಣ ಪತ್ರಿಕೆಗಳು ಉಳಿಯುವುದು ಕಷ್ಟ. ಗುಣದಿಂದ ಉಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು ನಿಜ. ಆದರೆ ಒಳ್ಳೆಯ ಗುಣದ ಪತ್ರಿಕೆಗಳನ್ನು ಓದುವವರಿಲ್ಲ. ನಾನು ಪತ್ರಿಕೆಯನ್ನು ತಲೆ ಮೇಲೆ ಹೊತ್ತುಕೊಂಡು ತಿರುಗಿದ್ದುಂಟು. ನನ್ನದು ಒಂದು ವರ್ಷ ನಡೆಯಿತು, ಅಲ್ಲಿಯ ವರೆಗೂ ಪ್ರೆಸ್‌ನವರು ಕಡ ಕೊಟ್ಟರು. ದಿನಪತ್ರಿಕೆಗಳಿಗೆ ಒಂದು ತಿಂಗಳು ಕೊಡುವುದೂ ಕಷ್ಟ. ಬಾಕಿ ವ್ಯತ್ಯಾಸವಿಲ್ಲ. ನಮ್ಮ ಸಮಾಜವೇ ಹೀಗಿದೆ. ಒಳ್ಳೆಯದನ್ನು ಸ್ವೀಕರಿಸಲಾರದ ಈ ಸಮಾಜವನ್ನು ಉಳಿಸಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆ ಬಹಳ ಕಷ್ಟದ್ದು. ಆದರೆ ಸರ್ಕಾರಕ್ಕೆ ಪತ್ರಿಕೆಗಳಿಗೆ ನೆರವು ಕೊಡಬೇಕು ಎಂಬ ಒಂದು ಸೂಚನೆ ಬಂತು. ನಿಮ್ಮ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಇದಕ್ಕಿಂತ ಒಳ್ಳೆಯ ಪ್ರಸಂಗ ಸಿಕ್ಕಲಾರದು ಎಂದು ನನಗನ್ನಿಸುತ್ತದೆ. ಜನರನ್ನು ಮೇಲೆ ಎತ್ತಬೇಕೆಂದು ಇದ್ದರೆ ಒಂದು ಲೇಖನಕ್ಕೆ ಆರು ತಿಂಗಳು ಯೋಚನೆ ಮಾಡಬೇಕಾಗುತ್ತದೆ. ಹಿಂದೆ ನನಗೆ ವಾರಕ್ಕೆ ಒಂದು ಲೇಖನ ಕೊಡಬೇಕೆಂದು ವಾಮನ ಕುಡ್ವರು ಹೇಳಿದಾಗ ನಾನು ತಲೆ ಕೆರೆದುಕೊಂಡೆ. ಸ್ವದೇಶಾಭಿಮಾನ ಪತ್ರಿಕೆಗೆ ಒಂದು ಅಗ್ರಲೇಖನ ಕೊಡಬೇಕಾದರೆ ನನಗೆ ತಲೆಬೇನೆ ಆಗುತ್ತಿತ್ತು. ಯಾವ ವಿಷಯದಲ್ಲಿ ಕೊಡಲಿ. ಎಂಬುದೇ ಚಿಂತೆ. ಬೇಕಾದಷ್ಟು ಹೊರಗಿನ ಪತ್ರಿಕೆಗಳನ್ನು ತೆಗೆದುಕೊಳ್ಳುತ್ತೇವೆ, ಓದುತ್ತೇವೆ. ಬರೆಯಬೇಕಾದರೆ ಧೈರ್ಯ ಬರುವುದಿಲ್ಲ. ಸ್ವಂತ ವಿಚಾರ ಮಾಡತಕ್ಕವ

ರಿಗೆ ಪುಟ ತುಂಬಿಸುವ ವಿದ್ಯೆ ಕಷ್ಟ. ಇಲ್ಲಿ ರಾಷ್ಟ್ರೀಯ ಧರ್ಮ ಎನ್ನುವುದು ಇಷ್ಟೆ. ಹಿಂದೂಸ್ಥಾನದ, ಯಾವುದೇ ನಾಡಿನ ಬಹುಮುಖದ ಜೀವನ–ಬೆಳೆಯಬೇಕಾದರೆ, ನಾವೆಲ್ಲ ಅಭ್ಯಾಸ ಮಾಡಬೇಕಾಗುತ್ತದೆ. ಹತ್ತು ಹನ್ನೆರಡು ವರ್ಷದ ಕೆಳಗೆ ಒಬ್ಬಾಕೆ ಉಪಾಧ್ಯಾಯಿನಿ ಡೆನ್ಮಾರ್ಕಿನಿಂದ ಬಂದಳು. ಕ್ಲಾಸಿನಲ್ಲಿ ಪಾಠ ಮಾಡುವಾಗ, ಇನ್ನೇನಾದರೂ ಮಾಡಿದರೆ "ನಿಮ್ಮ ದೇಶದ ಹಾಗಲ್ಲಪ್ಪಾ, ನಮ್ಮಲ್ಲಿ ಶಾಲೆಯ ಪಾಠವನ್ನು ಪತ್ರಿಕೆಗಳು ಟೀಕಿಸುತ್ತಿವೆ, ನಾಳೆ ಟೀಕೆ ಇದಿರಿಸಬೇಕಾದವಳು ನಾನು" ಎಂದಳು. ನಮ್ಮಲ್ಲಿ ಯದ್ವಾತದ್ವಾ ಹೇಳಿದರೂ ನಿಮ್ಮ ಪೇಪರಿನಲ್ಲಿ ಅದನ್ನು ತರಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ ಇಬ್ಬರೂ ಒಂದೇ ಧರ್ಮ ಹಿಡಿದಿದ್ದಾರೆ. ಅವರು ಅಪದ್ಧವಾಗಿ ಪಾಠಗಳನ್ನು ಹೇಳುತ್ತಾರೆ, ನೀವು ತಪ್ಪು ತಪ್ಪಾಗಿ ಬರೆಯುತ್ತೀರಿ. ನಮ್ಮ ರಾಜ್ಯದ ಶಿಕ್ಷಣ ಸಚಿವರು ಮೇಲಿಂದ ಮೇಲೆ ಟೀಕೆಗಳನ್ನು ತಡೆಯಲಾರದೆ ತಪ್ಪು ತೋರಿಸಿಕೊಟ್ಟವರಿಗೆ ಹತ್ತು ಹತ್ತು ಪೈಸೆ ಬಹುಮಾನ ಸಾರಿದರು; ಒಂದು ತಪ್ಪಿಗೆ ಹತ್ತು ಪೈಸೆ. ಸಂಪಾದನೆಯ ಮಾರ್ಗ ತೋರಿಸಿಕೊಟ್ಟರು.

ಪತ್ರಿಕೋದ್ಯಮವನ್ನು ಇತರ ಉದ್ಯಮಗಳಂತೆ ನಡೆಸಬೇಕಾದರೆ ಯಾವ ಸ್ಥಾನಮಾನ ಸಿಕ್ಕಬೇಕು, ಸಂಪಾದಕನ ಸ್ಥಾನಮಾನ–ದಯಮಾಡಿ ಕ್ಷಮಿಸಬೇಕು–ಮೊದಲು ಇದ್ದದ್ದು ಎಷ್ಟು? ಆಮೇಲೆ ಕುಗ್ಗಿದ್ದು ಎಷ್ಟು? ಸಂಪಾದಕ ಎನ್ನುವ ಕೆಲಸ ಗಳಿಸಿದ್ದು ಯಾವ ಲೇಖನದಿಂದ? ಈ ಮನುಷ್ಯ ಬಹಳ ತೂಕದ ಬರವಣಿಗೆ ಬರೆಯುತ್ತಾ ಇದ್ದಾನೆ. ಈ ವಿಚಾರದಲ್ಲಿ ಬಹಳ ಚೆನ್ನಾಗಿ ಬರೆದಿದ್ದಾನೆ. ಸಹೋದ್ಯೋಗಿಗಳಲ್ಲಿ ಹೆಮ್ಮೆಯ ಸ್ಥಾನಮಾನ ಗಳಿಸಿಕೊಂಡಿದ್ದಾನೆ. ಎಂದಾದರೆ ಅದು ಕುಗ್ಗಬೇಕಾಗಿಲ್ಲ, ಸ್ಥಾನಮಾನ ಇನ್ನೊಬ್ಬರಿಂದ ಪಡೆಯಲಿಕ್ಕೆ ಬರುವುದಿಲ್ಲ. ವಂತಿಗೆ, ವರಾಡೆ, ಭಿಕ್ಷೆ ಬೇಡಿ ಬರುವುದಲ್ಲ ಅದು. ಬೌದ್ಧಿಕ ಮಟ್ಟ, ಪ್ರತಿಷ್ಠೆ ಬೆಳೆಸಿಕೊಳ್ಳದೆ ಅತ್ತೂ ಕರೆದೂ ಮಾಡಿದರೆ ಪ್ರಯೋಜನಕ್ಕೆ ಬರುವುದಿಲ್ಲ ಎಂದು ಅನಿಸುತ್ತದೆ.

ಇನ್ನು ಭಾಷೆಯ ವಿಷಯ ಮಾತು ಬಂತು. ಕರ್ನಾಟಕದಲ್ಲಿ ಹುಟ್ಟಿದ ಜನ ತಮ್ಮ ಊರನ್ನೇ ಹೇಗೆ ಉಚ್ಚರಿಸಬೇಕು ಎನ್ನುವುದನ್ನೂ ಅರಿಯರು. ಇಂಗ್ಲೀಷರು ನಮ್ಮ ಕನ್ನಡದ ಹೆಸರು ಹೇಗೆ ಹೇಳಬಹುದೋ ಹಾಗೆ ನಮ್ಮ ಊರಿನವರು ಇನ್ನೊಂದು ಬೀದಿಯ ಹೆಸರನ್ನು ಹೇಳುತ್ತಾರೆ. ನಮ್ಮ ಊರಿನ ಇಂಗ್ಲಿಷ್ ಉಚ್ಚಾರ ನಮಗೆ ಬಹಳ ಅದ್ಭುತವಾಗಿ ಕಾಣುತ್ತದೆ. ಯಾಕೆ? ಯಾರಿಗಾಗಿ ಈ ಬರೆಹ? ಯಾವ ಮಟ್ಟದಲ್ಲಿದ್ದೇವೆ ನಾವು? ಅಂತ ಕೇಳಬೇಕಾಗಿಲ್ಲ, ದಿವಸಕ್ಕೆ ಇಷ್ಟು ಅಂತ ತುಂಬಿಸತಕ್ಕದ್ದು, ಇಷ್ಟು ಹೊತ್ತಿಗೆ ಮುಗಿಸತಕ್ಕದ್ದು. ಇಂಗ್ಲಿಷ್ ದೈನಿಕಗಳನ್ನೇ ತೆಗೆದುಕೊಳ್ಳಿ, ಮೊದಲು ಟೈಮ್ಸ್ ಆಫ್ ಇಂಡಿಯಾ, ಸ್ಟೇಟ್ಸ್‌ಮನ್ ಅವುಗಳಲ್ಲಿ ಒಂದೆರಡು ಅಕ್ಷರದೋಷವಾದರೂ ಸಿಕ್ಕುತ್ತಿರಲಿಲ್ಲ. ಈಗ ಒಂದೊಂದು ಕಾಲಂನಲ್ಲೂ ಬೇಕಾದಷ್ಟು ಇರುತ್ತವೆ. ಹೀಗಾದ ಮೇಲೆ ಕನ್ನಡ ಸರಸ್ವತಿಯ ಪುತ್ರರಾದ ನಮಗೆ ಹೆಚ್ಚಿನ ಅಧಿಕಾರ ಉಂಟೋ ಇಲ್ಲವೋ? ಸಿಕ್ಕಸಿಕ್ಕ ಪದಗಳನ್ನು ಹಾಕಿ ಭಾಷೆ ಸುಧಾರಿಸಬೇಕಾಗಿದೆ. ನಮ್ಮ ಮಾತು ಅರ್ಥವಾಗದಿದ್ದರೂ ನಮ್ಮ ಪ್ರೌಢಿಮೆಯನ್ನು ಮೆರೆಸಬೇಕು. ಒಮ್ಮೆ ಒಬ್ಬರು ಯಕ್ಷಗಾನದ ಅರ್ಥ ಹೇಳುತ್ತಾ ಉಳಿದವರು ದೊಡ್ಡ ದೊಡ್ಡ ಸಂಸ್ಕೃತ ಪದಗಳನ್ನು

ಹಾಕುವುದನ್ನು ನೋಡಿ ತಾನೂ ಏಕೆ ಹಾಕಬಾರದು ಅಂತ "ಕೌರವನು ಈಗಲೇ ಪರಿಭವಿಸುತ್ತಾನೆ" ಎಂದು ಹೇಳಿದರು. ಅಂದರೆ ಕೌರವ ಬರುತ್ತಾನೆ ಅಂತಲೋ, ಹೋಗುತ್ತಾನೆ ಅಂತಲೋ – ಯಾರಿಗೂ ಅರ್ಥವಾಗಲಿಲ್ಲ. ಬರವಣಿಗೆಯ ಮೊತ್ತ ಬಹಳ ಜಾಸ್ತಿಯಾಗುವುದರಿಂದ ಭಾಷಾಶುದ್ಧಿಯಾಗುತ್ತದೆ ಎಂದು ನನಗೆ ಅನಿಸುವುದಿಲ್ಲ. ನಮ್ಮ ವಿಚಾರಸರಣಿ ಸ್ಪಷ್ಟವಾಗಿ ತೀವ್ರವಾಗಿದ್ದರೆ ಮನಸ್ಸಿನಲ್ಲಿ ಸನ್ನಿವೇಶಕ್ಕೆ ಸರಿಯಾಗಿ ಒಂದು ಖಚಿತವಾದ ಪದ ಒಡಮೂಡುತ್ತದೆ. ಖಚಿತವಾದ ಅಭಿಪ್ರಾಯಕ್ಕೆ ತಾನಾಗಿ ಬಾಯಿ ಬರುತ್ತದೆ, ಮಾತು ಅರಳುತ್ತದೆ. ಆದ್ದರಿಂದ ಮೊದಲು, ಮೂಲ ಸ್ಥಾನದಲ್ಲಿ, ಖಚಿತವಾದ ಆಲೋಚನೆ, ವಿಚಾರ ಬಂದು ನಿಲ್ಲಲಿ. ಗೊತ್ತೇ ಇಲ್ಲದ ವಿಷಯದ ಮೇಲೆ ಗೊತ್ತಿದ್ದವನ ಹಾಗೆ ಬರೆಯುವುದು, ಏನೂ ಗೊತ್ತಿಲ್ಲದವನ ಮುಂದೆ ಮಾತ್ರ ನಡೆದೀತು. ಸಂಗೀತದ ಮೇಲೆ ಕನ್ನಡದ ವಿಮರ್ಶಕರ ಬರವಣಿಗೆ ನೋಡಿದ್ದೀರಾ? ...ರು ಇಂಥಾ ರಾಗವನ್ನು ಅಮೋಘವಾಗಿ ಹಾಡಿದರು, ಅಮೋಘವಾಗಿ ವಾದ್ಯ ನುಡಿಸಿದರು. ಎಂದರೆ ನಾಲ್ಕಾರು 'ಅಮೋಘ'ಗಳಿಂದ ಸಂಗೀತ ಹೇಗಿತ್ತು ಎನ್ನಬಹುದೆ? ಈ ಅಮೋಘಗಳ ನಡುವೆ ಸಂಗೀತ ಬರೇ ಚೆನ್ನಾಗಿದ್ದರೆ ಸಾಲದೇ ಎಂದು ನನಗನಿಸಿದ್ದುಂಟು. ಎಲ್ಲಾ ಕ್ಷೇತ್ರಗಳಂತೆ ಪತ್ರಿಕೋದ್ಯಮವು ಪ್ರಾಮಾಣಿಕತೆಯ ದೆಸೆಯಿಂದ ನಮ್ಮ ಬೌದ್ಧಿಕ ಯೋಗ್ಯತೆಯ ಪ್ರಭಾವದಿಂದ, ದುಡಿಮೆಯ ಪ್ರಭಾವದಿಂದ ವಿಕಾಸಗೊಳ್ಳಬೇಕಾದ ಕ್ಷೇತ್ರ. ಇಲ್ಲಿ ನಾವು ಇನ್ನೂ ಪಿಗ್ಮಿಗಳು – ಜಗತ್ತಿನ ಇತರ ರಾಷ್ಟ್ರಗಳ ಪತ್ರಿಕಾ ಮಂಡಲದ ವೈಶಾಲ್ಯ, ವೈವಿಧ್ಯಗಳ ನಡುವೆ ನಮ್ಮದು ಬರೇ ಅಲ್ಪಸೇವೆ.

# ಸಾಹಿತ್ಯ ಸಮಾರಾಧನ

ಎನ್. ಎಸ್. ರಾಮಪ್ರಸಾದ

ಹಾ. ಮಾ. ನಾಯಕ್

ಜಿ. ಹಿರಿಯಣ್ಣ ಐತಾಳ

ನಿ. ಶ್ರೀಶ ಬಲ್ಲಾಳ

ಪತ್ರಿಕಾವರದಿ
ಸಾಮಯಿಕ ಪ್ರಬಂಧ

# ಉಡುಪಿ ನಡೆಸಿಕೊಟ್ಟ ರಸಮಯಪರ್ವ

ಕನ್ನಡಪ್ರಭದಲ್ಲಿ

ಎನ್. ಎಸ್. ರಾಮಪ್ರಸಾದ

ರಾಷ್ಟ್ರದ ರಾಜಕಾರಣದಲ್ಲಿ ಅಪೂರ್ವ ಅಲ್ಲೋಲ ಕಲ್ಲೋಲ. ದೂರದ ದೆಹಲಿಯಲ್ಲಿ ನಡೆಯುತ್ತಿರುವ ಬಲೋಪಾಸನೆ ಶಕ್ತಿಸಮರಗಳ ಕಡೆಗೇ ಜನ ಸಾಧಾರಣ ಆಸಕ್ತಿ–ಒಂದು ಕಡೆ.

ಇನ್ನೊಂದು ಕಡೆ ಶ್ರೀಕೃಷ್ಣನ ಲೀಲಾಧಾಮ – ಉಡುಪಿಯಲ್ಲಿ ಕನ್ನಡ ಸಾಹಿತ್ಯ ವಾಹಿನಿಯ ಮೃದು – ಮಧು ನಿನಾದ ಹರ್ಷದ ಉಕ್ಕು ಅಲೆ. ನವೆಂಬರ್ ೫–೬ರಂದು ಎರಡು ದಿನವಿಡೀ ನಡೆದ “ಕಾರಂತ ಪ್ರಪಂಚ ದರ್ಶನ ಸಾಹಿತ್ಯ ಸಮಾರಾಧನ.”

ಕನ್ನಡ ನುಡಿ ಪ್ರೇಮಿಗಳನೇಕರು ಉಡುಪಿಯಲ್ಲಿ ಕಲೆತು ಹಿರಿಯರಾದ ಡಾ। ಕೋಟ ಶಿವರಾಮ ಕಾರಂತರನ್ನು ಅಭಿನಂದಿಸಿದರು. ಸಾಹಿತ್ಯದ ಕೆಲವು ಮುಖಗಳ ಸಮೀಕ್ಷೆ, ಸ್ವರೂಪಚಿಂತನೆ ನಡೆಸಿದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಲ್ಲಿ ನಡೆದುದು “ವಿಶಿಷ್ಟ ರಸಮಯ ಪರ್ವ”.

ಊಟ, ಉಪಚಾರ, ಸೌಜನ್ಯ, ಶಿಷ್ಟಾಚಾರ, ಉತ್ಸವದ ಅಚ್ಚುಕಟ್ಟುಗಳಲ್ಲಿ “ಕಾರಂತರ ಅಭಿನಂದನ ಉತ್ಸವ”ಕ್ಕೆ ಬಹುದೊಡ್ಡ ಸ್ಥಾನ. ಪಾಲ್ಗೊಂಡವರ ನೆನಪಿನ ಭಂಡಾರದಲ್ಲಿ ಅದಕ್ಕೆ ಮೇಲಣ ಅಂತಸ್ತು.

“ಇನ್ನೊಂದು ದಿನವಾದರೂ ಇದ್ದು ಹೋಗಿ ಎಂದು ನಮ್ಮನ್ನು ಕೇಳಿಕೊಳ್ಳ ಬಾರದೇಕೆ ಎಂಬ “ಅಸಮಧಾನ”ದಿಂದ ಕಾಲ್ಕಿತ್ತವರೇ ಬಹುಮಂದಿ.

ಕರೆಕೊಟ್ಟು ಬರಮಾಡಿಕೊಂಡು ಬೀಳ್ಕೊಡುವ ವರೆಗೆ “ಕಾರಂತ ಅಭಿನಂದನ ಸಮಿತಿ”ಯ ಸಮೂಹ ವ್ಯಕ್ತಗೊಳಿಸಿದ ಸಜ್ಜನಿಕೆಯ ಪ್ರತಿಯಾಗಿ ಕೃತಜ್ಞತೆಯ ಒಂದೆರಡು ಮಾತುಗಳನ್ನೂ ಹೇಳಲು ತಿಳಿಯದೆ ಹಾದಿಯಲ್ಲಿ ಕೈಹಿಸುಕಿಕೊಂಡು ಪಾಡುಪಟ್ಟವರೆಷ್ಟೋ ?

## ಲಾಜವೃಷ್ಟಿ

ಬುಧವಾರ ಬೆಳಗ್ಗಿನ ೧೦-೧೫ಕ್ಕೆ ಉತ್ಸವದ ನಾಂದಿ. “ರವೀಂದ್ರ ಮಂಟಪ”ದ ಪ್ರವೇಶ ದ್ವಾರಕ್ಕೆ ಬಂದ ಕಾರಂತ ದಂಪತಿಗಳಿಗೆ, ರಾಷ್ಟ್ರೀಯ ಪ್ರಾಧ್ಯಾಪಕ ಮತ್ತು ಭಾರತೀಯ ಸಾಹಿತ್ಯ ಅಕಾಡಮಿಯ ಅಧ್ಯಕ್ಷ ಡಾ॥ ಸುನೀತಿಕುಮಾರ್ ಚಟರ್ಜಿಯವರಿಗೆ ದೊರೆತ ಸ್ವಾಗತ ಕಾರಂತ ಅಭಿಮಾನಿಗಳ ಕಣ್ಣನ್ನು ಆನಂದ ಬಾಷ್ಪಗಳಿಂದ ತೊಯ್ಯಿಸಿತು.

ಮಂಗಳವಾದ್ಯದ ಸಹಿತ ಆಗಮಿಸಿದ ಗಜರಾಜ "ಕರ"ವೆತ್ತಿ ವಂದನೆಯನ್ನು ಸಲ್ಲಿಸಿದ. ವೇದಮಂತ್ರೋಪಚಾರಪೂರ್ವಕವಾಗಿ ಪೂರ್ಣ ಕುಂಭದ ಸ್ವಾಗತ ನೀಡಿ "ಲಾಜಾ" ವೃಷ್ಟಿ ಮಾಡಿದ ನಂತರ ಉತ್ಸವ ಸಮಿತಿಯ ಅಧ್ಯಕ್ಷ ಡಾ॥ ತೋನ್ಸೆ ಮಾಧವ ಅನಂತ ಪೈ ಸ್ವಾಗತ ಬಯಸಿ ಹಾರ ಅರ್ಪಿಸಿದರು.

ಪ್ರವೇಶ ದ್ವಾರದ ಇಬ್ಬದಿಯಲ್ಲೂ ಯಕ್ಷಗಾನ ಬಯಲಾಟದ ವೇಷಧಾರಿಗಳು. ಪಂತಿಯಿಂದ ಮುಂದೆ ಬಂದು ಸ್ತ್ರೀ ವೇಷಧಾರಿಗಳು ಆರತಿ ಬೆಳಗಿದರು.

"ಅಖಿಲ ಕರ್ನಾಟಕ ತಳಹದಿಯಲ್ಲಿ ಕಾರಂತ ಅಭಿಮಾನಿಗಳನ್ನು ಏಕತ್ರಗೊಳಿಸಿ, ಕಾರಂತರ ಹೆಸರಿನಲ್ಲಿ ಒಂದು ಸಾಹಿತ್ಯ ಸಮಾರಾಧನೆಯನ್ನು ನಡೆಸುವ ಆಸೆ ಸಫಲ" ವಾದುದಕ್ಕೆ ಡಾ॥ ಪೈ ಆನಂದಿಸಿದರು.

**ಕನ್ನಡಿಗರ ಹರಕೆ**

ಉತ್ಸವದ ಉದ್ಘಾಟನೆಯನ್ನು, ಜೊತೆಗೆ "ವಿಶ್ವವಿದ್ಯಾನಿಲಯದ ಪುಸ್ತಕಗಳು" ಕುರಿತು ವಿಚಾರಗೋಷ್ಠಿಯನ್ನು ಉದ್ಘಾಟಿಸಿದ ಮೈಸೂರ್ ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ। ದೇ. ಜವರೇ ಗೌಡರು "ಕಾರಂತರು ಸರ್ವದಾ ಅರುವತ್ತರ ಪ್ರಾಯದಲ್ಲೇ ಇರಲಿ. ಇದು ಕನ್ನಡಿಗರ ಹರಕೆ" ಎಂದರು.

ಕನ್ನಡ ಸಾರಸ್ವತ ಲೋಕದ ಹಿರಿಯ ವ್ಯಕ್ತಿ, ವಿ. ಸೀ. ಅಧ್ಯಕ್ಷತೆಯಲ್ಲಿ ನಡೆದ ವಿಚಾರಗೋಷ್ಠಿಯಲ್ಲಿ "ವೈಜ್ಞಾನಿಕ ಪಠ್ಯಗಳು" ಕುರಿತು ಶ್ರೀ ಜೆ. ಆರ್. ಲಕ್ಷ್ಮಣರಾವ್, "ಮಾನವಿಕ ಪಠ್ಯಗಳು" ಕುರಿತು ಶ್ರೀ ಉದ್ಯಾವರ ಮಾಧವ ಆಚಾರ್ಯ ಪ್ರಬಂಧಗಳನ್ನು ಓದಿದರು.

ಗೋಷ್ಠಿಯ ಚರ್ಚೆಯಲ್ಲಿ ಸುನೀತಿಕುಮಾರ ಚಟರ್ಜಿ, ಡಾ॥ ಕಾರಂತ, ಡಾ॥ ವರದರಾಜರಾವ್, ಪ್ರೊ। ಪರಮೇಶ್ವರ ಭಟ್ ಪಾಲುಗೊಂಡರು.

ವಿಶ್ವವಿದ್ಯಾನಿಲಯದ ಪಠ್ಯ ಗ್ರಂಥಗಳನ್ನು ಕನ್ನಡದಲ್ಲಿ ಸಿದ್ಧಪಡಿಸುವುದು ಆಗದೆ ಇರುವ ಕಾರ್ಯವೇನಲ್ಲ ಎಂದ ಡಾ॥ ಕಾರಂತರು "ಗ್ರಂಥ ರಚನೆ ಮಾಡುವವರಿಗೆ ವಿಷಯದಲ್ಲಿ ಮೌಲಿಕ ಆಸಕ್ತಿ, ಯಾರನ್ನು ಉದ್ದೇಶಿಸಿ ಬರೆಯುತ್ತೇವೋ ಅದು ಅವರಿಗೆ ತಿಳಿಯಬೇಕೆಂಬ ತಿಳಿವು ಇದ್ದವರು ಈ ಕಾರ್ಯಕ್ಕೆ ಕೈಹಾಕಬೇಕು. ಹೀಗಿಲ್ಲದಿದ್ದರೆ ಪಠ್ಯ ಗ್ರಂಥಗಳನ್ನು ಒಲೆಗೆ ಹಾಕುವುದು ಒಳ್ಳೆಯದು" ಎಂದರು.

**ಕತ್ತಿಯ ಹೊಡೆತ**

"ಪಾರಿಭಾಷಿಕ ಶಬ್ದಗಳ ಪ್ರಯೋಗದಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಉಳಿಸಿಕೊಳ್ಳಲಾಗದು. ತನ್ನಲ್ಲಿರುವ ವಿಷಯವನ್ನು ತನ್ನವರಿಗೆ ಹೇಳಬೇಕೆಂಬ ತವಕ ಇಲ್ಲದವರು ಬರೆಯಲಾಗದು. ಪಠ್ಯ ಗ್ರಂಥಗಳು ಶಾಲೆ ಕಾಲೇಜುಗಳ ಬಗ್ಗೆ ವಿರಕ್ತಿ ಹುಟ್ಟಿಸುವಂತೆ ಇರಬಾರದು ಮತ್ತು ಲೇಖಕರಿಗೆ ಭಾಷೆಯ ಮೇಲಿನ ಹಿಡಿತವಿಲ್ಲದಿದ್ದರ ಅದು ವಿಷಯದ ಜ್ಞಾನಕ್ಕೆ ಕತ್ತಿಯ ಹೊಡೆತದಂತೆ ಆಗುವುದೆಂದು ಕಾರಂತರು ಎಚ್ಚರಿಕೆ ನೀಡಿದರು.

**ಪಾರಿಭಾಷಿಕ ಶಬ್ದಗಳು**

"ಪಾರಿಭಾಷಿಕ ಶಬ್ದಗಳ ಬಳಕೆಗೆ ಸಂಬಂಧಿಸಿದಂತೆ ಭಾರತೀಯ ಭಾಷೆಗಳು ಸಂಸ್ಕೃತದಿಂದ ದೂರವಿರಲಾಗದು. ತಮ್ಮದೇ ಆದ ಪಾರಿಭಾಷಿಕ ಸಂಪತ್ತಿಯನ್ನು ಪ್ರಾದೇಶಿಕ ಭಾಷೆಗಳು ಬೆಳೆಸಿಕೊಳ್ಳುವುದು ವಿಹಿತ" ಎಂದ ಡಾ। ಸುನೀತಿ ಕುಮಾರ್ ಚಟರ್ಜಿ, "ಭಾರತೀಯ ಭಾಷೆಗಳು ವೈಜ್ಞಾನಿಕ ಪಾರಿಭಾಷಿಕ ಶಬ್ದಗಳನ್ನು ಎರವಲು ಪಡೆದುಕೊಳ್ಳಬೇಕಾದ ಹಂತ"ದಲ್ಲಿರುವುದರಿಂದ ಅಖಿಲ ಭಾರತ ಏಕತೆಯ ದೃಷ್ಟಿ ಯಿಂದ ಅವುಗಳನ್ನು ಇಂಗ್ಲೀಷಿನಿಂದಲೇ ಪಡೆದುಕೊಳ್ಳುವುದು ವಿಹಿತ ಎಂದು ಅಭಿಪ್ರಾಯಪಟ್ಟರು.

"ಸಿಲೆಬಸ್"ನ ಕಟ್ಟುಪಾಡಿಗೆ ಪಠ್ಯ ಗ್ರಂಥಗಳನ್ನು ಬಿಗಿದು ಕಟ್ಟುವುದಕ್ಕಿಂತ ವಿಷಯದ ವ್ಯಾಪ್ತಿಗೆ ಭಂಗ ಬರದಂತೆ ಒಟ್ಟು ಸ್ವರೂಪ ಸಿಗುವಂತೆ ಪಠ್ಯ ಗ್ರಂಥಗಳು ನಿರ್ಮಾಣವಾಗಲಿ" ಎಂದು ಚರ್ಚೆಯ ಸಮಾರೋಪಗೊಳಿಸಿದ ಪ್ರೊ॥ ವಿ. ಸೀತಾ ರಾಮಯ್ಯ ತಿಳಿಸಿದರು.

**ಸ್ಮರಣೀಯ ಸಂಜೆ**

ಸಂಜೆ ನಡೆದ ಅಭಿನಂದನ ಗ್ರಂಥದ ಅರ್ಪಣೆಯ ಕಾರ್ಯಕ್ರಮ ಒಟ್ಟು ಏರ್ಪಾಟಿನ ಸುಂದರ ಶೃಂಗ.

ಗುಜರಾತಿನ ಗಲಭೆಯ ಕಾರಣ ಬಾರದೆ ಉಳಿದ ಉಪಕುಲಪತಿ ಡಾ॥ ಉಮಾ ಶಂಕರ ಜೋಶಿಯವರು ನೆರವೇರಿಸಬೇಕಿದ್ದ ಉದ್ಘಾಟನೆಯನ್ನು ಎಳ್ಳಿನಷ್ಟೂ ಕೊರತೆ ಕಾಣದಂತೆ ನಡೆಸಿಕೊಟ್ಟು ಹೃದಯ ತುಂಬಿದ ಮಾತುಗಳನ್ನು ಆಡಿದವರು ವಿ. ಸೀ.

ನವ್ಯ ಪಂಥದ ಹಿರಿಯ ಕವಿ ಪ್ರೊ॥ ಎಂ. ಗೋಪಾಲಕೃಷ್ಣ ಅಡಿಗರು ಸ್ವಾಗತ ಕೋರಿದ ನಂತರ ವಿ. ಸೀ. ಹೃದಯದ ಭಾವನೆಗಳಿಗೆ ಶಬ್ದ ಜೋಡಿಸಿ ಕಾರಂತರ ಹೃದಯದ ಶ್ರೀಮಂತಿಕೆಯನ್ನು ಬಣ್ಣಿಸಿದರು.

"ಮುಕ್ತ, ಪೂರ್ಣ, ನಿರ್ಭೀತ"ರೆಂದು ಕಾರಂತರನ್ನು ಚಿತ್ರಿಸಿದ ಅವರು, ದೃಷ್ಟಿ ಬೇಧಗಳಿದ್ದರೂ ಅವರೊಡನೆ ಬೆಸೆದುಕೊಂಡಿರುವ ತಮ್ಮ ಸ್ನೇಹವನ್ನು ನೆನೆದರು.

ತಾನು ಜೀವನದಲ್ಲಿ ಹೊಂದಿರುವ ಸತ್ಯನಿಷ್ಠೆ ಪ್ರಾಮಾಣಿಕತೆಗಳನ್ನು ಜನಜೀವನ ದಲ್ಲಿ ಕಾಣಬೇಕೆಂಬ ಕಾರಂತರ ಮನದ ಕುದಿತವನ್ನು ಸಭೆಗೆ ವಿ. ಸೀ. ತಿಳಿಸಿದಾಗ ಸಭೆ ಭಾವಮುಗ್ಧವಾಗಿತ್ತು.

**"ಕಾರಂತ - ಪ್ರಪಂಚ"**

ಹರಕೆ, ಹಾರೈಕೆ, ನೆನಪುಗಳು, ರಸಪ್ರಸಂಗಗಳು, ಸಂದರ್ಶನ, ಕಲೆ, ಸಾಹಿತ್ಯ, ಕಾದಂಬರಿ, ವಿಮರ್ಶೆ ಕೃತಿ, ಮತ್ತು ಲೇಖನ ದರ್ಶಿಕೆಗಳನ್ನು ಒಳಗೊಂಡ ಆರುನೂರು ಪುಟಗಳ ಸುಂದರ ಹಾಗೂ ಪ್ರೌಢ ಅಭಿನಂದನ ಗ್ರಂಥ "ಕಾರಂತ ಪ್ರಪಂಚ"ವನ್ನು ಅರ್ಪಿಸುವ ಮೊದಲು "ಕಾರಂತರ ಬ್ರಹ್ಮಚೇತನವನ್ನು ಚಿತ್ರಿಸಲು ಆರು ಸಹಸ್ರ ಪುಟಗಳೂ ಸಾಲವು", ಎಂದು ಹೇಳಿದರು.

ವಿ. ಸೀ. ಸಮಾರಂಭದ ಸಲುವಾಗಿ ಹೊರತಂದ "ಅಭಿನಂದನ"ವನ್ನು ಬಿಡುಗಡೆ ಮಾಡಿದರು.

ಅಭಿನಂದನ ಭಾಷಣಗಳನ್ನು ಮಾಡಿದ ಕಾರಂತರ ಒಲುವಿನ ಗೆಳೆಯರು, ಅಭಿಮಾನಿಗಳು ಉತ್ಸವಕ್ಕೆ ಮತ್ತಷ್ಟು ಮೆರುಗುಕೊಟ್ಟರು.

ಕಾರಂತರ ಬಹುಕಾಲದ ಗೆಳೆಯ ಶ್ರೀ ಕೆ. ಕೆ. ಹೆಬ್ಬಾರರು ಅವರು ಉಳಿಸಿ ಕೊಂಡು ಬಂದಿರುವ ಕೆಚ್ಚನ್ನು ಮೆಚ್ಚಿದರು.

ಶ್ರೀ ಟಿ. ಎ. ಪೈ "ಕಾರಂತರನ್ನು ಅಭಿನಂದಿಸಿ ಸನ್ಮಾನಿಸುವ ಮೂಲಕ ನಾವು ಜೀವನದ ಉನ್ನತ ಮೌಲ್ಯಗಳನ್ನು ಗೌರವಿಸಿದ್ದೇವೆ" ಎಂದರು. "ವಿದ್ಯಾನಗರಿ" ಮಣಿಪಾಲದ ವಿದ್ಯಾ ಸಂಸ್ಥೆಗಳಿಗೆ ಕಾರಂತರ ಕೊಡುಗೆ ಹಿರಿದೆಂದು ಶ್ರೀ ಪೈ ಕೃತಜ್ಞತೆಯಿಂದ ತಿಳಿಸಿದರು.

"ಸುತ್ತಲೂ ಲತ್ತೆ ಕೊಡುವ ಕತ್ತೆ"ಯಾದರೂ "ಯಾರೂ ಇವರ ಸ್ನೇಹಿತರಾಗಿ ಉಳಿಯಬಾರದು" ಎಂದೆನಿಸಿದ್ದರೂ ಸ್ನೇಹವನ್ನು ದಶಕಗಳಿಂದ ಕಾಪಾಡಿಕೊಂಡಿರುವ ಹಿರಿಯ ಲೇಖಕ ಶ್ರೀ ಸಿಂಪಿ ಲಿಂಗಣ್ಣ ಕಾರಂತರಿಗೆ ತಮ್ಮ "ಭೀಮಾ ತೀರದ ಬುತ್ತಿ" ಯನ್ನು ನೀಡಿದರು. "ಗಾಳಿ ನಡೆದಂತೆ, ಉರಿ ಹಬ್ಬುವಂತೆ, ಸಿಡಿಲು ಗುಡುಗುವಂತೆ" ಕಾಲದ ವೇಗದೊಡನೆ ಸೆಣಸುತ್ತಿರುವ ಕಾರಂತರ ಕಾಲಿಗೆ ಅವರನ್ನು ಒಮ್ಮೆ ಹಳಿದವರೂ ಇಂದು ಎರಗುತ್ತಿರುವುದನ್ನೂ ಕಂಡು ಹರ್ಷಪಟ್ಟ ಶ್ರೀ ಸಿಂಪಿಯವರು "ಹೊತ್ತು ಬಂದಾಗ ಹಿಡಿದ ಕಾಲಲ್ಲ ಇದು" ಎಂದರು.

### ಶಿವ – ರಾಮು

ಸತ್ಯ ನಿಷ್ಠೆಗಾಗಿ ನಂಜುಂಡ "ಶಿವ," ಪ್ರಾಮಾಣಿಕತೆಗಾಗಿ ವನವಾಸ ಅನುಭವಿಸಿದ "ರಾಮು" ಕೂಡಿದ "ಶಿವರಾಮು" ಅಭಿನಂದನೆಯಲ್ಲಿ ಪಾಲು ಪಡೆಯುವುದಕ್ಕಾಗಿ ಅವರು ಹರ್ಷಪಟ್ಟರು.

ಮೇಲು ನೋಟಕ್ಕೆ, ಕಾಣ ಸಿಗುವ "ಸಾಧಕನ ಸ್ವರೂಪ," ನಡೆಯಲ್ಲಿ ನುಡಿಯಲ್ಲಿ ನಿಚ್ಚಳವಾಗಿರುವ "ಸ್ಥಿತ ಪ್ರಜ್ಞನ" ವರ್ತನೆ, ಸತ್ಯ ಶೋಧನೆಗಾಗಿ ಅವರು ನಡೆಸುತ್ತಿರುವ "ತಪಸ್ಸು"ಗಳನ್ನು ವಿವರಿಸಿದ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ। ಜವರೇ ಗೌಡರು ಕಾರಂತರನ್ನು "ಸಾಧಕ, ಸ್ಥಿತ ಪ್ರಜ್ಞ, ಮತ್ತು ಋಷಿ"ಯಂತೆ ಕಂಡು ಮಣಿದರು.

### ಪೂರ್ಣ ಮಾನವ

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸಾಹಿತ್ಯ ಅಕಾಡಮಿಯ ಅಧ್ಯಕ್ಷ ಡಾ॥ ಸುನೀತಿ ಕುಮಾರ ಚಟರ್ಜಿ "ಮರಳಿ ಮಣ್ಣಿಗೆ"ಯ ಕೃತಿಕಾರನನ್ನು "ಪೂರ್ಣ ಮಾನವ"ನೆಂದು ಕರೆದರು.

ಗೋಪುರಗಳನ್ನು ದಾಟಿ ದೇವಾಲಯದ ಮೂಲ ವಿಗ್ರಹದ ಬಳಿಗೆ ಬರುವಂತೆ ಕಾರಂತರ -ವ್ಯಕ್ತಿತ್ವದ ಪರಿಚಯವನ್ನು ಹಲವು ಹಂತಗಳಲ್ಲಿ ಕಂಡು, ಕೇಳಿ ತಾವು

ಹರ್ಷಪಟ್ಟಿರುವುದಾಗಿ ಹೇಳಿದ ರಾಷ್ಟ್ರೀಯ ಪ್ರಾಧ್ಯಾಪಕ ಡಾ। ಚಟರ್ಜಿ ಸಂಗೀತ, ಕಲೆ, ಸಾಹಿತ್ಯದ ಹಲವು ಮುಖಗಳ ಸಾಧನೆಯನ್ನು ಮಾಡಿದ ಕಾರಂತರು ಕವೀಂದ್ರ ರವೀಂದ್ರರ ಪಂಕ್ತಿಗೆ ಸೇರುವ ಪ್ರತಿಭಾಸಂಪನ್ನರೆಂದು ಕೊಂಡಾಡಿ "ಶ್ರೀ ಶಿವರಾಮ ಕಾರಂತಃ ಶತಾಯುರ್ಭವತು; ಶ್ರೀ ಶಿವರಾಮ ಕಾರಂತೋ ವಿಜಯತಾಂ" ಎಂದು ಹಾರೈಸಿದರು. ಪ್ರೊ। ಕು. ಶಿ. ಹರಿದಾಸ ಭಟ್ಟರು ಮಾಡಬೇಕಿದ್ದ ಕಾರ್ಯವನ್ನು ಎಂಟು ವರ್ಷಗಳ ನಂತರ ಮಾಡಿ ಹರ್ಷಪಡುತ್ತಿರುವುದಾಗಿ ತಿಳಿಸಿ ವಂದನೆ ಹೇಳಿದರು.

ರಾತ್ರೆ-ಮನರಂಜನೆಯ ಪಟು ಕಾರಂತರೇ ನಿರ್ದೇಶಿಸಿದ "ಗಯ ಚರಿತ್ರೆ" ಯಕ್ಷಗಾನ ನೃತ್ಯ ನಾಟಕ. ಪ್ರದರ್ಶನ ನೀಡಿದವರು "ಕಾರಂತ ಮೇಳ"ದವರು.

**ಕನ್ನಡ ಕಾದಂಬರಿಗಳು**

ಗುರುವಾರ ಬೆಳಗ್ಗೆ ನಡೆದ "ಕನ್ನಡ ಕಾದಂಬರಿಗಳು" ಕುರಿತು ವಿಚಾರ "ಸಂಕೀರ್ಣ" ವನ್ನು ಹೈದರಬಾದಿನ ಅಮೇರಿಕನ್ ಸ್ಟಡೀಸ್ ರಿಸರ್ಚ್ ಸೆಂಟರಿನ ಅಕಾಡೆಮಿ ಅಸೋಸಿ ಯೇಟ್ ಡಾ॥ ಎಂ. ಜಿ. ಕೃಷ್ಣಮೂರ್ತಿ ಅಧ್ಯಕ್ಷತೆವಹಿಸಿ ನಡೆಸಿಕೊಟ್ಟರು.

ಕೃಷಿಕ ಸಾಹಿತಿ "ರಾವ ಬಹದ್ದೂರ್" ಗೋಷ್ಠಿಯನ್ನು ಉದ್ಘಾಟಿಸಿ ಪ್ರಾಸ್ತಾವಿಕ ಭಾಷಣ ಮಾಡಿದ ನಂತರ ರಾವ ಬಹದ್ದೂರ್‌ರ "ಗ್ರಾಮಾಯಣ" ಕುರಿತು ಡಾ॥ ಜಿ. ಎಸ್. ಆಮೂರ್ ಮತ್ತು ಶ್ರೀ ನಿ. ವ್ಯಾ. ಬಲ್ಲಾಳರು ಬರೆದ "ಉತ್ತರಾಯಣ" ಕುರಿತು ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಪ್ರಬಂಧಗಳನ್ನು ಓದಿದರು. ಗೋಷ್ಠಿ ಯಲ್ಲಿ ಪಾಲ್ಗೊಂಡು ಕೃತಿಗಳ ರಚನಾ ತಂತ್ರ, ನಿರೂಪಣಾ ವಿಧಾನ, ಮೂಡುವ ಪ್ರಭಾವ ಕುರಿತು ಬೆಳಕು ಚೆಲ್ಲಿದವರ ಸಂಖ್ಯೆ ಗಮನಾರ್ಹವಾಗಿದ್ದರೂ ಒಂದು ಲೋಪ ಕಂಡು ಬರದಿರಲಿಲ್ಲ. ಹೊಸ ಪೀಳಿಗೆಯ ವಿಮರ್ಶಕರಲ್ಲಿ ಹೆಸರಾಂತವರು, ಬರಹದಲ್ಲಿ ಹೊಸ ಜಾಡು ನವನವೀನ ತಂತ್ರಗಳನ್ನು ಅನುಸರಿಸಿ ಬರೆಯುತ್ತಿರುವ ಲೇಖಕರು, "ಸಂಕ್ರಮಣ", "ಸಾಕ್ಷಿ" ನಿಯತಕಾಲಿಕಗಳಲ್ಲಿ ತಮ್ಮ ಬರಹಗಳನ್ನು ಪ್ರಕಟಿಸಿ ವಿವಾದ ವೇದಿಕೆಯನ್ನು ಸೃಷ್ಟಿಸುತ್ತಿರುವ ಅನೇಕರು ಉತ್ಸವದಲ್ಲಿ ಪಾಲ್ಗೊಂಡಿದ್ದರೂ ಚರ್ಚೆ ಯಲ್ಲಿ ಮೌನ ತಳೆದರು. ಗೋಷ್ಠಿಯ ಅಧ್ಯಕ್ಷ ಶ್ರೀ ಕೃಷ್ಣ ಮೂರ್ತಿಗಳಿಂದ ಹೆಚ್ಚಿನ ನಿರೀಕ್ಷೆ ಹೊಂದಿದ್ದವರಿಗೆಲ್ಲ ಅವರ ಚುಟುಕಾದ ಸಮಾರೋಪ, ಸಂತಸವನ್ನುಂಟು ಮಾಡಲಿಲ್ಲ.

**ಕನ್ನಡ ಪತ್ರಿಕೆಗಳು**

'ಕನ್ನಡ ಪತ್ರಿಕೆಗಳು' ಕುರಿತು ವಿಚಾರ "ಸಂಕೀರ್ಣ" ನಡೆಸಿಕೊಟ್ಟವರು ಸ್ವಯಂ ಕಾರಂತರೇ. ದೊಡ್ಡಪತ್ರಿಕೆಗಳಿಗೆ ಒಬ್ಬನೇ ಸಂಪಾದಕ ಸಾಲದು. ಜೀವನದ ನಾನಾ ಸಮಸ್ಯೆಗಳ ಪೂರ್ವಾಪರಗಳನ್ನೆಲ್ಲ ತೂಗಿ ನೋಡಿ ವಾಚಕವೃಂದಕ್ಕೆ ತಣಿವನ್ನು ನೀಡಬಲ್ಲ ಸಂಪಾದಕರು ಹಲವರಿರಬೇಕು.

ವಿಶ್ವದ ರಾಜಕೀಯ ಪರಿಸ್ಥಿತಿ ಕುರಿತು ಸುದ್ದಿ ಪ್ರಕಟಿಸುವ ಪತ್ರಿಕೆಗಳು ಆಯಾ ದೇಶದಲ್ಲಿ ತಮ್ಮ ಸ್ವಂತ ಸುದ್ದಿಗಾರರನ್ನು ಹೊಂದಿದ್ದು ಅವರ ಮೂಲಕ ಸಂಗ್ರಹಿಸಿದ

ಸುದ್ದಿಯನ್ನೇ ವಾಚಕರಿಗೆ ನೀಡಬೇಕು. ಈ ತ್ರಾಣವಿಲ್ಲದವರು ಈ ಹೊಣೆಯನ್ನು ಹೊರಲಾಗದು.

ಪತ್ರಿಕಾ ಸ್ವಾತಂತ್ರ್ಯದ ಅರ್ಥ ರಾಜ್ಯಾಂಗದಲ್ಲಿ ನಿರೂಪಿಸಿರುವ ನಾನಾ ವ್ಯಕ್ತಿಗಳ ಸ್ವಾತಂತ್ರ್ಯದ ರಕ್ಷಣೆಯೂ ಆಗಿರುವಾಗ ಈ ದಿಸೆಯಲ್ಲಿ ಪತ್ರಿಕೆಗಳ ಸಂಪಾದಕರು ತಮ್ಮ ಮಾತುಗಳ ಮೂಲಕ ಸಲ್ಲಿಸಿರುವ ಕಾಣಿಕೆ ಏನೇನೂ ಸಾಲದು.

ರಾಜಕೀಯ ವ್ಯವಹಾರ ಮಾತ್ರ ಪತ್ರಿಕೆಗಳಿಗೆ ಆಹಾರವಾದರೆ ಸಾಕೇ ? ಉಳಿದ ಬದುಕಿಗೂ ಅಗತ್ಯ ಪ್ರಾಧಾನ್ಯ ನೀಡದಿದ್ದರೆ ಪತ್ರಿಕಾಧರ್ಮ ಪರಿಪಾಲನೆಯಾದೀತೇ ?

ಸುದ್ದಿಗಳ ವಸ್ತು-ವಿಷಯ-ಹಿನ್ನಲೆ ಸಂಗ್ರಹ ಮಾಡುವ ವರದಿಗಾರರು ತಮ್ಮ ಯೋಗ್ಯತೆ, ಪ್ರೌಢಿಮೆ, ಸ್ನೇಹಪರತೆಗಳಿಂದ ಸುದ್ದಿ ಸಂಗ್ರಹಿಸಬೇಕೇ ಹೊರತು ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ಅಳತೆ ಮೀರಿದ ವ್ಯಕ್ತಿ ಪ್ರಚಾರ ನೀಡಿ "ಅಷ್ಟಿಷ್ಟು ಗಿಟ್ಟಿಸುವ" ಮಾರ್ಗ ಹಿಡಿಯಲಾಗದು.

ಪತ್ರಕರ್ತರಿಗೆ "ಬ್ಲಫ್" ಮಾಡುವ ಚಟಬೇಡ. ಇವೆಲ್ಲ ಪತ್ರಕರ್ತರನ್ನು ಕುರಿತು ಕಾರಂತರು ಆಡಿದ ಮಾತುಗಳು.

ಇದಕ್ಕೆ ಮೊದಲು "ಕನ್ನಡ ಪತ್ರಿಕೆಗಳು ಮತ್ತು ಬದಲಾಗುತ್ತಿರುವ ಮೌಲ್ಯ"ಗಳು ಕುರಿತು ಶ್ರೀ ಸೇವ ನಮಿರಾಜ ಮಲ್ಲರು, ಹಾಗೂ "ಪತ್ರಿಕೆಗಳು ಮತ್ತು ರಾಷ್ಟ್ರೀಯ ಮನೋಧರ್ಮ" ಕುರಿತು ಶ್ರೀ ಹ. ವೆಂ. ನಾಗರಾಜರು ಪ್ರಬಂಧಗಳನ್ನು ಓದಿದರು.

### ಬರಹಗಾರರ ನಿರ್ಲಿಪ್ತತೆ

ಕಾರಂತರು ಅಧ್ಯಕ್ಷತೆ ವಹಿಸದಿದ್ದರೆ ಈ ಗೋಷ್ಠಿ "ಅತಿಸಪ್ಪೆ"ಯ ಮಟ್ಟದಿಂದ ಮೇಲೆ ಏರುತ್ತಿರಲಿಲ್ಲ. ಕಾರಣ. ಚರ್ಚೆಯಲ್ಲಿ ಪಾಲ್ಗೊಂಡವರು "ಇಲ್ಲ"ವೆನ್ನುವಷ್ಟು ಕಡಿಮೆ ಇದ್ದು, ಬರಹಗಾರರು "ಇದು ನಮಗಲ್ಲ"ವೆನ್ನುವಂತೆ ನಿರ್ಲಿಪ್ತರಾಗಿದ್ದರು.

ಕಾರಂತರ ಎರಡು ನಾಟಕಗಳನ್ನು – "ಲವಕುಶ" ಗೀತ ನಾಟಕ ಸುರತ್ಕಲ್ ಗಣೇಶ ನೃತ್ಯ ಕೇಂದ್ರದವರು, "ಕಠಾರಿ ಭೈರವ" ನಾಟಕವನ್ನು ಪೆರ್ಡೂರು ಕಲಾಮಂಡಳಿಯವರು – ಅಭಿನಯಿಸಿ ಅಂದಿನ ಮನರಂಜನೆ ನೀಡಿದರು. ಅಲ್ಲಿಗೆ ಉತ್ಸವ ಮುಗಿತಾಯ ಕಂಡಿತು.

### ಮುಗಿದ ಮೇಳ

ಸಮ್ಮೇಳನಾಧ್ಯಕ್ಷರ ವಿಚಾರಪೂರ್ಣ ಪ್ರೌಢ ಗದ್ಯದ "ಅಧ್ಯಕ್ಷ ಭಾಷಣ", ಅಧಿವೇಶನದ ಕೊನೆಯಲ್ಲಿ ಸಮ್ಮೇಳನ ಒಪ್ಪಿಕೊಳ್ಳುವ ನಿರ್ಣಯಗಳು ಇಲ್ಲದೆ ನಡೆದ ಕಾರಂತ ಅಭಿನಂದನ ಉತ್ಸವ, ಸಾಹಿತ್ಯ ಸಮ್ಮೇಳನಗಳಿಗಿಂದ ರುಚಿಕರವಾಗಿ ವ್ಯವಸ್ಥಿತವಾಗಿ, ವೈಭವಪೂರ್ಣವಾಗಿ ನಡೆದು ಚಿರಸ್ಮರಣೀಯ ಸಮಾರಂಭಗಳ ಪಂಕ್ತಿಗೆ ಸೇರಿತು.

ಉತ್ಸವದ ಏರ್ಪಾಡು ಮಾಡಿದವರು ಸಾಹಿತ್ಯ ಸಮಾರಂಭಗಳ ಕ್ಷೇತ್ರದಲ್ಲಿ ಹೊಸ ದಾಖಲೆಯನ್ನು ನಿರ್ಮಿಸಿದರು. ತಮ್ಮ ಔದಾರ್ಯದಿಂದ ಅನುಕರಣೀಯ ಆದರ್ಶವೊಂದನ್ನು ಸ್ಥಾಪಿಸಿದರು.

# ಕಾರಂತ ಮೇಳ

'ಕನ್ನಡಪ್ರಭ'ದ ಸಾಹಿತ್ಯ 'ಸಲ್ಲಾಪ'ದಲ್ಲಿ

ಹಾ. ಮಾ. ನಾಯಕ

ಮೊನ್ನೆ ಉಡುಪಿಯಲ್ಲಿ ಶಿವರಾಮ ಕಾರಂತರಿಗೆ ಕೊಟ್ಟ ಬಾಗಿನ ಗ್ರಂಥದ ಹೆಸರು "ಕಾರಂತ ಪ್ರಪಂಚ". ಇದು ಕಾರಂತರ ವಿಷಯದಲ್ಲಿ ಅತ್ಯಂತ ಸಮರ್ಪಕವಾದ ಹಾಗೂ ಧ್ವನಿವತ್ತಾದ ಹೆಸರು. ಪ್ರತಿ ಒಬ್ಬರಿಗೂ ಅವರದೇ ಆದ ಒಂದು ಸೀಮಿತ ಪ್ರಪಂಚವಿರುತ್ತದೆ. ಆದರೆ ಕಾರಂತರಿಗೆ ಪ್ರಪಂಚವೇ ಅವರದು. ಅವರ ಆಸಕ್ತಿ ಪರಿ ಶ್ರಮಗಳ ಹರವು ಅಷ್ಟು ದೊಡ್ಡದು. ಅವರು ಒಂದು ಪ್ರಪಂಚವನ್ನೇ ಸೃಷ್ಟಿಸಿದ್ದಾರೆ. ಅವರ ಸಾಹಿತ್ಯ ಸೃಷ್ಟಿಯ ವೈವಿಧ್ಯ ಆ ವ್ಯಾಪಕತೆಯದು. ಕಾರಂತರ ಹಾಗೆ ಪ್ರಪಂಚ ದಿಂದ ನೇರವಾಗಿ ಪಡೆದವರು ವಿರಳ, ಇದು ಕಾರಂತ ಪ್ರಪಂಚದ ಮಹತ್ವ.

ಕಾರಂತರು ಕಡಲತಡಿಯಿಂದ ಬಂದವರು. ಅವರಿಗೆ ಬೆಟ್ಟಗಳೂ ತುಂಬಾ ಪರಿಚಿತ ವಾದವು. ಸಹಜವಾಗಿಯೇ ಕಡಲು, ಬೆಟ್ಟಗಳು ಕಾರಂತರ ಬದುಕನ್ನು ತುಂಬಿವೆ. ಅಲ್ಲದೆ ಅವರ ಸಾಧನೆ ಸಿದ್ಧಿಗಳಿಗೆ ಸಂಕೇತವೂ ಆಗಿವೆ. ಕಾರಂತರಂತಹ ಆಳ, ವಿಸ್ತಾರ, ಎತ್ತರಗಳ ಇನ್ನೊಂದು ವ್ಯಕ್ತಿತ್ವವನ್ನು ನಮ್ಮ ನಾಡಿನಲ್ಲಿ ನಾವು ಕಾಣಲಾರೆವು.

ಅವರದು ಸೋಲರಿಯದ ಸಾಹಸ; ಎಂದರೆ ಅವರ ಬದುಕು ಯಶಸ್ಸಿನ ಚರಿತ್ರೆ ಎಂದು ಅರ್ಥವಲ್ಲ. ಸೋಲು ಗೆಲುವುಗಳ ವಿಚಾರದಲ್ಲಿ ಅವರೇ ಒಂದು ಸಲ ಬರೆದು ಕೊಂಡದ್ದುಂಟು. "ಮನುಷ್ಯನಿಗೆ ಅನುಭವ ದೊರಕಿಸಿ ಕೊಡುವುದರಲ್ಲಿ ಸೋಲು ಗೆಲುವಿನಷ್ಟೇ ಮುಖ್ಯ, ಅಥವಾ ಅದಕ್ಕಿಂತ ಪ್ರಯೋಜನಕಾರಿ. ಏಕೆಂದರೆ ಒಂದು ತಕ್ಕಡಿಯಲ್ಲಿ ತನ್ನ ಆವರಣದ ತೂಕ ಒಂದು ಕಡೆ ಇರುವಾಗ ವ್ಯಕ್ತಿಯ ತೂಕ ಮತ್ತೊಂದು ಕಡೆ ಇದ್ದು ಮೊದಲಿನವರ ಭಾರಕ್ಕೆ ವ್ಯಕ್ತಿ ಕಡಿಮೆ ತೂಕದವನಾಗಿ ಕಾಣಿಸುತ್ತಾನೆ. ಯಶಸ್ಸು ನಮ್ಮಂತೆ ಹೋರಾಡುವ ಇತರ ಪ್ರಾಣಿಗಳ ಮುಂದೆ ನಮ್ಮ ಹಿರಿಮೆಯನ್ನು ತೋರಿಸಬಹುದಾದರೂ ಆ ಹಿರಿಮೆಯಿಂದ ಹೆಮ್ಮೆ ಉದಯಿಸಬಹುದಾದರೂ ವ್ಯಕ್ತಿಯ ತೂಕವನ್ನು ಅದೊಂದೇ ಹೇಳಲಾರದು."

ಇದು ಕಾರಂತರ ದೃಷ್ಟಿ. ಅವರ ಸಾಧನೆಗಳ ರಹಸ್ಯ ಸೋಲಿಗನ ತತ್ವಜ್ಞಾನವಲ್ಲ.

ಕಾರಂತರನ್ನು ಅಭಿನಂದಿಸಿ ಮಾತಾಡುತ್ತಾ ಪ್ರೊ॥ ಜವರೇ ಗೌಡರು ಒಂದು ಸೊಗಸಾದ ಮಾತು ಹೇಳಿದರು. "ಋಷಿ, ಯೋಗಿ, ಸ್ಥಿತಪ್ರಜ್ಞ". ಈ ಮಾತುಗಳನ್ನು ಕಾರಂತರು ಒಪ್ಪದವರಾದರೂ ಅವರನ್ನು ವರ್ಣಿಸಲು ಇವುಗಳಿಗಿಂತ ಒಳ್ಳೆಯ ಮಾತು ಗಳಿಲ್ಲ, ಎಂದರು ಜವರೇ ಗೌಡರು. ಋಷಿಗಳು, ಯೋಗಿಗಳು, ಯಾವುದೇ ಕಾಲದಲ್ಲಿ

ಇದ್ದರೆಂಬುದನ್ನು ಕಾರಂತರು ನಂಬದಿರಬಹುದು. ಆದರೆ ಕಾರಂತರಂಥವರೇ ಅವರಾಗಿರುತ್ತಾರೆಂಬುದು ನಮ್ಮ ಕಲ್ಪನೆ.

"ಕಾರಂತ ಪ್ರಪಂಚ" ಅಭಿನಂದನ ಗ್ರಂಥದ ಬಿಡುಗಡೆ ಒಂದು ಸಾಹಿತ್ಯ ಸಮ್ಮೇಳನವೇ ಆದದ್ದು ಕಾರಂತ ವ್ಯಕ್ತಿತ್ವದ ವೈಶಿಷ್ಟ್ಯ. ಏಳು ವರ್ಷಗಳ ಕೆಳಗೆ ಉಡುಪಿಯ ಮಿತ್ರರು ಕಾರಂತರ ಅರುವತ್ತನೆಯ ಜನ್ಮದಿನ ಸಮಾರಂಭವನ್ನು ಆಚರಿಸಿ ಅರುವತ್ತು ಪುಟಗಳ ಚಿಕ್ಕ ಹೊತ್ತಗೆಯನ್ನು ಪ್ರಕಟಿಸಿದ್ದರು. ಈಗ ಅವರೇ 600 ಪುಟಗಳ ಹೆಬ್ಬೊತ್ತಿಗೆಯನ್ನು ರೂಪಿಸಿದ್ದಾರೆ. ಅದು ಕಾರಂತ ದರ್ಶನಕ್ಕೊಂದು ಮೆಟ್ಟಲು.

ಹೊಗಳಿಕೆಯನ್ನು ಒಲ್ಲದ ಕಾರಂತರಿಗೆ ಪ್ರಿಯವಾದ ರೀತಿಯಲ್ಲಿ ಸಮಾರಂಭವನ್ನು ವ್ಯವಸ್ಥೆಗೊಳಿಸಿದ್ದು ಸಮ್ಮಂಧಪಟ್ಟವರ ಚಾಕಚಕ್ಯತೆಗೊಂದು ನಿದರ್ಶನವಾಗಿದ್ದು ಬರಿಯ ಅಭಿನಂದನಪರ ಭಾಷಣಗಳ ಸತ್ಕಾರಕೂಟವಾಗಬಹುದಾಗಿದ್ದ ಸಂದರ್ಭವನ್ನು ವಿಚಾರಗೋಷ್ಠಿಯನ್ನಾಗಿಸಿದ್ದು ಔಚಿತ್ಯ ಪೂರ್ಣವಾಗಿತ್ತು. ಕಾರಂತರ ಆಸಕ್ತಿಯ ಮೂರು ಮುಖ್ಯ ಕ್ಷೇತ್ರಗಳಾದ ಪಠ್ಯ ಪುಸ್ತಕಗಳು, ಕಾದಂಬರಿ ಮತ್ತು ಪತ್ರಿಕೋದ್ಯಮಗಳನ್ನು ಕುರಿತಂತೆ ವಿಚಾರ ವಿನಿಮಯಗಳಾಗುವ ಅವಕಾಶವನ್ನು ಕಲ್ಪಿಸಲಾಗಿತ್ತು.

ಕಾರಂತ ಅಭಿನಂದನ ಸಮಾರಂಭಕ್ಕೆ ಅಖಿಲ ಕರ್ನಾಟಕ ಎಂಬ ವಿಶೇಷಣವನ್ನು ಜೋಡಿಸಿದ್ದರೂ ಒಂದು ಅರ್ಥದಲ್ಲಿ ಅದು ಅಖಿಲ ಭಾರತ ಆಗಿತ್ತು. ಸಮ್ಮೇಳನದಲ್ಲಿ ಭಾಗಿಯಾದವರು ಕನ್ನಡ ನಾಡಿನವರಷ್ಟೇ ಆಗಿರದೆ ಹೊರನಾಡಿನ ಪಂಡಿತರೂ ಇದ್ದರು. ಭಾರತೀಯ ಸಾಹಿತ್ಯವನ್ನು ಪ್ರತಿನಿಧಿಸಿ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಡಾ। ಸುನೀತಿಕುಮಾರ ಚಟರ್ಜಿಯವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದು "ಕೊಂಕಣ, ಕರ್ನಾಟಕ, ಕಾರಂತ" ಶೀರ್ಷಿಕೆಯ ಭಾಷಣ ಮಾಡಿದ್ದು ಅರ್ಥವತ್ತಾಗಿತ್ತು. ವಿವಿಧ ಭಾಷೆಗಳಲ್ಲಿ ಬರೆಯಲಾಗುತ್ತಿದ್ದರೂ ಭಾರತೀಯ ಸಾಹಿತ್ಯ ಒಂದು ಎಂಬ ಮಾತಿಗೆ ಇದು ಸಾಕ್ಷಿಯಾಗಿತ್ತು. ಇಂಥಹ ಮಾತಿಗೆ ಅರ್ಥ ಬರುವುದೂ ಈ ಬಗೆಯ ಸಂದರ್ಭಗಳಲ್ಲಿಯೆ.

ಇಂತಹ ಅವಕಾಶಗಳನ್ನು ಜೋಡಿಸುವುದು ಸಾಮಾನ್ಯವಾದ ಮಾತಲ್ಲ. ಸತತವಾದ, ಜೊತೆಗೆ ತನ್ಮಯಗೊಂಡ ದುಡಿಮೆ, ದೂರದೃಷ್ಟಿಗಳಿಂದ ಮಾತ್ರ ಇದು ಸಾಧ್ಯವಾಗಬಹುದು. ಉಡುಪಿಯ ಸಾಹಿತ್ಯೋತ್ಸವ ಸಂಘಟಕರಾದ ಪ್ರಿನ್ಸಿಪಾಲ ಹರಿದಾಸಭಟ್ಟರ ಕಾರ್ಯದಕ್ಷತೆಯ ದ್ಯೋತಕ. ಹರಿದಾಸ ಭಟ್ಟರಿಗೆ ಮಾತ್ರವೇ ಸಾಧ್ಯವಾಗಬಹುದಾದ ಒಪ್ಪ ಓರಣದ ವ್ಯವಸ್ಥೆಗಳ ಉತ್ಸವಕ್ಕೊಂದು ಆತ್ಮೀಯತೆಯ ಸ್ಪರ್ಶವಿತ್ತು. ಕಾರ್ಯಕ್ರಮಗಳಲ್ಲಿ ಕಲೆಯ ಲೇಪನವಿತ್ತು. ಆ ಸ್ವಾಗತ, ಆ ಪ್ರಾರ್ಥನೆಗಳ ಕಲಾವಂತಿಕೆಯ ಚೆಲುವನ್ನು ನಾವು ಇನ್ನು ಯಾವ ಕಾರ್ಯಕ್ರಮಗಳಲ್ಲಿ ಕಂಡೇವು?

ಡಾ। ಚಟರ್ಜಿಯವರು ಕಾರಂತರನ್ನು ಕುರಿತು ಪ್ರಶಂಸೆಯ ಮಾತುಗಳನ್ನಾಡಿದ್ದರಲ್ಲಿ ಅತಿಶಯೋಕ್ತಿಯೇನೂ ಇರಲಿಲ್ಲ. ಬದಲಿಗೆ ಸಹೃದಯನೊಬ್ಬನ ಕೃತಜ್ಞತೆಯ ಭಾವವಿತ್ತು. "ಮರಳಿ ಮಣ್ಣಿಗೆ"ಯನ್ನು ಭಾರತೀಯ ಸಾಹಿತ್ಯದ ಒಂದು ಆಚಾರ್ಯ ಕೃತಿ ಎಂದು ಹೇಳಿದ ಅವರು ಅದನ್ನು ಓದುತ್ತಿದ್ದಾಗ ತಮಗಾದ ಅನುಭವವನ್ನು ಹೃದಯಸ್ಪರ್ಶಿಯಾಗಿ ವಿವರಿಸಿದರು.

"ಕಾರಂತರು ಚಿತ್ರಿಸಿದ ಪಾರ್ವತಿ ಸರಸ್ವತಿ, ನಾಗವೇಣಿಯರು ಕರ್ನಾಟಕಕ್ಕೆ, ಕೊಂಕಣಕ್ಕೆ ಸೇರಿದವರು ಹೇಗೋ ಬಂಗಾಳ, ಪಂಜಾಬ್, ಮೊದಲಾದ ಕಡೆಗಳಿಗೂ ಹಾಗೆಯೇ ಸೇರಿದವರು. ನಿಜದಲ್ಲಿ ಅವರು ಸಮಗ್ರ ಹಿಂದೂ ಭಾರತಕ್ಕೆ ಸೇರಿದವರು. ಎಂಭತ್ತು ವರುಷಗಳ ಮುದುಕ ನಾನು. ಈ ವ್ಯಕ್ತಿಗಳನ್ನೆಲ್ಲ ನಾನು ನನ್ನ ಸ್ವಂತ ಸಂಸಾರ ಪರಿಸರದಲ್ಲಿಯೆ ಕಂಡಿದ್ದೇನೆ. ಮೊನ್ನೆ ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದಾಗ ಆ ಕಾದಂಬರಿಯನ್ನು ಓದುತ್ತಿದ್ದೆ. ಪಾರ್ವತಿಯ ಸಾವಿನ ಪ್ರಸಂಗ ಬಂದಾಗ ನನಗೆ ಕಣ್ಣೀರು ತಡೆಯಲಾಗಲಿಲ್ಲ. ಪಕ್ಕದವರು ಏನೆನ್ನುವರೋ ಎಂದುಕೊಂಡು ಪುಸ್ತಕವನ್ನು ಮುಚ್ಚಿಬಿಟ್ಟೆ. ಆ ಪ್ರಸಂಗ ನನ್ನ ತಾಯಿ ತೀರಿಕೊಂಡ ಸಂದರ್ಭದ ಯಥಾವತ್ತಾದ ಚಿತ್ರಣವಾಗಿತ್ತು. ಅದು ಅಷ್ಟು ವಾಸ್ತವವಾಗಿದ್ದು ಹೃದಯವನ್ನು ಕಲುಕುವಂಥಾದ್ದಾಗಿದೆ. ಕಲಾವಿದನ ಯಶಸ್ಸಿಗೆ ಹೆಚ್ಚಿಗೇನು ಬೇಕು?"

ಕಾರಂತರ ಉತ್ತರರೂಪವಾದ ಭಾಷಣವು ಸಾಕಷ್ಟು ದೀರ್ಘವಾಗಿದ್ದು ಅವರ ಬರವಣಿಗೆಯನ್ನು ಬಲ್ಲವರಿಗೆ ಹೊಸದೇನೂ ಇರಲಿಲ್ಲ. ದೇವರು, ಧರ್ಮ, ಅಧ್ಯಾತ್ಮ, ಗಾಂಧಿ ಮೊದಲಾದ ವಿಚಾರಗಳನ್ನು ಅವರು ದನಿಯೇರಿಸಿ ಟೀಕಿಸಿದರು. ಅದು ಕಾರಂತರ ಜೀವನ ದೃಷ್ಟಿ. ಅದನ್ನು ಯಾರೂ ಪ್ರಶ್ನಿಸಲಾರರು. ಪ್ರತ್ಯಕ್ಷ ಪ್ರಮಾಣವಲ್ಲದೆ ಇನ್ನೇನನ್ನೂ ಅವರೊಲ್ಲರು. ಉದಾಹರಣೆಗಾಗಿ ನಾನು ಹುಟ್ಟಿದುದು 1902 ನೇಯ ಇಸವಿ ಅಕ್ಟೋಬರ 10ನೇ ದಿನವಂತೆ ಎಂದು ಅವರು ತಮ್ಮ ಆತ್ಮಕಥೆಯಲ್ಲಿ ಬರೆದುಕೊಂಡಿರುವುದುಂಟು! ಆದರೆ ಅವರ ಭಾಷಣ ಕೆಲವು ಮೂಲಭೂತ ವಿಚಾರಗಳನ್ನು ಅತಿಯಾಗಿ ಸರಳೀಕರಿಸಿದಂತೆ ಕೆಲವರಿಗಾದರೂ ಅನ್ನಿಸಿದ್ದರೆ ಆಶ್ಚರ್ಯವಿಲ್ಲ. ಕಾರಂತರು ಅದ್ಭುತ ವ್ಯಕ್ತಿ. ಅವರ ಕೆಲಸಗಳತ್ತ ಕಣ್ಣು ಹಾಯಿಸಿದರೆ ಸಾಕು, ಇದು ಒಬ್ಬ ವ್ಯಕ್ತಿಯ ಒಂದು ಜೀವಮಾನದ ಕೆಲಸವಲ್ಲ ಎನ್ನಿಸುತ್ತದೆ. ಅಂಥವರು ನಮ್ಮ ನಡುವೆ ಇರುವುದೇ ಒಂದು ಹೆಮ್ಮೆ, ಧೈರ್ಯ. ಅವರನ್ನು ಎಷ್ಟೆಷ್ಟು ರೀತಿಯಲ್ಲಿ ಸತ್ಕರಿಸಿದರೂ ಗೌರವಿಸಿದರೂ ಕಡಿಮೆಯೇ. ಉಡುಪಿಯ ಸಮಾರಂಭದಲ್ಲಿ ಕನ್ನಡಿಗರು ಹೊಣೆಯಿಳಿಸಿಕೊಳ್ಳುವ ಒಂದು ಸಂದರ್ಭ.

ಕನ್ನಡ ರಾಷ್ಟ್ರೀಯ, ಅಂತರರಾಷ್ಟ್ರೀಯ ನಕ್ಷೆಯಲ್ಲಿ ಗುರುತಾಗುವುದು ಕಾರಂತರಂಥವರ ಪ್ರತಿಭೆ ಕನ್ನಡೇತರರಿಗೆ ಪರಿಚಯವಾದಾಗಲೇ. ಯಾವ ಮಾನದಿಂದ ಅಳೆದರೂ ಕಾರಂತರು ವಿಶ್ವಲೇಖಕರ ಪಟ್ಟಿಯಲ್ಲಿ ಸೇರಬಲ್ಲವರು. ಅವರ ಬರಹಗಳನ್ನು ಇಂಗ್ಲೀಷಿನಂಥ ಭಾಷೆಗಳಿಗೆ ಅನುವಾದಿಸಿ ಅವರನ್ನು ಸಮರ್ಪಕವಾಗಿ ಪರಿಚಯಿಸಿಕೊಟ್ಟಾಗ ನಮ್ಮ ಪ್ರತಿಷ್ಠೆ ಇನ್ನೂ ಹೆಚ್ಚುತ್ತದೆ. ನನ್ನ ಜನದ ಕಥೆಯನ್ನು ಇಂಗ್ಲೆಂಡಿನವರ ಜ್ಞಾನಾಭಿವೃದ್ಧಿಗೆಂದು ನಾನು ಬರೆಯಲಿಲ್ಲ ಎಂಬುದಾಗಿ ಕಾರಂತರೇನೋ ಹೇಳುತ್ತಾರೆ. ಅದು ಅವರ ಸೌಜನ್ಯ. ಆದರೆ ಕಾರಂತರಂಥವರು ಅವರವರ ಭಾಷೆಗಳ ಗಡಿಯನ್ನು ದಾಟಿದಾಗ ಲೋಕ ಇಂದಿಗಿಂತಲೂ ಸಮೃದ್ಧವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಅತ್ತ ಗಮನ ಕೊಟ್ಟಾಗ ನಮ್ಮ ಹೊಣೆ ಇನ್ನೂ ಇಳಿಯುತ್ತದೆ.

# ಚಿರಸ್ಮರಣೀಯ ರಸ ಚಿಲುಮೆ

ಎಂ. ಜಿ. ಎಂ. ಕಾಲೇಜಿನ ವಾರ್ಷಿಕ ಸಂಪುಟದಲ್ಲಿ

**ಜಿ. ಹಿರಿಯಣ್ಣ ಐತಾಳ**

ಅಂದು ೧೯೬೯ನೇ ನವಂಬರ ೫ ಬುಧವಾರ. ಕಾರಂತರ ಅಭಿನಂದನ ಸಮಾರಂಭ. ಮಹಾತ್ಮಾ ಗಾಂಧಿ ಸ್ಮಾರಕ ಕಾಲೇಜಿನಲ್ಲಿ ಅದು ಅಖಿಲ ಕರ್ನಾಟಕ ಕ್ಷೇತ್ರವನ್ನು ಆವರಿಸಿದ ಸ್ನೇಹರಂಗದ ಪ್ರದರ್ಶನ. ಕನ್ನಡ ಗುಡಿಯ ಶಿಲ್ಪಿಗಳಿಗೆಲ್ಲಾ ಅಲ್ಲಿಗೆ ಆಹ್ವಾನ. ಧಾರವಾಡ, ಮೈಸೂರು, ಬೆಂಗಳೂರು ಮತ್ತು ಮಂಗಳೂರಿನವರ ಮಿಲನ. ಕಾಲ ಎರಡೇ ದಿನಗಳಾದರೂ, ಪ್ರಯೋಜನ ಅಪಾರ. ಪರಸ್ಪರ ವಿಚಾರ ವಿನಿಮಯದಲ್ಲಿ ಕಾಲಚಕ್ರದ ಸುರುಳಿ, ಕಲ್ಲು ಬೆಟ್ಟಗಳ ಮೇಲೆ ಕವಿಗಳ ಓಡಾಟ, ಕನ್ನಡ ಗಂಡೆದೆಯ ಬಿಚ್ಚು ಮಾತುಗಳ ಹಾರಾಟ, ಮಾನಸಿಕ, ಬೌದ್ಧಿಕ ಉಗ್ರಾಣಕ್ಕಾಗಿ ಸಂದುದು ಈ ಕೂಟ; ಮಧ್ಯೆ ನುಸುಳಿ 'ಆಟೋ ಗ್ರಾಫಿ' ಆಶಿಸುವವರ ಕಾಟ, ಅದ್ದೂರಿಯ ಊಟ. ಕಿರಿಯರಿಗೆ ಕಾರಂತರ ಅನುಭವದ ಆಳ, ವಿಸ್ತಾರ, ಘನತೆ, ವ್ಯಾಪ್ತಿಯನ್ನು ಕಂಡು ಅಚ್ಚರಿ; ಸಾಹಿತಿ ಕಾರಂತರ ವಿದ್ಯಾರ್ಥಿಮುಖದ ಸಂದರ್ಶನ ಸಂದರ್ಭ ಒದಗಿಸಿದ ಅಭಿಮಾನಿಗಳ ಹೃದಯದ ಒಲವಿನ ಹರಿವು; ಇವು ಈ ಸಮಾರಂಭದ ವೈಶಿಷ್ಟ್ಯಗಳು. ತನ್ಮೂಲಕ ಸಾಹಿತಿ, ಸಾಹಿತ್ಯಾರಾಧಕ, ಸಾಹಿತಿ ಆರಾಧಕ ಕು. ಶಿ ಯವರು ಎಲ್ಲರಿಗೂ "ಖುಷಿ"ಯಾದರು.

ಉತ್ಸವದ ಸಮಾರಂಭ ಪ್ರಾರಂಭದಲ್ಲೇ ರಾಜಕೀಯದಿಂದ ದೂರ. ರಾಜಕೀಯವು ಸಾಹಿತ್ಯವನ್ನು ಆರಿಸಿಕೊಂಡರೆ, ಆವರಿಸಿಕೊಂಡರೆ ಆಗದು ಎಂದು ಕಾರಂತರ ಎಚ್ಚರಿಕೆ ಉಂಟಷ್ಟೇ! ಮಾನ್ಯ ಮಂತ್ರಿಗಳು ಅನಿರೀಕ್ಷಿತ ಕಾರಣದಿಂದಾಗಿ ಗೈರು ಹಾಜರು. ಅಧ್ಯಕ್ಷಸ್ಥಾನ ತುಂಬಿದ ಕೀರ್ತಿ ವಿ.ಸೀಯವರಿಗೆ.

ಪೂರ್ಣ ಕುಂಭದೊಡನೆ ಕಾಲೇಜಿನ ಇದಿರಲ್ಲೇ ಸಮಸ್ತ ಕವಿಕುಲದಿಂದ ಕಾರಂತರಿಗೆ ಭವ್ಯಸ್ವಾಗತ; ಗಜರಾಜನಿಂದ ಪುಷ್ಪಾಂಜಲಿ ಅರ್ಪಣೆ. ಯಕ್ಷಗಾನ ವೇಷಗಳೂ ಇದಿರಲ್ಲಿದ್ದುದು ಮುಖ್ಯ ವೈಶಿಷ್ಟ್ಯ. "ನಿಮ್ಮಿಂದಾಗಿ ಈ ಕಲೆ ಉಳಿದಿದೆ" ಎಂಬುದು ಧ್ವನಿ ಇರಬೇಕು. ರವೀಂದ್ರ ಮಂಟಪಕ್ಕೆ ನೇರವಾಗಿ ಪ್ರವೇಶ, ಸ್ನೇಹಿತರ, ಅಭಿಮಾನಿಗಳ ಪುರಸ್ಕಾರದಿಂದ. ಕಾರಂತರಲ್ಲಿ ಅನಿರ್ವಚನೀಯ ಭಾವ ಮೂಡಿದ್ದುದು ಮುಖದಿಂದ ವ್ಯಕ್ತವಾಗುತ್ತಿತ್ತು. ಅದು ಹಲವು ಭಾವಗಳ ಸಂಗಮವಿರಬೇಕು. ಮುಕುಳಕರಪುಟ ನಾಗಿ (ಮುಂದಿನ ಆನೆಯಂತೆ) ಗಂಭೀರ ಹೆಜ್ಜೆ ಹಾಕುವ ಈ ಕವಿಕುಲ ಕಂಠೀರವನನ್ನು ಇದಿರುಗೊಳ್ಳಲು ಇದ್ದವರು ಸಾಹಿತಿಗಳು, ಮಿತ್ರರು, ಪ್ರತಿನಿಧಿಗಳು ಮಾತ್ರ. ಆ ಧೀಮಂತ ಶಕ್ತಿ ಅಭಿನಂದನೆಗೆ ಪ್ರತಿವಂದಿಸಿತ್ತು.

ಕನ್ನಡದ ಹಿರಿಯ ಸಾಹಿತಿ, ವಿಮರ್ಶಕ ವಿ. ಸೀ. ಅಧ್ಯಕ್ಷ ಸ್ಥಾನದಲ್ಲಿ ವಿರಾಜಿಸಿದರು. ಉತ್ಸವದಲ್ಲಿ ಯಾರು ಅಲ್ಲಿಗೆ ಅಗತ್ಯವಿತ್ತೋ ಅವರಿಗೆ ಸಂದರ್ಭ ಒದಗಿತ್ತು. ಆಪ್ತ ಮಿತ್ರರಿಬ್ಬರನ್ನು ವೇದಿಕೆಯಲ್ಲೇ ಅಕ್ಕ ಪಕ್ಕದಲ್ಲೇ ಕಾಣುವ ಸುಯೋಗ. ಸ್ವಾಗತಿಸಿದವರು ವಿದ್ಯಾತಜ್ಞ ಡಾ. ಟಿ. ಮಾಧವ ಪೈ: "ಕಾರಂತರನ್ನು ಅರುವತ್ತರಂದು ಸನ್ಮಾನಿಸಿದುದು ಕಡಿಮೆಯಾಯಿತೆಂತಲೇ ಮತ್ತೊಮ್ಮೆ ಈ ಪುರಸ್ಕಾರ; ಕಾರಂತರ ಅನಾಸಕ್ತಿಗೆ ಬೆದರದೆ ತಮ್ಮ ಪ್ರಾಮಾಣಿಕ ಅಭಿವ್ಯಕ್ತಿಯನ್ನು ತೋಡಿಕೊಳ್ಳಲೋಸುಗ ಈ ಅಭಿನಂದನ ಸಮಾರಂಭ" ಎಂದರು. ಸತ್ಕಾರ ಸಮಾರಂಭಗಳು ಕಾರಂತರಿಗೆ ಬೇಕಿಲ್ಲ. ಆದರೆ ಅಭಿಮಾನಿಗಳ ಅಭಿನಂದನೆ ಸ್ವೀಕರಿಸದಿದ್ದರೆ ಆಗುತ್ತದೆಯೇ ?

ಉತ್ಸವದ ಉದ್ಘಾಟನೆಯನ್ನೂ ವಿಚಾರ ಸಂಕಿರಣದ ಉದ್ಘಾಟನೆಯನ್ನೂ ಪೂರೈಸಿದವರು ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿ ಪ್ರೊ। ಜವರೇ ಗೌಡರು— "'ಯೋಗ, ತಪಸ್ಸು, ಸ್ಥಿತಪ್ರಜ್ಞೆ'—ಕಾರಂತರು ಒಪ್ಪುವುದಿಲ್ಲ. ಆದರೆ ಅವರಲ್ಲಿ ನಾವು ಅದನ್ನು ಕಾಣುತ್ತೇವೆ. ಅವರು ಋಷಿಯಾಗಿ ಸ್ಥಿತ ಪ್ರಜ್ಞರಾಗಿ ಬಾಳಿದವರು. ಕಾರಂತರು ಯಾವಾಗಲೂ ಅರುವತ್ತರಲ್ಲೇ ಇರಲಿ ಎಂಬುದು ನನ್ನ ಹಾರೈಕೆ." "ಕನ್ನಡದಲ್ಲಿ ವೈಜ್ಞಾನಿಕ ಪಠ್ಯಗಳು" ಪ್ರಬಂಧ ರಚಿಸಿ ಓದಿದವರು ಶ್ರೀ ಜೆ. ಆರ್. ಲಕ್ಷ್ಮಣ ರಾವ್; "ಕನ್ನಡದಲ್ಲಿ ಮಾನವಿಕ ಪಠ್ಯಗಳು"—ಬೆಳೆಯುತ್ತಿರುವ ಸಾಹಿತಿ ಉದ್ಯಾವರ ಮಾಧವಾಚಾರ್ಯರ ಕೊಡುಗೆ. ಈರ್ವರ ಪ್ರಬಂಧಗಳು ವ್ಯಾಪಕ ವಿಷಯವನ್ನು ಒಳಗೊಂಡಿದ್ದುವು. ಕಾರಂತರು ಕನ್ನಡ ಪಠ್ಯ ಪುಸ್ತಕಗಳನ್ನು ಬರೆಯುವವರಿಗೆ ಎಚ್ಚರಿಕೆಯಿತ್ತರು: "ವಿದ್ಯಾರ್ಥಿಗಳಿಗೆ ವಿಷಯ ತಮ್ಮ ಅಭಿವ್ಯಕ್ತಿಯೇ, ಅನುಭವವೇ ಎಂಬಂತಿರಬೇಕು. ಅದು ಕೇವಲ ಪಾರಿಭಾಷಿಕ ಕೋಶ ಆಗಬಾರದು. ನಾವು ಶಬ್ದಗಳ ಪ್ರಾದೇಶಿಕತೆ ಇದಿರಿಸಬೇಕು. "ಸಮಾನ, ಸಾಮಾನ್ಯ" ವ್ಯತ್ಯಾಸ ತಿಳಿಯಿರಿ. ಪ್ರತಿ ಶಬ್ದಕ್ಕೂ ಕೂಲಂಕಷ ವಿವೇಚನೆ ಬೇಕು. ಸಸಾರಜನಕವಾಗಿ ನೈಟ್ರೋಜನ್ ಕೊನೆಗೆ ಎನ್‌ಟು ಆಗುವುದು ಬೇಡ. ಪಠ್ಯಗಳು ವಿದ್ಯಾರ್ಥಿಗಳಿಗೆ ಸಮೀಪವರ್ತಿ ಆಗದಿದ್ದರೆ ಅವು ಒಲೆಸೇರಲಿ.

"ರಚನಕಾರರು ತಾವು ಕನ್ನಡದಲ್ಲಿ ಶಬ್ದ ಪ್ರೌಢಿಮೆ (ಪ್ರಭುತ್ವ) ಪಡೆದು ಮತ್ತೆ ಈ ಕಾರ್ಯಕ್ಕೆ ಕೈಹಾಕಲಿ, ಭಾಷೆ ಅಭಿವ್ಯಕ್ತಿಗೆ ಆತಂಕ ತಾರದೆ ಇರಲಿ".

"ಪಾರಿಭಾಷಿಕ ಶಬ್ದಗಳಿಗಾಗಿ ಸಂಸ್ಕೃತದ ಸಹಾಯ ಪಡೆಯಬಹುದಲ್ಲವೇ ? ಆದರೂ ಪ್ರತಿಭಾಷೆಗೂ ತನ್ನದೇ ಆದ ಶಬ್ದ ಸಂಪತ್ತು ಬೇಕೇ ಬೇಕು"—ಭಾರತೀಯ ಸಾಹಿತ್ಯ ಎಕಾಡೆಮಿ ಅಧ್ಯಕ್ಷ ಡಾ। ಸುನೀತಿ ಕುಮಾರ ಚಟರ್ಜಿಯವರ ಉಪದೇಶ. ಮುಂದುವರಿಸಿ ಅವರೆಂದರು: "ಇಂಗ್ಲಿಷಿನ ಪದಗಳನ್ನೂ ಹಾಗೆಯೇ ಬಳಸಬಹುದಲ್ಲವೇ ?" "ಪಠ್ಯ ಪುಸ್ತಕ 'ಸಿಲೆಬಸ್'ನ ಆಧಾರದಿಂದ ರಚಿಸಿದ ನೋಟ್ಸು ಆಗಬಾರದು. ವಿಷಯದ ವ್ಯಾಪ್ತಿಗೆ ಭಂಗ ಬಾರದಂತೆ ವಿದ್ಯಾರ್ಥಿಗಳ ಮನಮುಟ್ಟುವ ಪಠ್ಯ ಪುಸ್ತಕಗಳು ಬೇಕು" ಎಂದು ಶ್ರೀ ವಿ. ಸೀತಾರಾಮಯ್ಯ ಅಧ್ಯಕ್ಷ ಸ್ಥಾನದಿಂದ ಸಾರಿದರು. "ಪಠ್ಯ ಪುಸ್ತಕಗಳೇ ಬೇಡ"ವೆನ್ನುವ ಮಾತನ್ನು ಅವರು ಒಪ್ಪಲಿಲ್ಲ.

ಸಂಜೆ ಕಾರಂತ ಅಭಿನಂದನ ಸಭೆ. ಕಡಲ ತಡಿಯ ಭಾರ್ಗವ ಶ್ರೀ ಕೋಟ ಶಿವರಾಮ ಕಾರಂತರ ಅಭಿನಂದನ ಸಮಾರಂಭ. ಈಗ ಸಾಹಿತ್ಯೋತ್ಸವ ಅಭಿಮಾನಿಗಳ ಸಂತಸದ ಪರಾಕಾಷ್ಠೆಯನ್ನು ಮುಟ್ಟಿತು.

ಉದ್ಘಾಟಕರಾದ ಗುಜರಾತಿನ ಡಾ। ಉಮಾಶಂಕರ ಜೋಶಿಯವರು ಬಂದಿರಲಿಲ್ಲ. ಆ ಕೊರತೆ ತುಂಬಿಸಿದ ವ್ಯಕ್ತಿ ವಿ. ಸೀ.

ನವ್ಯ ಕವಿ ಪ್ರೊ। ಎಂ. ಗೋಪಾಲಕೃಷ್ಣ ಅಡಿಗರ ಸ್ವಾಗತ; ವಿ. ಸೀ. ತುಂಬಿ ಬಂದ ಕಂಠದಿಂದ ತಮ್ಮ ಹೃದಯವನ್ನು ಗೆದ್ದ ಕಾರಂತರನ್ನು ಹೃದಯಂಗಮವಾಗಿ ಚಿತ್ರಿಸಿದರು. ಈ ಚಿತ್ರ ಸಾಹಿತಿಗಳ ಒಳಗಣ್ಣಿದಿರಲ್ಲಿ ಅಚ್ಚಳಿಯದೆ ಉಳಿಯುವಂತಹದು. "ಸತ್ಯ, ನಿಷ್ಠೆ, ಪ್ರಾಮಾಣಿಕತೆ, ನಿರ್ಭೀತಿ" ಇವು ಕಾರಂತರು ನಡೆದುಬಂದ ಜೀವನದ ಹೆಜ್ಜೆಗಳು. ಇವನ್ನು ಬಿಟ್ಟು ಅವರಿಲ್ಲ. ಅವರ ಬರಹ ಮತ್ತು ನಡೆ ನುಡಿಗಳಲ್ಲಿ ಭೇದವನ್ನು ಕಾಣಲು ಅಸಾಧ್ಯ. ನನಗೂ ಕಾರಂತರಿಗೂ ಅನೇಕ ವಿಷಯಗಳಲ್ಲಿ ಅಭಿಪ್ರಾಯ ಭೇದ ಉಂಟಾದರೂ ಅದು ನಮ್ಮ ಗಾಢ ಮೈತ್ರಿಗೆ ತೊಂದರೆ ತಂದಿಲ್ಲ; ಅನುಕೂಲವೇ ಆಗಿದೆ."

ಆರುನೂರು ಪುಟಗಳ ಬೃಹದ್ಗ್ರಂಥ "ಕಾರಂತ ಪ್ರಪಂಚ"ವನ್ನು ಉದ್ಘಾಟಿಸುತ್ತಾ ಅವರೆಂದರು:

"ವಿಶ್ವ, ಪ್ರಪಂಚ, ಲೋಕ—ಈ ಶಬ್ದಗಳಿಗೆಲ್ಲಾ ಅರ್ಥ ವೈವಿಧ್ಯ ಇದೆ. ಆದರೆ ಈ "ಕಾರಂತ ಪ್ರಪಂಚ"ವೆಂಬ ಹೆಸರು ಈ ಗ್ರಂಥಕ್ಕೆ ಯೋಗ್ಯ, ಸಾರ್ಥಕ. ಇದು ಕಾರಂತರದೇ (ಒಬ್ಬ ವ್ಯಕ್ತಿಯ) ಪ್ರಪಂಚ."

ಆದರೂ ಆರುನೂರು ಪುಟಗಳಲ್ಲಿ ಕಾರಂತರ ಪೂರ್ಣ ವ್ಯಕ್ತಿತ್ವವನ್ನು ಚಿತ್ರಿಸಲು ಸಾಧ್ಯವಾಗದು. ಕಾರಂತರ ವೈವಿಧ್ಯಮಯ ಜೀವನವನ್ನು ತಮ್ಮ ತಮ್ಮ ದೃಷ್ಟಿ ಕೋನದಿಂದ ಸಾಹಿತಿಗಳೂ, ಮಿತ್ರರೂ ಅಳೆದಿದ್ದಾರೆ. (ಸಾಗರದ ನೀರನ್ನು ಕೊಡದಿಂದ ಅಳೆದಂತೆ) ಸಮಾರಂಭದ ಸವಿ ನೆನಪಿನ ಚಿಕ್ಕ ಪ್ರತಿ 'ಅಭಿನಂದನ'ವೂ ಅವರಿಂದ ಹೊರಡಿಸಲ್ಪಟ್ಟಿತು.

ಡಾ। ಕಾರಂತರ ಕಲಾ ಬಂಧು ಶ್ರೀ ಕೆ. ಕೆ. ಹೆಬ್ಬಾರರು ತಮ್ಮ-ಕಾರಂತರ ಮಧುರ ಸ್ನೇಹವನ್ನು ಸ್ಮರಿಸಿ, "ಮುಂದೆಯೂ ಧೀಮಂತ ಕಾರಂತರು ಕಾರಂತರೇ ಆಗಿ ಬದುಕಲಿ" ಎಂದು ಹಾರೈಸಿದರು. ಕಾರಂತರ ಕಲಾವಂತಿಕೆಯ ಕಣ್ಣುಗಳು ಪುಷ್ಟಿಗೊಳ್ಳಲಿ ಎಂಬುದೂ ಅವರ ಆಶಯ.

ಶ್ರೀ ಟಿ. ಎ. ಪೈಯವರು "ಕಾರಂತರನ್ನು ಸನ್ಮಾನಿಸಿ ನಾವು ಜೀವನದ ಉದಾತ್ತ ಧ್ಯೇಯಗಳನ್ನು ಗೌರವಿಸಿದ್ದೇವೆ ಎಂಬ ಅಭಿಮಾನ ನಮಗುಂಟು. ಅರವತ್ತರಂದು ಆಗದ ಈ ಸಮಾರಂಭ ಇಂದು ಕೈಗೂಡಿದುದಕ್ಕಾಗಿ ನಾವು ಧನ್ಯರು. 'ವಿದ್ಯಾ ತಜ್ಞ ಕಾರಂತರ ಸಹಾಯದಿಂದಾಗಿಯೇ ವಿದ್ಯಾನಗರವಾದ ಮಣಿಪಾಲ ಎದ್ದು ನಿಂತಿದೆ"— ಎಂದು ಕೃತಜ್ಞತೆಯಿಂದ ತಮ್ಮ ಹೃದಯದೊಲವನ್ನು ವ್ಯಕ್ತಪಡಿಸಿದರು.

ಭೀಮಾ ತೀರದಿಂದ ಸಂದೇಶ ತಂದ ಶ್ರೀ ಸಿಂಪಿ ಲಿಂಗಣ್ಣ "ಅಖಿಲ ಕರ್ನಾಟಕ ಕೂಟಕ್ಕೆ ನಾವೂ ಸೇರಿದ್ದೇವೆ. 'ಸುತ್ತಲೂ ಲತ್ತೆ ಕೊಡುವ ಕತ್ತೆ'ಯಾದ ಕಾರಂತರ

ಸ್ನೇಹಿತರಾಗಿ ಯಾರೂ ಉಳಿಯಬಾರದೆಂದಿದ್ದರೂ ನಾನು ಅವರ ಕೆಳೆತನಕ್ಕೆ ಗಂಟು ಬಿದ್ದೆ. ಭೀಮಾ ತೀರಕ್ಕೆ ಅವರು ಬಂದಾಗ ಮೊದಲ ಪರಿಚಯ. ಮತ್ತೆ ಗಾಢ ಪ್ರೇಮ. ನಾನು ಕುಳಿತಲ್ಲೇ ಕಾರಂತರ ಬಹುಮುಖ ಓಡಾಟವನ್ನು ಕಾಣುತ್ತಿರುತ್ತೇನೆ. "ದೇಹ ದೂರದಲ್ಲಿ ಇದ್ದರೂ ಹೃದಯ ಅವರ ಸಮೀಪದಲ್ಲೇ ಇರುತ್ತದೆ."

ಶಿವರಾಮ – ಶಬ್ದ ವಿಶ್ಲೇಷಣೆ ಗೈದ ಶ್ರೀ ಸಿಂ. ಪಿ. ಲಿಂಗಣ್ಣ ಮುಂದುವರಿಸಿದರು – "ಸತ್ಯಕ್ಕಾಗಿ ನಂಜುಂಡ ಶಿವ, ಪ್ರಾಮಾಣಿಕತೆಗಾಗಿ ತೊಳಲಿದ ರಾಮ ಕೂಡಿ, ಈ "ಶಿವರಾಮ"ರಾಗಿದ್ದಾರೆ. ಅವರಿಗೆ ಅಭಿನಂದನೆ ಸಲ್ಲಿಸುವುದೆಂದರೆ ನಮಗೆ ನಾವು ಸಲ್ಲಿಸಿಕೊಂಡ ಹೆಮ್ಮೆಯ ಅಭಿನಂದನೆಗಳು. ಕಾರಂತರನ್ನು ಅಭಿನಂದಿಸಿದವರನ್ನು ನಾವು ಅಭಿನಂದಿಸಬೇಕಾಗಿದೆ."

ದೇಜಗೌ ಅವರು ಕಾರಂತರ ವ್ಯಕ್ತಿತ್ವದ ಇನ್ನೊಂದು ಮುಖ ತೋರಿಸಿದರು. "ಮೊದಲ ನೋಟಕ್ಕೆ ಕಾರಂತರದು ಸಿಂಹ ಗಾಂಭೀರ್ಯ. ಮಾತನಾಡಿಸಿದಾಗ ಅವರ ಮೊದಲ "ಹುಂ" ಭಯ ಹುಟ್ಟಿಸುವುದಾದರೂ ನಮ್ಮ ಹೃದಯವನ್ನು ಸುಲಭವಾಗಿ ಗೆದ್ದ ಮೇಲೆ ಕಾರಂತರು ಸ್ನೇಹಮಯ. ಕನ್ನಡ ವಿಶ್ವಕೋಶ ತಯಾರಿಕೆಯಲ್ಲಿ ಕಾರಂತರ ಪ್ರತಿಭೆಯ ಪ್ರಕಾಶವನ್ನು ನಾವು ಕಂಡೆವು, ಆಶ್ಚರ್ಯಗೊಂಡೆವು. ಅವರ ಕಾರ್ಯ ತತ್ಪರತೆ, ಶ್ರದ್ಧೆ, ಹಾಸ್ಯದ ಚಟಾಕಿ ನಮಗೆ ಬೇಕಿದೆ. ಅವರನ್ನು ನಾವು ಅಭಿನಂದಿಸುತ್ತೇವೆ. ಅಭಿವಂದಿಸುತ್ತೇವೆ".

ಅನಂತರ ಉತ್ತರ ಕೊಡಲು ಕಾರಂತರು ಎದ್ದು ನಿಂತರು. ಸಭೆ ಸ್ತಬ್ಧವಾಗಿತ್ತು. ಎಲ್ಲ ಕಿವಿಗಳು ಅತ್ತ ಸರಿದವು. ಕಾರಂತರ ಉತ್ತರ ಚಿರಸ್ಮರಣೀಯ.

"ನನ್ನ ಮನಸ್ಸು ಮೂಕವಾಗಿರಲಾರದ ಯಾವುದೋ ಒಂದು ಸಂಕಟಕ್ಕೆ, ಸಂವೇದನೆಗೆ ಒಳಗಾಗಿ ಅದನ್ನು ಹೊರಗೆ ಹಾಕುವ ಪ್ರಯತ್ನದಲ್ಲಿ ನಾನು ತೊಡಗಿದೆ.

"ನನ್ನ ಜೀವನದ 68 ವರ್ಷಗಳ ಲೆಕ್ಕಾಚಾರ ನಿಮಗೆ ನಾನು ಒಪ್ಪಿಸಬೇಕಾಗಿದೆ. ಕನ್ನಡಿಗರಿಗೆ ಈ ಮೂಲಕ ನಾನು ಋಣಭಾರ ತೀರಿಸುತ್ತಿದ್ದೇನೆ. ನನಗೆ ನನ್ನ ಬದುಕಿನ ಪಯಣವನ್ನು ಹಿಂದಿರುಗಿ ನೋಡಬೇಕೆನ್ನಿಸುವುದಿಲ್ಲ. ಪುನರ್ಜನ್ಮದಲ್ಲಿ ನನಗೆ ನಂಬಿಕೆ ಇಲ್ಲ. ನಾನೇ ಶ್ರೇಷ್ಠ ಎಂಬ ಹೆಮ್ಮೆ ಇಲ್ಲ. ನಾನು ನನ್ನ ಮೊದಲ ತಲೆಮಾರಿಗೂ ಮುಂದಿನದಕ್ಕೂ ಇರುವ ಸಂಬಂಧದ ತಂತು ಮಾತ್ರ. ಎಲ್ಲರಂತೆ ನನಗೂ ವಿನಾಶವಿದೆ.

"ಅನುರಕ್ತಿಯಿಂದ ತೊಡಗಿದ ನನ್ನ ಜೀವನವಿಂದು ರಸೆಲ್ ವಾದವನ್ನು ಸಮೀಪಿಸಿದೆ. ಗಾಂಧಿ, ಬುದ್ಧ, ರಾಮಕೃಷ್ಣರ ಪ್ರಭಾವ ನನ್ನ ಮೇಲೆ ಆಯಿತು. ಆದರೂ ಕೊನೆಗೆ ತಾರ್ಕಿಕ ಬುದ್ಧಿ ಬೆಳೆದಾಗ ಕಡ ತಂದ ಉಪದೇಶಗಳಿಂದ ಏನೂ ಪ್ರಯೋಜನವಿಲ್ಲ, ಎಂದು ತಿಳಿದು ನನ್ನದೇ ಹಾದಿ ಹಿಡಿದೆ.

"ನನಗೆ ಶಾಲೆ ಅಥವಾ ಕಾಲೇಜಿನಿಂದ ಸಿಕ್ಕಿದ ಜ್ಞಾನ ಶೂನ್ಯ. ಆದರೆ ನನ್ನ ಸಂಚಾರ, ಬದುಕನ್ನು ಹತ್ತಿರದಿಂದ ಕಾಣುವ ಬಯಕೆ ಇವೆರಡು ಸಾಕಷ್ಟು ಕಲಿಸಿದವು."

"ನನಗೆ ಈಗ ದೇವರಲ್ಲಿ ನಂಬಿಕೆ ಇಲ್ಲ. ಏಕೆಂದರೆ ದೇವರನ್ನು ಸೃಷ್ಟಿಸಿದವ ಮನುಷ್ಯ. ದೇವರ, ಧರ್ಮದ ಹೆಸರಿನಲ್ಲಿ ವಂಚಿಸುವ ಭಂಡರನ್ನು ಕಂಡು ಸಿಟ್ಟೂ ಬಂತು."

"ನನಗೆ ನನ್ನ ಬಾಳು ಸತ್ಯ, ಬುದ್ಧಿ ಸತ್ಯ, ನನ್ನ ಮನಸ್ಸಿನ ಪ್ರಚೋದನೆ ಸತ್ಯ ವೆನಿಸಿದೆ. ಆದ್ದರಿಂದ ಬದುಕಿನ ಎಲ್ಲಾ ಸಮಸ್ಯೆಗಳತ್ತ ದೃಷ್ಟಿ ಹಾಯಿಸಿದೆ.

"ನಿದ್ರಿಸುತ್ತಿದ್ದ ಸಮಾಜವನ್ನು ಎಚ್ಚರಿಸುತ್ತೇನೆ ಎಂದು ಹೊರಟ ನನಗೂ ನಿರಾಶೆ ಕಾದಿತ್ತು. ಆದರೆ ನನ್ನ ದೌರ್ಬಲ್ಯವನ್ನು ನಾನು ನೀಗಿಸಿಕೊಳ್ಳದೆ ಸಮಾಜವನ್ನು ಎತ್ತುತ್ತೇನೆ ಎಂಬ ಹುಚ್ಚು ಹೆಮ್ಮೆ ಈಗ ಇಲ್ಲ. ಜನರನ್ನು ಮೇಲೆತ್ತುವ ಇಲಾಖೆಯೇ ಬೇರೆ. ಅದರಲ್ಲಿ ನಾನಿಲ್ಲ.

"ಕನ್ನಡಿಯ ಮುಂದೆ ನಿಂತಾಗ ಕುಬ್ಜವಾಗಿ ಕಾಣುವ ನಿಮ್ಮ ಮುಸುಡಿಯನ್ನು ಎತ್ತರಿಸದೆ ಯಾವ ಲೋಕವನ್ನು ಎತ್ತಲು ಹೋಗುವಿರಿ? ಜೀವನದ ಉನ್ನತ ಮೌಲ್ಯಗಳಿಗಾಗಿ ದುಡಿದರೆ ಅದೇ ಪ್ರಾಮಾಣಿಕ ಪ್ರಯತ್ನ. ಅಷ್ಟೆ ಸಾಕು."

"ನನ್ನ ಜೀವನದಲ್ಲಿ ನಿರಾಶೆ ತುಂಬಿದವರೆಂದರೆ ಸಾಹಿತಿಗಳು. ಬರೆಹಕ್ಕೂ ನಡೆ ನುಡಿಗೂ ಸಂಬಂಧವಿಲ್ಲದಂತೆ ವರ್ತಿಸುವ ಇವರನ್ನು ಕಂಡು ಸಂಕಟವಾಗುತ್ತದೆ.

"ನನ್ನ ಬದುಕು ಎಲ್ಲರ ಬದುಕಿನಂತೆಯೇ ಒಂದು ಪ್ರಯತ್ನ ಮಾತ್ರ. ನನ್ನ ಜನರ ಬುದ್ಧಿಹೀನತೆ, ಅಜ್ಞಾನ ಕಳೆಯುವ ಸಲುವಾಗಿ ಏನು ಸಾಧ್ಯವೋ ಅದನ್ನು ಮಾಡಲು ಪ್ರಯತ್ನಿಸುತ್ತೇನೆ. ನಾನು ಬರೆದುದೆಲ್ಲಾ ನನ್ನ ಜನಕ್ಕಾಗಿ. ಅದು ಇಂಗ್ಲೆಂಡಿನವರು ಓದಿ ಮೆಚ್ಚಬೇಕು ಎಂಬ ಅಭಿಲಾಷೆ ನನಗಿಲ್ಲ.

"ಯಾವುದೇ ವಿಚಾರ ಅಥವಾ ಘಟನೆಗೆ ಮೂಲಭೂತವಾದ ಅಂಶಗಳಿಲ್ಲದಿದ್ದರೆ ಅದನ್ನು ನಾನು ನಂಬುವುದಿಲ್ಲ.

"ಗಾಂಧೀಜಿಗೆ ಮಾನವ ಜೀವನದ ಘಟನೆಗಳ ಅನುಭವವಿಲ್ಲ. ಆದ್ದರಿಂದ ಅವರನ್ನು ನಾನು ಅನುಸರಿಸುವುದಿಲ್ಲ.

"ನನ್ನ ಬಂಧುಗಳ ಇದಿರು ಕುರುಕ್ಷೇತ್ರದ ಅರ್ಜುನನಂತೆ ನಿಂತಿದ್ದೇನೆ. ನನಗೆ ಶ್ರೀಕೃಷ್ಣನ ದೇವತ್ವದಲ್ಲಿ ನಂಬಿಕೆ ಇಲ್ಲ.

"ನನ್ನ ವಿಚಾರವನ್ನು ನೀವು ಒಪ್ಪಿ, ಬಿಡಿ, ಅದು ನನಗೆ ಬೇಕಿಲ್ಲ. ಅದು ನಿಮ್ಮ ಯೋಗ್ಯ ಆಯ್ಕೆಗೆ ಸಂಬಂಧಿಸಿದ್ದು. ನನ್ನ ಪ್ರಭಾವ ನಿಮ್ಮ ಮೇಲೆ ಬೀರಲು ಒತ್ತಾಯಿಸುವುದಿಲ್ಲ."

ಸುಮಾರು ಒಂದೂವರೆ ಗಂಟೆಯ ವರೆಗೆ ಧೀರವಾಣಿ ಅವ್ಯಾಹತವಾಗಿ ಮೊಳಗಿತು. ಯಾರಿಗೂ ಘಂಟೆಯ ಕಡೆಗೆ ಲಕ್ಷ್ಯವಿದ್ದಿಲ್ಲ.

ಸಮಾರಂಭದ ಅಧ್ಯಕ್ಷರಾದ ಡಾ। ಸುನೀತಿ ಕುಮಾರ ಚಟರ್ಜಿಯವರು (ಭಾರತೀಯ ಸಾಹಿತ್ಯ ಅಕಾಡೆಮಿ ಅಧ್ಯಕ್ಷರು) ಮರಳಿ ಮಣ್ಣಿಗೆಯ ಕೃತಿಕಾರ ಕಾರಂತರನ್ನು "ಪೂರ್ಣ ಮಾನವ"ರೆಂದರು. ವಿಶ್ವಕವಿ ರವೀಂದ್ರರ ಸಾಲಿಗೆ ಸೇರುವ ಕಾರಂತರ ಪರಿಚಯ ಹಂತ ಹಂತವಾಗಿ ತಮಗಾದ ಬಗೆಯನ್ನು ವಿವರಿಸಿದರು. ಮರಳಿ ಮಣ್ಣಿಗೆಯ ಘಟನೆಗಳನ್ನು ತಮ್ಮ ಪರಿಸರದಲ್ಲೇ ಕಂಡೆನೆಂದು ತಿಳಿಸಿದರು. "ಕಾರಂತರ ಈ ಕೃತಿ ದಕ್ಷಿಣ ಕನ್ನಡಕ್ಕೆ ಎಷ್ಟು ಪ್ರಾದೇಶಿಕವಾಗುತ್ತದೋ ಅಷ್ಟೇ ಸಮೀಪವರ್ತಿಯಾಗಿ ಬಂಗಾಳಕ್ಕೂ ಅನ್ವಯಿಸುತ್ತದೆ. (Karanth is a Dancer, Actor, Impresario,

Journalist, Printer, Publisher, Lexicographer, Photographer, Painter, Etcher, Carpenter, and even Poultry farmer.)

ಉತ್ಸವ ಸಮಿತಿಯ ಕಾರ್ಯದರ್ಶಿ ಕು. ಶಿ. ಅವರು ಕಾರಂತರ ಅರವತ್ತಕ್ಕೆ ಆಗಬೇಕಾಗಿದ್ದ ಅಭಿನಂದನ ಉತ್ಸವ ತಡವಾಗಿ 68ರಲ್ಲಿ ಆದುದಕ್ಕೆ ಕ್ಷಮೆ ಕೇಳಿದರು. ಸಮಾರಂಭಕ್ಕೆ ಧನಸಹಾಯ ನೀಡಿದ ಮಹನೀಯರನ್ನು ಸ್ಮರಿಸಿದರು. ಮಧ್ಯಾಹ್ನ ಮತ್ತು ರಾತ್ರಿ ಅದ್ಧೂರಿಯ ಔತಣ ಸಾಹಿತಿಗಳನ್ನು ಸಂತೋಷವಾಗಿರಿಸಿತು.

"ಏನು ಸಾರ್ ಊಟ ಹೇಗಿತ್ತು?" – ನಾನು ಕೇಳಿದೆ ಒಬ್ಬ ನವ್ಯ ಸಾಹಿತಿಯನ್ನು. ಅವರೆಂದರು: "ಇಂಥ ಊಟ ಪ್ರತಿದಿನ ಸಿಕ್ಕಿದರೆ ಶ್ರೇಷ್ಠ ಸಾಹಿತ್ಯ ನಿರ್ಮಾಣ ಕಷ್ಟ." ಬಹುಶಃ ಸಾಹಿತಿ ಬಡವನಾಗಿಯೇ ಉಳಿಯಬೇಕೆಂಬ ಅಭಿಪ್ರಾಯ ಇರಬಹುದು. ಉಡುಪಿ ಊಟದ ರುಚಿ ಕಂಡ ಮೈಸೂರಿನವರ ಮಾತನ್ನೂ ಕೇಳಿದೆ:

"ಏನ್ರೀ ತಾಜಾ ಉಡುಪಿ ಊಟ ಅಂದರೆ ಇದೇನೆ. ಬಹಳ ಚೆನ್ನಾಗಿದೆ ಅಲ್ವೇನ್ರಿ". ಮುಂದೆ ಅವರದು ಕು. ಶಿ. ಅವರ ಕಾರ್ಯದಕ್ಷತೆಗೆ ಮೆಚ್ಚುಗೆ.

ಗುರುವಾರ ಬೆಳಿಗ್ಗೆ "ಕನ್ನಡದಲ್ಲಿ ಕಾದಂಬರಿಗಳು" ಕುರಿತು ವಿಚಾರಸಂಕಿರಣ. ಗ್ರಾಮಾಯಣದ ಮೇಲೆ ವಿಮರ್ಶೆ ಓದಿದವರು ಶ್ರೀ ಆಮೂರರು, "ದಾದಾನ ಬಗ್ಗೆ ರಾವ ಬಹದ್ದೂರ್ ಪಕ್ಷಪಾತ ವಹಿಸಿದ್ದಾರೆ", ಎಂದರು.

ಅಧ್ಯಕ್ಷರು ಡಾ। ಎಂ. ಜಿ. ಕೃಷ್ಣಮೂರ್ತಿ. ಉದ್ಘಾಟಕರು ಗ್ರಾಮಾಯಣದ ಕೃತಿಕಾರ ರಾವಬಹದ್ದೂರ್. ವಿಮರ್ಶೆಯನ್ನು ವಿಮರ್ಶಿಸಿದವರು ಶ್ರೀ ಕುರ್ತಕೋಟಿ, ಶ್ರೀ ಸುಮತೀಂದ್ರ ನಾಡಿಗ ಮತ್ತು ಕಾದಂಬರಿಯ ಬಗ್ಗೆ ಸೂಕ್ತ ಆದೇಶವಿತ್ತವರು ಡಾ। ಕಾರಂತರು.

"ಕಾದಂಬರಿ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ. ಅದರ ಬೆಳವಣಿಗೆ ಅದರ ಮಹತ್ತನ್ನು ತೋರಿಸುತ್ತದೆ. ಶೈಲಿ ಸಾಮಾನ್ಯ ಓದುಗನಿಗೆ ಗ್ರಾಹ್ಯವಾಗಿರಬೇಕು. ನೈಜ ಚಿತ್ರಣದಲ್ಲಿ ಓದುಗ ಮೈಮರೆಯಬೇಕು" – ರಾವಬಹದ್ದೂರ್‌ರ ಭಾಷಣದ ಸಾರಾಂಶವಾಗಿತ್ತು. ಕೃಷಿಕನಾಗಿ ಗ್ರಾಮ್ಯ ಜೀವನದ ಎಲ್ಲಾ ಸುಖದುಃಖಗಳನ್ನೂ ಕಂಡುಂಡ ರಾವಬಹದ್ದೂರ್ ತಮ್ಮ ಲೇಖನಿಯಿಂದ ತಾವು ಕಂಡುದನ್ನೇ ಬರೆದರು. ಭಾಷೆ ಅಭಿವೃದ್ಧಿಗೆ ಆಧಾರವಾದಾಗ ಜೀವಂತ ಸಾಹಿತ್ಯ ಉದ್ಭವಿಸಿತು.

ಶ್ರೀ ನಿ. ವ್ಯಾಸರಾಯ ಬಲ್ಲಾಳರ ಕಾದಂಬರಿ 'ಉತ್ತರಾಯಣ'ದ ವಿಮರ್ಶೆ ಗೈಯಬೇಕಾಗಿದ್ದ ಶ್ರೀ ಎಸ್. ಅನಂತನಾರಾಯಣ ಅವರು ಬಂದಿರಲಿಲ್ಲ. ಬದಲು ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಈ ಕಾರ್ಯವನ್ನು ಪೂರ್ತಿಗೊಳಿಸಿದರು. ಪ್ರಬಂಧ ಸಣ್ಣದಾಗಿತ್ತು. "ಉತ್ತರಾಯಣವು ಒಂದು ವ್ಯಗ್ರ ಕಾದಂಬರಿ" ಎಂದ ಅವರು "ಕಾದಂಬರಿಯಲ್ಲಿ ಸತ್ವಯುತ ಗಂಡುಪಾತ್ರಗಳು ಇಲ್ಲ. ಇದ್ದ ಗಂಡು ಪಾತ್ರಗಳು ನಪುಂಸಕ ರೆಂಬುದು ಖಂಡಿತ" ಎಂದು ಟೀಕಿಸಿದರು.

ಶ್ರೀ ರಾಮಚಂದ್ರಮೂರ್ತಿಯವರು ಅದನ್ನು ಒಪ್ಪಲಿಲ್ಲ.

ಕಾರ್ಯಕ್ರಮ ಬೇಗ ಮುಗಿಯಿತು. ಕಾರ್ಯನಿರ್ವಾಹಕ ಶ್ರೀ ಕೆ. ವಿ. ಸುಬ್ಬಣ್ಣ ನವರಿಂದ ಧನ್ಯವಾದ ಸಮರ್ಪಣೆಯೊಂದಿಗೆ.

ಊಟಕ್ಕಿನ್ನೂ ತಡವಿತ್ತು. ಇನ್ನೇನು ಮಾಡುವುದು? ತಿರುಗಾಡಲು ವಿಶಾಲ ಗುಡ್ಡವಿದೆ. ನಮ್ಮರ ಗುಂಪೊಂದು ಸಿಗರೇಟಿನ ಹೊಗೆ ಹಾರಿಸುತ್ತಿದ್ದರೆ ಹಿರಿಯರ ಗುಂಪೊಂದು ನಗೆಯಲ್ಲೇ ತೇಲುತ್ತಿತ್ತು. ಊಟ ರುಚಿಯಿರುವುದರಿಂದ ಗಂಟೆಗಿಂತ ಮೊದಲೇ ಕೆಲವರು ಹಾಜರು; ಅತ್ತಿತ್ತ ಸುತ್ತಮುತ್ತ ಕಂಡುದು ನಗೆಯ ಆಟಾಟೋಪ ಮಾತ್ರ.

ಸಾಹಿತಿಗಳನ್ನು ಆಕರ್ಷಿಸಿದ ಕೇಂದ್ರ ರಾಮಕೃಷ್ಣ ಸ್ಮಾರಕ ಮಂದಿರ. ಶ್ರೀ ಶೇಖರ ಇಡ್ಯ ಮತ್ತು ಶ್ರೀ ಚಂದ್ರರಾಜ ಸೆಟ್ಟರ ಪ್ರಯತ್ನದ ಫಲವಾಗಿ ಕೈಗೂಡಿದ ಕಾರಂತ ಸಾಹಿತ್ಯಪ್ರದರ್ಶನ ಮತ್ತು ಕನ್ನಡದ ಪತ್ರಿಕೆಗಳ ಪ್ರದರ್ಶನ. ಕಾರಂತರ ಜೀವನದ ಕೆಲವು ಚಿತ್ರಗಳೂ ಇದ್ದವು. 'ಕನ್ನಡ ಬರಹಗಾರರ ಬಳಗ" ಶ್ರೀ ಸೆಟ್ಟರ ಒಂದು ಶ್ರದ್ಧೆಯ ಸಂಗ್ರಹ.

ಎಲ್ಲ ಕನ್ನಡ ಬರಹಗಾರರ ಪರಿಚಯ, ಭಾವಚಿತ್ರ, ಹುಟ್ಟಿದ ತಾರೀಕು ಮತ್ತು ಹಸ್ತಾಕ್ಷರ ಸಂಗ್ರಹ. ಅವರಿಗಿದ್ದ ಆಸಕ್ತಿ ಅದಕ್ಕೆ ಕಾರಣ. ಅದು ಅವರ ಇಪ್ಪತ್ತೈದು ವರ್ಷಗಳ ಸತತ ಪ್ರಯತ್ನದ ಫಲ.

ಕಾರಂತರ ಸಾಹಿತ್ಯ ಪರಿಚಯ ಮಾಡಿಸುವ ಕಾರ್ಯರಂಗಕ್ಕಿಳಿದ ಶ್ರೀ ಶೇಖರ ಇಡ್ಯರ ಪ್ರಯತ್ನ ಪ್ರಶಂಸನೀಯ. ಎಲ್ಲ ಸಂದರ್ಶಕರಿಗೂ ಸಕಾಲಿಕ ವಿವರಣೆಯಿತ್ತವರೂ ಅವರೇ. ಸಾಹಿತ್ಯ ಕೃತಿಗಳ ಮಾರಾಟವೂ ಕಾರ್ಯಕ್ರಮದ ಯಶಸ್ವೀ ಪ್ರಯೋಗವಾಗಿತ್ತು.

ಮತ್ತೆ ಮಧ್ಯಾಹ್ನ ಮೂರಕ್ಕೆ ಸಮಾರಂಭದ ಆರಂಭ ರವೀಂದ್ರ ಮಂಟಪದಲ್ಲಿ. ಕಾರಂತರ ಹಿರಿತನದಲ್ಲಿ ಪತ್ರಿಕೋದ್ಯಮದ ಕುರಿತು ವಿಚಾರವಿನಿಮಯ. ಸುಲಭವಾಗಿ ಕೈಸುಟ್ಟುಕೊಳ್ಳಬಹುದಾದ ಈ ವೃತ್ತಿಯ ಮೇಲೆ ಕ್ಷ-ಕಿರಣ.

"ನಮ್ಮ ಪತ್ರಿಕೆಗಳು ಮತ್ತು ರಾಷ್ಟ್ರೀಯ ಧರ್ಮ" – ಹ. ವೆಂ. ನಾಗರಾಜ ರಾವ್ ವಿಶ್ಲೇಷಿಸಿದರು. "ಕನ್ನಡ ಪತ್ರಿಕೆಗಳು ಮತ್ತು ಬದಲಾಗುತ್ತಿರುವ ಮೌಲ್ಯಗಳ ಕುರಿತು" ಶ್ರೀ ಸೇವ ನಮಿರಾಜಮಲ್ಲರ ವಿವರಣೆ; ಪತ್ರಿಕೋದ್ಯಮದ ವಿವಿಧ ಮುಖಗಳನ್ನು ಕುರಿತು ಚರ್ಚಿಸಿದರು. ಮುಂದೆ ಬಂದುದು ಕಾರಂತರ ಅಭಿಪ್ರಾಯ. "ಪತ್ರಿಕೋದ್ಯಮ ಸುಲಭ ಕಾರ್ಯವಲ್ಲ. ಬಂಡವಾಳ ಬೇಕು. ಪತ್ರಿಕೆಗಳು ರಾಜಕೀಯವೊಂದಕ್ಕೇ ಪ್ರಾಶಸ್ತ್ಯ ನೀಡುವುದು ಸರಿಯಲ್ಲ. ಜೀವನದ ಎಲ್ಲಾ ದಿಶೆಯಲ್ಲಿ ಅನುಭವವನ್ನು ಪತ್ರಿಕೆ ಒದಗಿಸಬೇಕು. ಎಲ್ಲ ತೆರನ ಆಸಕ್ತಿಗಳಿಗೂ ಆಹಾರವಿಡಬೇಕು.

"ದೇಶಿಯ ಸುದ್ದಿಗಳಂತೆ ಪರದೇಶೀಯ ಸುದ್ದಿಗಳಿಗೂ ಪ್ರಾಮುಖ್ಯತೆ ಇರಬೇಕು.

"ಪ್ರತಿ ಪತ್ರಿಕೆ ತನ್ನದೇ ಆದ ವರದಿಗಾರರಿಂದ ಸುದ್ದಿ ಸಂಗ್ರಹಿಸಬೇಕು.

"ಭಾಷೆ ಸಾಮಾನ್ಯವಾಗಿ ಎಲ್ಲಾ ಪ್ರದೇಶದ ಜನರಿಗೆ ಅರ್ಥವಾಗುವಂತಿರಬೇಕು. ಪತ್ರಿಕೆಗಳು ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸುವುದರಲ್ಲಿ ಹಿಂಜರಿಯಬಾರದು. ಯಾವುದೇ ಪಕ್ಷ ಅಥವಾ ಜನಾಂಗದ ಪ್ರಭಾವಕ್ಕೊಳಗಾಗಿ ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳಬಾರದು. ಪ್ರತಿ ವಿಭಾಗದಲ್ಲಿ ಅಭಿರುಚಿ ಇರುವವರಿಗೆ ಸಾಕಷ್ಟು ವಿಷಯ ನೀಡುತ್ತಿರಬೇಕು."

ಕಾರಂತರು ಪತ್ರಿಕೋದ್ಯಮದ ಹಲವು ಕುಂದುಕೊರತೆಗಳನ್ನು ಎತ್ತಿ ತೋರಿಸಿದರು. ತಮ್ಮ ಅನುಭವವನ್ನು ಬೆರೆಸಿ ನುಡಿದರು.

"ಪ್ರಧಾನ ಸಂಪಾದಕರೇ ಬೇರೆ. ಪತ್ರಿಕಾ ಸಂಪಾದಕರೇ ಬೇರೆ. ಇದು ಸಲ್ಲದು" ಎಂಬ ನುಡಿಗೆ ಅವರ ನಗೆಯ ಉತ್ತರ:

"ಜೈಲಿಗೆ ಯಾರು ಹೋಗುವುದು ಒಳ್ಳೆಯದು?"

ಸಮಾರೋಪ ಸಮಾರಂಭದಲ್ಲಿ ಕೃತಜ್ಞತೆ ಅರ್ಪಿಸಿದವರು ಶ್ರೀ ಎ. ಜೆ. ಅಲ್ಸೆಯವರು. ಪ್ರಕಾಶ ಪತ್ರಿಕೆಯ ಸಂಪಾದಕರಿಂದಲೇ ಸ್ವಾಗತಭಾಷಣವೂ ನೆರವೇರಿತ್ತು.

"ಮುದ್ದಣ ಮಂಟಪಕ್ಕೆ ಬಿಜಯಂಗೈಸಬೇಕಾಗಿ ಕೋರುತ್ತೇನೆ" ಕಾರಂತರ ಹಾಸ್ಯ ನುಡಿಯೊಂದಿಗೆ ಉಪಾಹಾರಕ್ಕಾಗಿ ಎಲ್ಲರ ನಿರ್ಗಮನ.

ಉಪಾಹಾರ ಮುಗಿಸಿ ಸಾಹಿತಿಗಳಲ್ಲಿ ಹಲವರು ಹೊರಟರು. ಊರು ಮನೆ ಬಿಟ್ಟು ಎರಡು ಚಿರಸ್ಮರಣೀಯ ದಿನಗಳನ್ನು ಇಲ್ಲಿ ಕಳೆದು ಮತ್ತೆ ನಿರ್ಗಮಿಸಿದರು. 'ಇನ್ನೂ ಒಂದು ದಿನ ಇರಬಹುದಿತ್ತು ಎಂಬ ಆಸೆ'. ಈ ಉತ್ಸವಕ್ಕೆ ಸಾಹಿತಿಗಳು ಬರುತ್ತೇವೆ ಎಂದವರೆಲ್ಲಾ ಬಂದಿದ್ದರು. ಬರುವುದಿಲ್ಲ ಎಂದವರೂ ಬಂದಿದ್ದರು. (ಕು. ಶಿ.) ಆಸೆಗೆ ಕಾರಣ: ಮಾನಸಿಕ, ದೈಹಿಕ ತೃಷೆಗೆ ಇಲ್ಲಿ ಸಿಕ್ಕಿದ್ದು ಅಚ್ಚುಕಟ್ಟಿನ ಅದ್ದೂರಿಯ ಔತಣ.

ನಾನು ಕೆಲವರನ್ನು ನಿಲ್ಲಿಸಿ ಕೇಳಿದ ಪ್ರಶ್ನೆ:

"ಊಟೋಪಚಾರ ವಸತಿಸೌಕರ್ಯ ಹೇಗಿತ್ತು?"

"ಬಹಳ ಚೆನ್ನಾಗಿತ್ತು. ಲೋಪದ ಮಾತಿಲ್ಲ" – ಆ ಉತ್ತರವನ್ನು ಮೊದಲೇ ನಿರೀಕ್ಷಿಸಿದ್ದ ನನಗೆ ಆನಂದತುಂದಿಲರಾದ ಸಾಹಿತಿಗಳು ಪದೇಪದೇ ನುಡಿದರು.

ಮತ್ತೊಬ್ಬರನ್ನು ಸಮೀಪಿಸಿದೆ. "ಈ ಸಮಾರಂಭದ ಬಗ್ಗೆ ನಿಮಗೆ ಏನು ಅನ್ನಿಸಿತು?"

"ಅಂದರೆ?"

"ಸಾಹಿತ್ಯ ಸಭೆಯ ಬಗ್ಗೆ".

"ಇಡೀ ಉತ್ಸವದಲ್ಲಿ ಮನದಲ್ಲಿ ಅಚ್ಚೊತ್ತಿ ನಿಂತ ಮೂರ್ತಿ ಅಂದರೆ ಕಾರಂತರು. ಅವರ ಭಾಷಣ ಅಮೋಘವಾಗಿತ್ತು"
ಹೀಗೆಂದವರು ಸಾಹಿತ್ಯ ವಿಚಾರ ವಿಮರ್ಶಕ ಶ್ರೀ ಕುರ್ತಕೋಟಿ.

ಮೊದಲ ದಿನ ರಾತ್ರಿ 'ಕಾರಂತ ಮೇಳ'ದವರು ಅಭಿನಯಿಸಿದ 'ಕೃಷ್ಣಾರ್ಜುನರ ಕಾಳಗ' ಯಕ್ಷಗಾನ ನೃತ್ಯ (ಅಪೇರಾ) ಎಲ್ಲರನ್ನೂ ಆಕರ್ಷಿಸಿತ್ತು. ನಿರ್ದೇಶಿಸಿದವರು ಸ್ವತಃ ಡಾ। ಕಾರಂತರು.

ಗುರುವಾರ ರಾತ್ರಿ ಶ್ರೀ ಗಣೇಶ ನೃತ್ಯ ಸಂಘದವರಿಂದ 'ಲವಕುಶ' ಗೀತಾ ನಾಟಕ ಪ್ರದರ್ಶನವಾಯಿತು. ಉದ್ವಿಗ್ನರಾದ ಕಾರಂತರು ವೇದಿಕೆಯ ಮೇಲೆ ಬಂದು – "ಇದು ಶಿವರಾಮ ಕಾರಂತನ ಕಲೆ ಅಲ್ಲ, ಕೊಲೆ" ಎಂದರು. ಪೆರ್ಡೂರು ನಾಟ್ಯಕ ಸಂಘದವರಿಂದ ಕಾರಂತರ ನಾಟಕ. ಕಠಾರಿ ಭೈರವನ ಪಾತ್ರ ಮನದಲ್ಲಿ ಅಚ್ಚಳಿಯದೆ ನಿಲ್ಲಬಲ್ಲುದು. ಇತರ ಪಾತ್ರಧಾರಿಗಳೂ ನಾಟಕದ ಯಶಸ್ಸಿಗೆ ಕಾರಣರಾದರು.

ಮುಕ್ತಾಯವಾಗುವ ಮುನ್ನ ಕಾರಂತರಿಗೆ ತಾಲೂಕು ಬೋರ್ಡು ಅಧ್ಯಕ್ಷ ಹಾಗೂ ಅಭಿನಂದನ ಸಮಿತಿಯ ಸದಸ್ಯರಾದ ಶ್ರೀ ಮಧ್ವರಾಜರಿಂದ ಹಾರಾರ್ಪಣೆ, ನಮಸ್ಕಾರ. ಶ್ರೀ ಶ್ರೀಪತಿ ಆಚಾರ್ಯರಿಂದ ಧನ್ಯವಾದ ಬಿತ್ತರ; ಉತ್ತರ ರೂಪದಲ್ಲಿ ಕಾರಂತರ ಮೆಚ್ಚುಗೆ, ಉತ್ಸವದ ವ್ಯವಸ್ಥೆಯಲ್ಲಿ ಭಾಗಿಗಳಾದ ತರುಣರ ಉತ್ಸಾಹಕ್ಕೆ, ಕಾರ್ಯ ದಕ್ಷತೆಗೆ: ಪ್ರಿನ್ಸಿಪಾಲ ಕು.ಶಿ.ಯವರ ಅಚ್ಚುಕಟ್ಟಿನ ಶ್ಲಾಘನೆ.

ಅಂತೂ ಕನ್ನಡಿಗರ ಇತಿಹಾಸದಲ್ಲಿ, ಮಹಾತ್ಮಾ ಗಾಂಧಿ ಸ್ಮಾರಕ ಕಾಲೇಜಿನ ಗತ ವೈಭವದಲ್ಲಿ, ಇದು ಮಹತ್ವದ ಯಶಸ್ವೀ ಸಮಾರಂಭ. ಬಹುಮುಖ ಪ್ರತಿಭೆಯ ಡಾ। ಶಿವರಾಮ ಕಾರಂತರ ಅಭಿನಂದನ ಉತ್ಸವದ ಚಿರಸ್ಮರಣೀಯ ರಸಚಿಲುಮೆಗೆ ಕಾರಣ ರಾದ ಎಲ್ಲಾ ಮಹನೀಯರಿಗೂ, ವಿದ್ಯಾರ್ಥಿಗಳ ಹೆಮ್ಮೆಯ ನೆನಪು!

# ಜೀತದ ಬಾಳ್ವೆ

ಸಾಮಯಿಕ ಪ್ರಬಂಧ

ನಿ. ಶ್ರೀಶ ಬಲ್ಲಾಳ

ಹೊಸತನದ ವಿನೋದಕ್ಕಾಗಿ ಹಿರಿತನವನ್ನು ಕಳೆದುಕೊಳ್ಳುವ ಮಂದಿ ಇದ್ದಾರೆ. ಹಿರಿತನದ ಗೌರವಕ್ಕಾಗಿ ಹೊಸತನದಿಂದ ಹಿಂದೆ ಸರಿಯುವವರೂ ಕೆಲವರು. "ಈ ಜಗತ್ತಿ"ನ ದೈವವನ್ನೇ ಗಟ್ಟಿಯಾಗಿ ಪ್ರೀತಿಸಿ ಆ ಪ್ರೀತಿಯ ತಳಹದಿಯಲ್ಲಿ ಮೂಡುವ "ಬಾಳ್ವೆಯನ್ನೇ ಬೆಳಕೆ"ಂದು ಸಾರಿದ ಶಿವರಾಮ ಕಾರಂತರು ಕನ್ನಡನಾಡಿನ ಹೊಸಬರಿಗೂ ಹಳಬರಿಗೂ ನಡುವೆ ಸೇತುವೆ ಕಟ್ಟುತ್ತಿರುವ ವಾಸ್ತು ಶಿಲ್ಪಿಗಳು.

ನೂರಾರು ಊರುಗಳನ್ನು ತಿರುಗಿ ವಿಭಿನ್ನ ರುಚಿಯ ಸಾವಿರಾರು ಸಹೃದಯ ರೊಡನೆ ಸಂಬಂಧ ಬೆಳೆಸಿಕೊಂಡ ಕಾರಂತರು ನಾಡಿನ ಜೀವನದ ಗಂಭೀರತೆಯನ್ನೂ ವಿಸ್ತಾರವನ್ನೂ ಅರ್ಥ ಮಾಡಿಕೊಳ್ಳುವವರಿಗೆ ಹತ್ತು ಮುಖಗಳಿದ್ದರೂ ಸಾಲದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಇದೀಗ ಕಾರಂತರು ವರ್ಷ ಎಪ್ಪತ್ತರ ಸನಿಹಕ್ಕೆ ಬರುತ್ತಿದ್ದಾರೆ. ವಿವಿಧ ರುಚಿಗಳ ಆವಿಷ್ಕಾರಕ್ಕಾಗಿ ವಿವಿಧ ಪಂಥ ನಿರ್ಮಾಣ ಪಣತೊಟ್ಟು, ಪಥಚಲನದ ಜಯಘೋಷ ದಲ್ಲೇ ಮೈಮರೆಯುತ್ತಿರುವ ಕನ್ನಡ ಸಾರಸ್ವತಲೋಕದ ಚಿರಂಜೀವಿಗಳಿಗೆ ಕಾರಂತರು ಆಯುರಾರೋಗ್ಯದ ಪಾಠಗಳನ್ನು ಕಲಿಸುತ್ತಿದ್ದಾರೆ. ಅವರು ಸ್ವಂತ ದುಡಿಮೆಯಿಂದ ಕಲಿತು ಕಲಿಸುವ ಪಾಠಗಳಿಗೆ ಕಿವಿಗೊಡದವರು ಯಾರು? ಕಲಾವಿದನಾಗಿದ್ದುಕೊಂಡೇ ಬಹುಕಾಲ ಆರೋಗ್ಯದಿಂದ ಬಾಳಬಹುದು; ಇತರರನ್ನೂ ಬದುಕಿಸಬಹುದು. ಇಂಥ ಬಾಳಿಗೆ ಕಾರಂತರು ದೃಷ್ಟಾಂತ. ಈ ಬಾಳಿನ ಸಾಧನೆಗೆ ಬೆರಗಾಗದವರು ಯಾರು?

ಸಾಹಿತ್ಯವು ಜೀವನದ ಪ್ರತಿಬಿಂಬ ಎಂಬ ಪಠ್ಯ ಪುಸ್ತಕಗಳ ಪಾಠಹೇಳುವ ಮಂದಿ ಬಹಳ. ಅಂಥ ಸಾಹಿತ್ಯದ ಬೆನ್ನು ಹತ್ತಿ ಹೋಗುವವರು ವಿರಳ. ಹುಟ್ಟಿನಲ್ಲೇ ದಕ್ಷಿಣಕನ್ನಡದ ಜೀವಂತ ಜಾನಪದ ಸಂಸ್ಕಾರಗಳನ್ನು ಹೊತ್ತು ಬಂದ ಕಾರಂತರು ಜನಜೀವನಕ್ಕೂ ಸಾಹಿತ್ಯಕ್ಕೂ ನಡುವೆ ನಿಷ್ಠುರವಾದ ಎಡೆತಡೆಗಳನ್ನು ನಿರ್ಮಿಸಿರುವ ಕೃತ್ರಿಮ ಶಿಕ್ಷಣ ಪದ್ಧತಿಯನ್ನೂ, ಸಮಾಜದಲ್ಲಿ ಸಭ್ಯರೆನಿಸಿಕೊಳ್ಳುವವರ ಮಿಥ್ಯಾಚಾರ ಗಳನ್ನೂ ಪ್ರತಿಭಟಿಸಿದರು. ಕಾರಂತರ ಸಾಹಿತ್ಯ ಕೃಷಿಗೆ ನಾಡೆಲ್ಲ ಹೊಲವಾಯಿತು. ಹೊಸ ವಿಷಯ, ಹೊಸ ರೀತಿ, ಹೊಸ ವಿಚಾರಗಳ ಪ್ರಯೋಗಗಳಿಂದಲೇ ಅವರ ಶಬ್ದಸೃಷ್ಟಿ ಪುಟಗೊಂಡಿತು.

ಕಾರಂತರ ಕಾದಂಬರಿ ಅವರ ಸಹೃದಯ ಜೀವನದ ಪರಿಪಾಕ, ಪರಿಣಾಮಗಳ ಬಹಿರಂಗ ಸಂಕೇತ, ಆ ಕಾದಂಬರಿಗಳಿಗೆ ಪೂರ್ವಭಾವಿಯಾಗಿ ಅವರು ನಡೆಸುತ್ತಿದ್ದ ವಿವಿಧ ರೀತಿಯ ವೈಯಕ್ತಿಕ-ಸಾಹಿತ್ಯಿಕ ಪ್ರಯೋಗಗಳು ಎಂಥವರನ್ನೂ ದಂಗುಬಡಿಸುತ್ತವೆ. ಈ ಪ್ರಾಯೋಗಿಕ ಜೀವನವೇ ಅವರ ಕಲಾಸೃಷ್ಟಿಗೆ ವಿಭಾಗವಾಗಿ ಪರಿಣಮಿಸಿತು. ಎಂಥ ಸುಶಿಕ್ಷಿತರನ್ನೂ ಎಂಥ ಹಿರಿಯ ಕಲಾವಿದರನ್ನೂ ಬೆರಗುಗೊಳಿಸುವಂತೆ ಸಾಹಿತ್ಯ ರಚನೆ ಮಾಡಿದ ಕಾರಂತರು ಕನ್ನಡ ಜಾನಪದದ ಮೂಲಸತ್ವಕ್ಕೆ ದ್ಯೋತಕರಾಗಿ ನಿಂತಿದ್ದಾರೆ.

ಪ್ರಚಾರದ ಗೊಡವೆಯೇ ಇಲ್ಲದವರಂತೆ ಕಾರಂತರು ಕೃತಿನಿಷ್ಠರಾದರು. ಒಮ್ಮೆ ಓದಿದುದನ್ನಾಗಲೀ ಬರೆದುದನ್ನಾಗಲೀ ಪುನಃ ಹಿಂತಿರುಗಿ ನೋಡದಷ್ಟು ವೇಗದ ಸೃಜನ ಕುತೂಹಲ ಇವರದು. ಆದ್ದರಿಂದಲೇ ಕಾರಂತರ ಸಾಹಿತ್ಯವನ್ನಾಗಲೀ ವ್ಯಕ್ತಿತ್ವವನ್ನಾಗಲೀ ಒತ್ತಟ್ಟಿಗೆ ಕಂಡು ಕಾಣಿಸುವ ಕೆಲಸ ಇನ್ನಷ್ಟು ನಡೆಯಬೇಕಾಗಿದೆ.

ಕಾರಂತರ ಕಲಾಸೃಷ್ಟಿಯ ಮೂಲಕವೇ ಅವರನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಅವರ ಪ್ರೀತಿ, ಮೈತ್ರಿ, ವಾತ್ಸಲ್ಯ ಹಾಗೂ ಆತಿಥ್ಯಗಳನ್ನು ನೋಡಿ, ಕೇಳಿ, ಅನುಭವಿಸಿದವರಿಗೆ ಅವರ ನಡೆ-ನುಡಿ ವಿಚಾರಗಳ ರಸಸ್ಪರ್ಶವಾಗುತ್ತದೆ. ಈ ರೀತಿ ಅವರೊಡನೆ ಬೆರೆತು ಬಾಳಿದ ಸ್ನೇಹಿತರ ಬಾಯಿಂದ ಬರುವ ಉದ್ಗಾರಗಳಿಂದಲೇ ಕಾರಂತರನ್ನು ಅರಿಯಬೇಕಾಗುತ್ತದೆ.

ಕಾರಂತರು ಕೇವಲ ಸಾಹಿತ್ಯ ರಸಿಕರಲ್ಲ. ಕಲೆ-ಸಾಹಿತ್ಯಗಳ ಮೂಲಕ ಪಾಕಗೊಳ್ಳುವ ಭಾವಜೀವನದ ಪೋಷಣೆಗೆ ಬೌದ್ಧಿಕ ಶಿಕ್ಷಣದ ಅವಶ್ಯಕತೆ ಎಷ್ಟೆಂಬುದನ್ನು ಅವರು ಮನಗಂಡಿದ್ದಾರೆ. ಬುದ್ಧಿ-ಭಾವಗಳ ದ್ವಂದ್ವವೇ ಸ್ಥಾಯಿಯೆಂದು ನಂಬಿ ಮಾನವ ವಿಕಾಸದಲ್ಲಿ ಕ್ರಮ ಪ್ರಾಪ್ತವಾದ ಸುಧಾರಣೆಗಳಿಗೆ ಶುಷ್ಕ ವಿರೋಧವನ್ನೊಡ್ಡುವವರ ವಿಚಾರಗಳನ್ನೂ ಆಚಾರಗಳನ್ನೂ ಕಾರಂತರು ಬಲವಾಗಿ ಖಂಡಿಸುತ್ತಾರೆ. ಈ ನಿಟ್ಟಿನಲ್ಲಿ ಚರ್ಚೆಗೆ ಬರುವ ವಿಷಯ ಎಷ್ಟು ದೊಡ್ಡ ಹೆಸರನ್ನೇ ಹೊತ್ತು ಬರಲಿ ಕಾರಂತರ ಕೊಡಲಿಯ ಏಟಿನಿಂದ ಅದು ತಪ್ಪಿಸಿ ಉಳಿಯಲಾರದು.

ಬ್ರಹ್ಮಚರ್ಯದ ವಿಷಯದಲ್ಲಿ ಅವ್ಯಾವಹಾರಿಕ ಉಪದೇಶಗಳನ್ನು ಕೊಡುತ್ತಿದ್ದ ಮಹಾತ್ಮಾ ಗಾಂಧಿಯವರಿಗೂ ಪ್ರಶ್ನೆಗಳನ್ನು ಕೇಳಿ ಕಾರಂತರು ಅವರೊಡನೆ ದೀರ್ಘಕಾಲ ಈ ಕುರಿತು ಪತ್ರವ್ಯವಹಾರ ನಡೆಸಿದರಂತೆ.

ಜಿಜ್ಞಾಸೆಗೆ ತೊಡಗಿದಾಗ ಕಾರಂತರು ಎಂಥ ನಂಬಿಕೆಗಳನ್ನೂ ಪ್ರಶ್ನಿಸಲು ಹಿಂಜರಿಯುವುದಿಲ್ಲ. ತೋರಿಕೆಗೆ ಅವರು ಅಶಿಕ್ಷಿತರಂತೆ ನಟಿಸಿದರೂ, ಅವರ ಪ್ರಶ್ನೆಗಳ ಮೂಲದಲ್ಲಿ ಪ್ರಾಮಾಣಿಕ ಜಿಜ್ಞಾಸೆಯ ಆರ್ದ್ರತೆ ಇರುತ್ತದೆ. ಅವರ ಪ್ರಶ್ನೆಗಳಿಗೆ ಪೂರ್ವಭಾವಿಯಾಗಿ ಅವರು ಸಾಕಷ್ಟು ಓದಿರುತ್ತಾರೆ, ಕೇಳಿರುತ್ತಾರೆ. ಅರ್ಥಮಾಡಿಕೊಂಡಿರುತ್ತಾರೆ, ನಂಬಿರುತ್ತಾರೆ.

ಉಡುಪಿಯ ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜಿನಲ್ಲಿ ನೆರೆದಿದ್ದ ಒಂದು ಅಪ್ಪಟ ತತ್ವಜ್ಞಾನಕ್ಕೆ ಸಂಬಂಧಿಸಿದ್ದ ಸಭೆಯಲ್ಲಿ ಕಾರಂತರು ಧೈರ್ಯವಾಗಿ ಈ ರೀತಿ ನುಡಿದರು:

"ನಮ್ಮ ತಾತ್ವಿಕ ದರ್ಶನಗಳಲ್ಲಿ ಎರಡು ರೀತಿಯವು ಇವೆ. ಕೆಲವು ಜೀವನದಲ್ಲಿ ವಿರಕ್ತಿಯನ್ನೇ ಎತ್ತಿ ಹಿಡಿಯುವವು; ಇನ್ನು ಕೆಲವು 'ಅನುರಕ್ತಿಯನ್ನು' ಬೋಧಿಸುವವು. ಈ ಅನುರಕ್ತಿ ಮಾರ್ಗಗಳ ಕುರಿತು ನಾವು ಸಾಕಷ್ಟು ಸಂಶೋಧನೆ ನಡೆಸಿಲ್ಲ ಎಂದು ನನಗೆ ಕಾಣುತ್ತದೆ." ಸರಿಯೋ, ತಪ್ಪೋ ಇಷ್ಟು ಧೈರ್ಯದಿಂದ ಮೌಲಿಕ ಪ್ರಶ್ನೆ ಕೇಳುವವರು ಸಾಹಿತಿಗಳಲ್ಲಿ ಬಹಳ ಮಂದಿ ಇಲ್ಲ.

ವ್ಯಕ್ತಿಪೂಜೆ ಮತ್ತು ಮತಪಂಥಗಳ ರಾಜಕಾರಣಕ್ಕೆ ಮಾರುಹೋಗಿರುವ ಪ್ರಚಲಿತ ಭಾರತೀಯ ಮನೋಧರ್ಮವು ಸ್ವಂತ ಬುದ್ಧಿಯ ಕೆಲಸವನ್ನೇ ಮರೆತಿದೆ, ಎಂದು ಕಾರಂತರು ಹಲವು ಸಭೆಗಳಲ್ಲಿ ಗರ್ಜಿಸಿ ನುಡಿದಿದ್ದಾರೆ. ಇಂಗ್ಲಿಷ್ ಭಾಷೆಯಲ್ಲಿರುವಂಥ ಜ್ಞಾನವನ್ನು ಹೀಯಾಳಿಸುವಂಥ ಕನ್ನಡಿಗರ ಭಾಷಾಭಿಮಾನವನ್ನೂ ಅವರು ಒಪ್ಪು ವುದಿಲ್ಲ.

ಆದರೆ ಕಾರಂತರು ಹುರುಳಿಲ್ಲದೆ ಹೋರಾಡುವವರಲ್ಲ.

ಕಾರಂತರ ಗುಡುಗಾಟ ಮೇಲ್ನೋಟಕ್ಕೆ ಪ್ರಳಯ ಮಾರುತದ ಗರ್ಜನೆಯಂತೆ ಕಂಡರೂ, ಅದು ಯಾವುದೋ ಮುಂಗಾರಿನ ಮುನ್‌ಸೂಚನೆಯಾಗಿ ಬರುತ್ತದೆ. ಪ್ರತಿಭಟನೆ ಅವರ ಸೃಜನಶೀಲ ಪ್ರಸಕ್ತಿಗಳಿಗೆ ಮುನ್ನುಡಿ ಇದ್ದಂತೆ. ಇದಕ್ಕೆ ಸಾಕ್ಷಿ: ಕಳೆದ ಎರಡು ದಶಕಗಳಲ್ಲಿ ಕಾರಂತರ ಮೂಲಕ ಬೆಳಕು ಕಂಡ ಯಕ್ಷಗಾನ ಬಯಲಾಟದ ನೂತನ ಪ್ರಯೋಗಗಳು ಹಾಗೂ ಕನ್ನಡ ವಿಜ್ಞಾನಕೋಶದ ಹೊತ್ತಗೆಗಳು. ಜೀವನ ದುದ್ದಕ್ಕೂ ಕಾರಂತರು ನಡೆಸಿರುವ ಬೌದ್ಧಿಕ ವ್ಯವಸಾಯದ ಪಕ್ವಫಲವಾದ ಅವರ ವೈಚಾರಿಕ ಸಾಹಿತ್ಯ ಈ ದಶಕದಲ್ಲಿ ಪ್ರಕಟವಾಗುತ್ತಿದೆ.

ಕಾರಂತರ ವೈಚಾರಿಕ ಸಾಹಿತ್ಯದ ಪ್ರಯೋಜನ ಪಡೆಯಬೇಕಾದವರು ಕನ್ನಡದ ಮುಂದಿನ ಪೀಳಿಗೆಯವರು, ಇಂದಿನ ಎಳೆಯರ ಬಳಗದವರು. ಕನ್ನಡ ಶಿಕ್ಷಣ ರಂಗದಲ್ಲಿ ನಡೆಯಬೇಕಾದ ಹಲವಾರು ಸುಧಾರಣೆಗಳಿಗೆ ಕಾರಂತರು ನಾಂದೀಮುಖವನ್ನು ತೋರಿಸಿ ಪುಣ್ಯಾಹವಾಚನವನ್ನೂ ಮಾಡಿದ್ದಾರೆ. ಇಂಥ ವೀರ್ಯವಂತ ಪುರೋಹಿತರ ಮಾರ್ಗದರ್ಶನವನ್ನು ಪಡೆದ ಕನ್ನಡ ನಾಡಿನ ಶಿಕ್ಷಕರು ಅವರಿಗೆ ಚಿರಋಣಿಗಳು. ಕಾರಂತರ ಗ್ರಂಥಸಾಹಸ ತಾಯಿನುಡಿಯ ಜೀತ ಮಾಡುವವರಿಗೆ ಅಭಯ ಸಾರುತ್ತಿದೆ.

ಜೀವನದ ಯಾವ ಸಮಸ್ಯೆಯೇ ಇರಲಿ, ಅದನ್ನು ಸ್ವಂತ ದುಡಿಮೆಯಿಂದ ಇದಿರಿಸಿ ಬಂದ ಅನುಭವಗಳನ್ನು ಸ್ವಬುದ್ಧಿಯ ನಿಕಷದಲ್ಲಿ ಪರೀಕ್ಷಿಸಿ ತೀರ್ಮಾನಕ್ಕೆ ಬರುವುದು ಕಾರಂತರ ಪದ್ಧತಿ. ತೀರ್ಮಾನವಾಗದಿದ್ದರೂ ಅವರು ಚಿಂತೆಪಡುವುದಿಲ್ಲ. ಈ ರೀತಿಯಲ್ಲಿ ಸಾಗುವ ಬುದ್ಧಿಯ ಸಾವಧಾನಗತಿಯನ್ನೂ ಭಾವದ ಸೋಲು-ಗೆಲುವುಗಳನ್ನೂ ಕಾರಂತರು ಯಥೇಚ್ಛವಾಗಿ ಸಹಿಸಬಲ್ಲರು. ಆದರೆ ಸ್ವಪ್ರಯತ್ನದ ಹೊಣೆಯಿಂದ ಮೈತಪ್ಪಿಸಿಕೊಳ್ಳುವ ಜಿಜ್ಞಾಸುಗಳ ಮೈಗಳ್ಳತನದೊಡನೆ ಕಾರಂತರು ಯುದ್ಧ ಹೂಡುತ್ತಾರೆ. ಇದು ಸತ್ವಸಮಾವಿಷ್ಟನಾಗಿ ತ್ಯಾಗಬುದ್ಧಿಯನ್ನು ಮೈಗೂಡಿಸಿ ಕೊಳ್ಳಬೇಕೆನ್ನುವ ಕರ್ಮಯೋಗಿಯ ಕುರುಹು. ಕಾರಂತರು ಕನ್ನಡ ಸಾರಸ್ವತ ಪ್ರಪಂಚದ ಊಳಿಗದಿಂದಲೆ ತೃಪ್ತಿಪಡೆಯಬಲ್ಲ ಕರ್ಮಯೋಗಿಗಳು. ಕರ್ಮಯೋಗಿಯ ಎಲ್ಲ ಕರ್ಮಗಳಂತೆ ಸಾಹಿತ್ಯಕರ್ಮವೂ ಶುಭಾಶುಭ ಫಲಗಳ ಬಂಧನದಿಂದ ಮುಕ್ತವಾಗಲು

ಹವಣಿಸಬೇಕು. ಈ ತ್ಯಾಗದೀಕ್ಷೆ ಇಲ್ಲದ ಸಾಹಿತ್ಯಕರ್ಮದ ಕ್ಲೇಶಗಳನ್ನು ಕಾರಂತರು ಬಗೆ ಬಗೆಯಾಗಿ ವರ್ಣಿಸುತ್ತಾರೆ. ಸಾಹಿತ್ಯವನ್ನು ಒಂದು ಪ್ರಾರಬ್ಧದಂತೆ ಹಚ್ಚಿಕೊಂಡು ತೊಳಲಾಡುವ ಸಾಹಿತಿಗಳನ್ನು ಕಂಡಾಗ ಅವರು "ಸಾಯಿತಿ" ಎಂದು ಕೆಣಕಿ ಮಾತನಾಡುತ್ತಾರೆ.

ಜೀವನದ ಸಿದ್ಧಿಯ ಬಗೆಗೆ ಸ್ನೇಹಿತರೊಬ್ಬರು ಇತ್ತೀಚೆಗೆ ಕೇಳಿದ ಪ್ರಶ್ನೆಯೊಂದಕ್ಕೆ ಕಾರಂತರು ಈ ರೀತಿ ಉತ್ತರವಿತ್ತರಂತೆ:

"ನನಗೆ, ನಾನು ಮಾಡುವ ಕೆಲಸದಿಂದ ಭಿನ್ನವಾದ ಸಿದ್ಧಿ ಎಂಬುದು ತಿಳಿಯದು. ಸ್ವತಂತ್ರ ಬುದ್ಧಿಯ ನನಗೆ ನನ್ನ ಕೆಲಸಗಳನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯ ಇದೆ. ಅಂಥ ದುಡಿತ ನನಗೆ ಸುಖ ಕೊಡುತ್ತದೆ. ಅದೇ ನನ್ನ ಜೀವನದ ಗೆಲುವು. ನಿಮ್ಮ ದುಡಿತಕ್ಕೆ ಇನ್ನೊಬ್ಬರು ಕೊಡುವ ಪ್ರತಿಫಲದಿಂದಾಗಲೀ ಹೊಗಳಿಕೆ-ಗೌರವಗಳಿಂದಾಗಲೀ, ನೀವು ನಿಮ್ಮ ಜೀವನದ ಜಯಾಪಜಯಗಳನ್ನು ನಿರ್ಣಯಿಸುವಿರಾದರೆ, ನೀವು ಕ್ಲೇಶ ನಿರಾಸೆಗಳ ಹಾದಿಯಲ್ಲಿ ಸಾಗುವಿರಿ ಎಂದು ನಾನು ಹೇಳುತ್ತೇನೆ".

ಇಂಥ ಜೀವನದೃಷ್ಟಿಯುಳ್ಳ ಕಾರಂತರು ತಾವು ಸಂಚರಿಸಿದ ಸ್ಥಳಗಳಲ್ಲೆಲ್ಲ ಹಲವಾರು ಬಗೆಯ ಸ್ನೇಹಿತರ ಗುಂಪುಗಳನ್ನು ಸೇರಿಸಿ ಅವರನ್ನು ಒಂದಲ್ಲದಿದ್ದರೆ ಇನ್ನೊಂದು ತರದ ಕುಶಲ ಕರ್ಮಗಳಲ್ಲಿ ತೊಡಗಿಸಿದ್ದಾರೆ. ಪ್ರತಿಯೊಬ್ಬರೂ ತಮತಮಗೆ ಸಹಜವಾದ ಯಾವುದಾದರೊಂದು ವಿಷಯವನ್ನು ಆಯ್ದುಕೊಂಡು ಈ ದಿಸೆಯಲ್ಲಿ ಪ್ರಾಮಾಣಿಕವಾಗಿ ಏಕಾಗ್ರಚಿತ್ತದಿಂದ ದುಡಿದು ಆತ್ಮತೃಪ್ತಿಯನ್ನು ಪಡೆಯಬೇಕು. ಇದು ಕಾರಂತರ ಉಪದೇಶ.

ಹಾಗೆ ದುಡಿಯದೆಯೇ ಮಹಾಸಿದ್ಧಿಗಳನ್ನು ಪಡೆಯುತ್ತೇವೆ ಎನ್ನುವವರ ಬಗೆಗೆ ಕಾರಂತರು ಮರುಗುತ್ತಾರೆ. ಆ ಮರುಕವನ್ನು ತಮ್ಮ ಹುಚ್ಚು ಮನಸ್ಸಿನ ಹತ್ತು ಮುಖಗಳಿಂದಲೂ ತೋಡಿಕೊಂಡು ಕಲಾತ್ಮಕವಾಗಿ ಪ್ರಕಟಿಸುತ್ತಾರೆ.

ತನ್ನ ಮನಸ್ಸಿನ ಅತೃಪ್ತಿಗಳ ಬಗ್ಗೆ ಒಮ್ಮೆ ಕಾರಂತರು ಈ ರೀತಿ ಹೇಳಿದರಂತೆ:

"ನಾನು ಯಾವಾಗಲೂ ಅತೃಪ್ತನಾಗಿರುತ್ತೇನೆ. ಕಾರಣ, ನನ್ನ ಕಣ್ಣಮುಂದೆ ಬಾಳುವ ಜನ ಅವರು ಹಚ್ಚಿಕೊಂಡ ಉದ್ದೇಶಗಳಿಗಿಂತ ಎಷ್ಟೋ ಎತ್ತರದ ಉದ್ದೇಶಗಳಿಗಾಗಿ ಸೃಜನಶೀಲವಾದ ಬಾಳನ್ನು ಬಾಳಬಲ್ಲರು. ಅದಕ್ಕೆ ಬೇಕಾದ ಸೌಕರ್ಯಗಳನ್ನು ನಾವು ಸೃಷ್ಟಿಸಬಲ್ಲೆವು. ಹಾಗಾಗದೆ ನಾವು ಇದ್ದಂತೆಯೇ ಇರುವುದನ್ನು ಕಂಡಾಗ ನನ್ನ ಅತೃಪ್ತಿ ಕೆರಳುತ್ತದೆ."

# "ಕಾರಂತ ಪ್ರಪಂಚ"ದರ್ಶನ

ಎಂ. ಎ. ಇನಾಂದಾರ್

ಪಾ. ವೆಂ.

ನಾ. ಡ'ಸೋಜ

ಪತ್ರಿಕೆಗಳಲ್ಲಿ
ಅಭಿನಂದನಗ್ರಂಥದ ಸಮೀಕ್ಷೆ

# ‘ಕಾರಂತ ಪ್ರಪಂಚ’ - ಒಂದು ಪರಿಚಯ

“ಸುಧಾ”ದಲ್ಲಿ

ಎ. ಎಂ. ಇನಾಂದಾರ್

ನವೆಂಬರ್ ತಿಂಗಳ ಮೊದಲ ವಾರ ಉಡುಪಿಯಲ್ಲಿ ಶಿವರಾಮ ಕಾರಂತರ ಅರುವತ್ತೆಂಟನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ನಡೆಸಲಾದ ಸಾಹಿತ್ಯೋತ್ಸವವು ವೈಶಿಷ್ಟ್ಯಪೂರ್ಣವಾಗಿದ್ದಂತೆ ಅವರಿಗೆ ಅರ್ಪಿಸಲಾದ ಅಭಿನಂದನ ಗ್ರಂಥವೂ ಅನೇಕ ಬಗೆಯಲ್ಲಿ ವೈಶಿಷ್ಟ್ಯಪೂರ್ಣವಾಗಿರುವುದರಿಂದ ಒಂದೆರಡು ಮಾತುಗಳನ್ನು ಇಲ್ಲಿ ಪ್ರಸ್ತಾವಿಸುತ್ತಿದ್ದೇನೆ. ಕಿರೀಟ ಚತುರ್ಥಾಕಾರದ ಐನೂರನಲವತ್ತು ಪುಟಗಳ ಈ ಗ್ರಂಥದಲ್ಲಿ ಸುಮಾರು ಅರುವತ್ತು ಹಿರಿಯ ಕಿರಿಯ ಲೇಖಕರು ಕಾರಂತರ ಸಾಧನೆಯನ್ನು ಕುರಿತು ಬರೆದಿದ್ದಾರೆ; ಹಿರಿಯರು ಆಶೀರ್ವಚನ ಹೇಳಿದ್ದಾರೆ, ಸಮಾನರು ಹಾರೈಕೆಗಳನ್ನು ವ್ಯಕ್ತಪಡಿಸಿದ್ದಾರೆ. ಕಿರಿಯರು ಕಾರಂತರು ನಡೆದ ದಾರಿಯ ಹೆಜ್ಜೆ ಗುರುತುಗಳನ್ನು ಗುರುತಿಸಿ ಅದರ ಗತಿಯ ವೈವಿಧ್ಯವನ್ನು, ಗೊತ್ತುಗುರಿಗಳ ವಿಸ್ತಾರವನ್ನು ತಿಳಿಯುವ, ಅಳೆಯುವ ಪ್ರಯತ್ನವನ್ನು ಮಾಡಿದ್ದಾರೆ. ಇಂಥ ವಿಸ್ತಾರವಾದ, ವೈವಿಧ್ಯಪೂರ್ಣವಾದ ಗ್ರಂಥದ ವಿಮರ್ಶೆ ಇಲ್ಲಿ ಸಾಧ್ಯವಿಲ್ಲ. ಆದರೆ ಅನೇಕರು ಗ್ರಂಥವನ್ನು ನೋಡಿರಲಾರರು. ಆದ್ದರಿಂದ ಅದರ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಕೆಲವೊಂದು ಮಾತುಗಳನ್ನು ಬರೆಯುತ್ತಿದ್ದೇನೆ.

**ಒಂದು ಪರಿಚಯ**

ಈ ಬೃಹದ್ಗ್ರಂಥದಲ್ಲಿ ಐದು ಭಾಗಗಳಿವೆ. ಮೊದಲನೆಯದಾದ “ವ್ಯಕ್ತಿ ಪ್ರಪಂಚ”ದಲ್ಲಿ ಹರಕೆ, ಹಾರೈಕೆ, ನೆನಪು, ರಸಪ್ರಸಂಗಗಳು ಕಾರಂತರಿಗೆ ಸಂಬಂಧಿಸಿದ ಹಾಗೆ ಬಂದಿವೆ. ಇಬ್ಬರು ವಿಮರ್ಶಕರು ಕಾರಂತರ ಸಂದರ್ಶನ ಪಡೆದು ಅವರ ಬರಹಗಳಲ್ಲಿ ಸೂಚ್ಯವಾಗಿ ಮಾತ್ರ ಕಾಣುವ ಅವರ ಸಾಹಿತ್ಯಿಕ, ವೈಯಕ್ತಿಕ ಧೋರಣೆ ಮತ್ತು ಮನೋಧರ್ಮ ವಿಶದವಾಗುವಂತೆ ಕನ್ನಡಿ ಹಿಡಿದಿದ್ದಾರೆ. ಎರಡನೆಯದಾದ “ಕಲಾ ಪ್ರಪಂಚ”ದಲ್ಲಿ ಅವರ ಸಂಗಡಿಗರೂ ತಜ್ಞ ಕಲಾವಿಮರ್ಶಕರೂ ನಮಗೆ ವಿಶಿಷ್ಟವಾದ ಒಂದು ಗಾನ ಮತ್ತು ನೃತ್ಯ ಸಂಪ್ರದಾಯದ ಪುನರುಜ್ಜೀವನಕ್ಕಾಗಿ ಕಾರಂತರು ಮಾಡಿದ ಕೆಲಸವನ್ನು, ಅವರು ನೃತ್ಯನಾಟಕದಲ್ಲಿ ನಡೆಸಿದ ಪ್ರಯೋಗಗಳನ್ನು, ಯಕ್ಷಗಾನ ಬಯಲಾಟದ ಬಗೆಯಲ್ಲಿ ಅವರು ನಡೆಸಿದ ಸಂಶೋಧನವನ್ನು, ಅದಕ್ಕೆ ಅವರು ಕೊಟ್ಟ ಹೊಸ ಕಳೆಯನ್ನು ವಿಶ್ಲೇಷಿಸಿದ್ದಾರೆ. ಮೂರನೆಯದಾದ “ಸಾಹಿತ್ಯ ಪ್ರಪಂಚ”ದಲ್ಲಿ ಕಾದಂಬರಿ

ಯನ್ನು ಹೊರತುಪಡಿಸಿ ಉಳಿದ ಸಾಹಿತ್ಯ ಪ್ರಕಾರಗಳಲ್ಲಿ ಕಾರಂತರು ಮಾಡಿದ ಸೇವೆ ಯನ್ನು ವಿಮರ್ಶಕರು ಅಧ್ಯಯನಪೂರ್ಣವಾಗಿ ನೋಡಿದ್ದಾರೆ. ನಾಲ್ಕನೆಯದಾದ "ಕಾದಂಬರೀ ಪ್ರಪಂಚ" ಹೆಸರಿಗೆ ತಕ್ಕ ಹಾಗೆ ವಿಸ್ತಾರವಾಗಿದೆ. ಕಾರಂತರ ಕಾದಂಬರಿ ಗಳನ್ನು ಅವುಗಳ ವಸ್ತುವಿಷಯಗಳ ಆಧಾರದ ಮೇಲೆ ಗುಂಪುಗಳನ್ನಾಗಿ ವಿಂಗಡಿಸಿ ಒಂದೊಂದು ಬಗೆಯ ಕೃತಿಸಮುದಾಯದ ಬಗೆಯಲ್ಲಿ ವಿಮರ್ಶೆಗಳನ್ನು ಶೇಖರಿಸ ಲಾಗಿದೆ. ಸಂಪಾದಕರೇ ಹೇಳುವಂತೆ ಇಲ್ಲಿನ ವಿಮರ್ಶಕರು ಕಾದಂಬರಿಗಳನ್ನು "ವಿವರ ವಾಗಿ ವಿಶ್ಲೇಷಿಸಿ, ಪ್ರಾಮಾಣಿಕವಾದ ಅಭಿಪ್ರಾಯವನ್ನು ಮಂಡಿಸಿ ನಿರ್ಭೀತ ಪ್ರಶ್ನೆ ಗಳನ್ನು ಕೇಳಿ ಕಾರಂತ ಸೃಷ್ಟಿಯ ಏರುತಗ್ಗುಗಳನ್ನು ಸ್ಫುಟಗೊಳಿಸಿದ್ದಾರೆ."

"ಕಾದಂಬರೀ ಪ್ರಪಂಚ"ದ ಒಳಭಾಗವಾಗಿ ಒಂದು ಹೊಸ ಬಗೆಯ ಕೆಲಸ ನಡೆದಿದೆ. ವಿಮರ್ಶೆ – ಪುನರ್ವಿಮರ್ಶೆ" ಎನ್ನುವ ಈ ಭಾಗದಲ್ಲಿ ಕಾರಂತರ ಮೂರು ಮುಖ್ಯ ಕಾದಂಬರಿಗಳನ್ನು ಕುರಿತು (ಮರಳಿ ಮಣ್ಣಿಗೆ, ಬೆಟ್ಟದ ಜೀವ, ಅಳಿದ ಮೇಲೆ) ಈಗಾಗಲೇ ಬಂದಿರುವ ವಿಮರ್ಶೆಗಳ ಜೊತೆಯಲ್ಲಿ ಮರುವಿಮರ್ಶೆಯನ್ನು ಪ್ರಕಟಿಸಲಾಗಿದೆ. ವಿಮರ್ಶೆ ಯಲ್ಲಿಯ ಹಳೆ ಹೊಸ ಬಗೆಗಳನ್ನು, ಹೊಸ ತಾರತಮ್ಯಗಳನ್ನು, ಗೊತ್ತುಗುರಿಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಕೊನೆಯ ವಿಭಾಗದಲ್ಲಿ ಕಳೆದ ನಲವತ್ತು ವರ್ಷಗಳಲ್ಲಿ ಕಾರಂತರು ಬರೆದ ಲೇಖನಗಳ ಸೂಚಿಯನ್ನು ತಯಾರಿಸುವ ಅತಿ ಪ್ರಯಾಸದ ಕೆಲಸ ವನ್ನು ಶ್ರದ್ಧಾಪೂರ್ವಕವಾಗಿ ಮಾಡಲಾಗಿದೆ. ಇವೆಲ್ಲ ಲೇಖನಗಳ ಜೊತೆಯಲ್ಲಿ ಕಾರಂತ ರಿಗೆ ಸಂಬಂಧಿಸಿದ ಹಾಗೆ ಭಾವಚಿತ್ರಗಳನ್ನು ಸೇರಿಸಿಕೊಳ್ಳಲಾಗಿದೆ. ಕಲಾವಿದ ಹೆಬ್ಬಾರರ ರೇಖಾಚಿತ್ರ ಹಾಗೆಯೇ ವರ್ಣಚಿತ್ರ ಗ್ರಂಥದ ಸೊಗಸನ್ನು ಹೆಚ್ಚಿಸಿದೆ. ಅಭಿನಂದನ ಸಮಿ ತಿಯ ಪರವಾಗಿ ಮೈಸೂರಿನ ಗೀತಾ ಬುಕ್‌ಹೌಸ್‌ನವರಿಂದ ಪ್ರಕಾಶಿತವಾದ ಈ ಗ್ರಂಥದ ಬೆಲೆ ಐವತ್ತು ರೂಪಾಯಿಗಳು. ಕಾಗದ, ಮುದ್ರಣ, ಕಟ್ಟು ಇವೆಲ್ಲವುಗಳ ಗುಣಪ್ರಮಾಣ ವನ್ನು ಗಮನಿಸಿದಾಗ ಇಷ್ಟು ಬೆಲೆ ಹೆಚ್ಚಲ್ಲ. ಆದರೆ ಸಾಮಾನ್ಯ ಆರ್ಥಿಕ ಯೋಗ್ಯತೆಯ ಕಾರಂತ ಅಭಿಮಾನಿಯ ಜೇಬಿನಲ್ಲಿ ಈ ಪುಸ್ತಕ ಹಿಡಿಸಲಾರದು.

**ಇದರ ವಿಶೇಷ**

ಇತ್ತೀಚಿನ ಕೆಲವು ವರ್ಷಗಳಲ್ಲಿ "ಅಭಿನಂದನ" ಒಂದು ಸಾಹಿತ್ಯ ಪ್ರಕಾರ ಎನ್ನುವ ಮಟ್ಟಿಗಿನ ಗಾತ್ರವನ್ನು ಪಡೆಯುತ್ತಿದೆ. ವರ್ಷವೊಂದರಲ್ಲಿ ನಾಲ್ಕಾರು ಅಭಿನಂದನ ಗ್ರಂಥಗಳು ಬೇರೆ ಬೇರೆ ಹೆಸರಿನಲ್ಲಿ ಪ್ರಕಟವಾಗುತ್ತಿವೆ. ಈ ಬಗೆಯ ಬರಹಗಳ ಐತಿ ಹಾಸಿಕ ಸಮಾಲೋಚನೆಯನ್ನು ಕೈಕೊಳ್ಳಬಹುದಾದ ಪ್ರಮಾಣದಲ್ಲಿ ಇಂಥ ಬರಹ ಹೊರಬರುತ್ತಿದೆ. (ಇಂಥ ಸಮಾಲೋಚನೆಯನ್ನು ಒಬ್ಬರು ಆಗಲೆ ಮಾಡಿಯಾಗಿದೆ.) ಒಬ್ಬ ಲೇಖಕ ಸಾಧಿಸಿದ ಹಿರಿಮೆಯನ್ನು ಕುರಿತು ಅಭಿವಂದನೆಯನ್ನು ಹೇಳುವುದು ಸ್ವಾಭಾವಿಕವಾಗಿದ್ದಷ್ಟೂ ಆವಶ್ಯಕ; ಹಾಗೆಯೇ ಆ ಸಾಧನೆಯ ಪರಿಚಯ ಉಳಿದವರಿಗೆ ಆಗುವುದೂ ಅಗತ್ಯ. ಆ ದೃಷ್ಟಿಯಿಂದ ಅಭಿನಂದನ ಗ್ರಂಥಗಳು ನಡೆಯಬೇಕಾದ ಒಂದು ಕೆಲಸವನ್ನೇ ಮಾಡುತ್ತಿವೆ. ಕಾರಂತರಿಗೆ ಸಮರ್ಪಿಸಲಾದ ಈ ಗ್ರಂಥ ಸಾಮಾನ್ಯವಾಗಿ ಈ ಗ್ರಂಥರಾಶಿಯ ಜಾತಿಗೆ ಸೇರಿದ್ದು ಎಂದು ಹೇಳಬಹುದಾದರೂ ನಡೆಯಬೇಕಾದ

ಕೆಲಸದ ಇನ್ನೊಂದು ಮೈಯನ್ನು ಅದು ಗುರುತಿಸಿ ಅದರತ್ತ ವಿಶೇಷವಾದ ಗಮನವನ್ನು ಹರಿಯಿಸಿದೆ ಎನ್ನುವುದು ಇಲ್ಲಿಯ ವಿಶೇಷ. ಇದುವರೆಗಿನ ಅಭಿನಂದನ ಗ್ರಂಥಗಳಲ್ಲಿ ಸ್ತುತಿಪ್ರಧಾನವಾದ ಲೇಖನಗಳಿಗೆಯೇ ಪ್ರಾಶಸ್ತ್ಯ. ಪ್ರಾಶಸ್ತ್ಯವೇನು? ಸ್ತುತಿಯೇ ಅವುಗಳ ಮುಖ್ಯ ಉದ್ದೇಶ. ಸ್ತುತಿ ಬೇಡ ಎಂದಲ್ಲ ಇದರರ್ಥ. ಸ್ತುತಿಗೆ ಅರ್ಹವಾದದ್ದರ ಬಗೆಯಲ್ಲಿ ಅಂಥ ಮಾತನ್ನು ಹೇಳದಿದ್ದರೆ ವಿಮರ್ಶೆ ಕುರುಡಾದೀತು. ಆದರೆ ಸಾಮಾನ್ಯನ ದೃಷ್ಟಿಯಿಂದ ಒಂದು ಪ್ರಶ್ನೆಗೆ ಅವಕಾಶವಿದೆ: ಒಬ್ಬ ಲೇಖಕನಲ್ಲಿ ಎಲ್ಲವೂ ಎಂದರೆ ಪ್ರತಿಯೊಂದು ಅಂಶವೂ ಸ್ತುತ್ಯರ್ಹವೇ ಎನ್ನುವ ಪ್ರಶ್ನೆ. ಒಬ್ಬೊಬ್ಬ ಲೇಖಕ ತನಗೆ ವಿಶಿಷ್ಟವಾದ ರೀತಿಯಲ್ಲಿ ದುಡಿದಿರುತ್ತಾನೆ. ಒಂದೊಂದು ಬಗೆಯ ಸಾಧನೆ ಆತನದಾಗಿರುತ್ತದೆ. ಆತನ ಸಿದ್ಧಿಯ ಜೊತೆಯಲ್ಲಿ ಆತನ ಇತಿಮಿತಿಗಳೂ ಆವಿಷ್ಕಾರಗೊಂಡಿರುತ್ತವೆ. ಆತನ ಸಾಧನೆಗೆಯೇ ಒಂದು ಮಿತಿ ಇರುತ್ತದೆ. ಆತನ ನೋಟಕ್ಕೆ, ಹವಣಿಕೆಗೆ, ಚೇತನದ ಸಾಮರ್ಥ್ಯಕ್ಕೆ ಆತ ಬಳಸಿದ ಉಪಕರಣಗಳಿಗೆ ಒಂದು ಇತಿಮಿತಿ ಇರುತ್ತದೆ. ಒಬ್ಬೊಬ್ಬ ಲೇಖಕ ಈ ಇತಿಮಿತಿಗಳ ಚೌಕಟ್ಟಿನಲ್ಲಿಯೇ ಕೆಲಸ ಮಾಡುತ್ತಾನೆ, ಅದು ಅನಿವಾರ್ಯ. ಇದನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲವನ್ನೂ ಹೊಗಳುವ, ಎಲ್ಲವನ್ನೂ ಆಕಾಶಕ್ಕೆ ಏರಿಸುವ ಬರಹ 'ಅಭಿನಂದನ ಪ್ರಕಾರ'ದ ಬರಹವಾಗಬಲ್ಲದೇ ಹೊರತು ಸರಿಯಾದ ವಿಮರ್ಶೆಯಾಗಲಾರದು. ಅಭಿನಂದನ ಗ್ರಂಥ ಒಂದು ವಿಮರ್ಶಾಗ್ರಂಥವಾಗಿರಬೇಕೇ ಅಥವಾ ಬಾರದೆ ಎನ್ನುವುದರ ಬಗೆಯಲ್ಲಿಯೂ ಭಿನ್ನಾಭಿಪ್ರಾಯ ಸಾಧ್ಯವಿದೆ. ಅಲ್ಲಿ ನಡೆಯಬೇಕಾದ ಕೆಲಸವೆಂದರೆ ಮೆಚ್ಚಿದ ಒಬ್ಬ ಲೇಖಕನನ್ನು ಕುರಿತು ಮೆಚ್ಚಿಕೆಯ ಮಾತಗಳನ್ನು ಹೇಳುವುದು; ವಿಮರ್ಶಾತ್ಮಕ ದೃಷ್ಟಿಯಿಂದ ಆತನ ನೆಲೆ ಬೆಲೆಗಳನ್ನು, ಆತನ ಸಿದ್ಧಿಯನ್ನು ಅಳತೆಮಾಡಿ ನಿಷ್ಕರ್ಷಿಸುವುದಲ್ಲ ಎಂದು ವಾದಿಸಬಹುದು. ಆದರೆ ಕುರುಡು ಹೊಗಳಿಕೆಗಿಂತ ಗುಣನಿಷ್ಕರ್ಷೆಯಲ್ಲಿ ಮೂಡಿದ ಹೊಗಳಿಕೆ ಸರಿಯಾದದ್ದಲ್ಲವೆ? ಅದಿಲ್ಲದಿದ್ದರೆ ಬರಿಯ ಸ್ತುತಿಯ ಬರಹ ಹಳೆಯ ಕಾಲದ ಆಸ್ಥಾನಕವಿಗಳ ಚಾರಣ ಗೀತಗಳಿಂದ ಬೇರೆಯಾಗಲಾರದು ಅಥವಾ ನಾವು ಹಳೆಯದರ ಕಡೆಗೆ ಮುಂದುವರಿಯುತ್ತಿದ್ದೇವೆಯೇ?

ಈ ಗ್ರಂಥವೂ ಅಭಿನಂದನ ಗ್ರಂಥವೇ ಆದರೂ ಇದರಲ್ಲಿ ಬಂದಷ್ಟು ಸೂಕ್ಷ್ಮವಾದ, ವಿಶ್ಲೇಷಣಾತ್ಮಕವಾದ ಪ್ರಶ್ನಮುಖವಾದ ವಿಮರ್ಶೆ ಬೇರೆಡೆಯಲ್ಲಿ ಬಂದಿಲ್ಲ, ಅಥವಾ ಇಲ್ಲಿಯ ಪ್ರಮಾಣದಲ್ಲಿ ಬಂದಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಇಲ್ಲಿ ಕಾರಂತರ ಮನೋಧರ್ಮವನ್ನು, ಲೇಖನ ಸಿದ್ಧಿಯನ್ನು ಒಪ್ಪಿದವರ ಜೊತೆಯಲ್ಲಿ ಒಪ್ಪದವರೂ ಇದ್ದಾರೆ. ಬಡಿಸಿ ನೋಡಿ ತಿಳಿಯಬೇಕು ಎನ್ನುವವರಿದ್ದಾರೆ. ಹೊಸ ವಿಮರ್ಶೆಯ ಹೊಸ ನೋಟ, ತೀಕ್ಷ್ಣತೆಗಳು ಅವರ ಕೆಲವೊಂದು ಕೃತಿಗಳನ್ನು ವಿಶ್ಲೇಷಿಸಿ ಸಲ್ಲಬೇಕಾದ ಸ್ತುತಿಯ ಮಾತುಗಳ ಜೊತೆಯಲ್ಲಿ ವಿಮರ್ಶೆ ಕಂಡ ಕಟುಸತ್ಯಗಳನ್ನೂ ಹೇಳಿದ್ದಾರೆ. ಅವರ ಸಾಧನೆಯ ಆಳ ಎತ್ತರಗಳ ಜೊತೆಯಲ್ಲಿ ಅದರ ಇತಿಮಿತಿಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಿದ್ದಾರೆ. ಇದು ಈ ಗ್ರಂಥದ ವಿಶೇಷ. ಅದಕ್ಕಾಗಿ ಸಂಪಾದಕರಾದ ಪ್ರೊ। ಹರಿದಾಸ ಭಟ್ಟರು ಅಭಿನಂದನಾರ್ಹರಾಗಿದ್ದಾರೆ.

# ಕಾರಂತರ ಸಾಹಸೀ ಜೀವನಕ್ಕೊಂದು ಕಾಣಿಕೆ

'ಕರ್ಮವೀರ'ದಲ್ಲಿ

ಪಾ. ವೆಂ.

ಡಾ। ಶಿವರಾಮ ಕಾರಂತರು ಕನ್ನಡದಲ್ಲೇ ಏಕೆ, ಯಾವ ದೇಶದಲ್ಲೇ ಹುಟ್ಟಿದರೂ ಅಪರೂಪ ವ್ಯಕ್ತಿಗಳೇ ಆಗಿ ಎದ್ದು ನಿಲ್ಲತಕ್ಕವರು. ಅವರ ಬಹುಮುಖವಾದ ಕಾರ್ಯಕ್ಕೆ ತಕ್ಕ ಕಾಣಿಕೆಯಾಗಿ ಈ ಅಭಿನಂದನ ಗ್ರಂಥ ಬಂದಿದೆ. ಕಾರಂತರಿಗೆ ಈಗ 67 ದಾಟಿದೆ. ಇನ್ನೂ ಅವರ ಕಾರ್ಯಗಳ ಕೊನೆಯನ್ನು ನಾವು ಕಂಡಿಲ್ಲ. ಅವರ ತಲೆಯಲ್ಲಿ ಹೊಸ ಹೊಸ ಯೋಜನೆಗಳು, ಯೋಚನೆಗಳು ಮೂಡುತ್ತಲೇ ಇರುತ್ತವೆ. ಆದ್ದರಿಂದ ನಾಳೆ ಅವರು ನಮ್ಮನ್ನು ಚಕಿತಗೊಳಿಸುವ ಯಾವ ಹೊಸ 'ಮುಖ'ದೊಡನೆ ನಮ್ಮ ಮುಂದೆ ಪ್ರತ್ಯಕ್ಷ ಕಾಣುವರೋ ತಿಳಿಯದು. ಇದು ಅವರ ಈವರೆಗಿನ ಸಾಹಿತ್ಯ – ಸಾಹಿತ್ಯೇತರ 'ಮುಖ' ಗಳ ಸಮಗ್ರ ದರ್ಶನ ಮಾಡಿಸುವ ಒಂದು ಸಾಹಸವಾಗಿದೆ. ಆದ್ದರಿಂದ ಅನೇಕ ಅಭಿನಂದನ ಗ್ರಂಥಗಳ ಹಾಗೆ ಅಭಿನಂದಿತರ ಬದುಕು – ಕೃತಿಗಳ ವಿಚಾರ ಒಂದಿಷ್ಟು, ಬೇರೆ ವಿಷಯ ಗಳ ಪಾಂಡಿತ್ಯಪೂರ್ಣ ಲೇಖನಗಳ ಗುಚ್ಛ ಒಂದಿಷ್ಟು – ಹೀಗೆ ವ್ಯಾಮಿಶ್ರವಾದ ಗ್ರಂಥ ಇದಲ್ಲ. ಇದರಲ್ಲಿ ಇರುವುದು ಎಲ್ಲವೂ ಕಾರಂತರ ಮತ್ತು ಅವರ ಕೆಲಸದ ವಿಷಯ.

ಹೆಚ್ಚಂಶ ಕನ್ನಡದ ಹೆಸರಾಂತ ಲೇಖಕರು ಬರೆದ 55 ಲೇಖನಗಳುಳ್ಳ ಕಾರಂತ ಪ್ರಪಂಚದಲ್ಲಿ 'ವ್ಯಕ್ತಿ ಪ್ರಪಂಚ', 'ಕಲಾ ಪ್ರಪಂಚ', 'ಸಾಹಿತ್ಯ ಪ್ರಪಂಚ' ಮತ್ತು 'ಕಾದಂಬರೀ ಪ್ರಪಂಚ' ಎಂಬ ನಾಲ್ಕು ಮುಖ್ಯ ಭಾಗಗಳಲ್ಲದೆ 'ಕೃತಿ ಮತ್ತು ಲೇಖನ ದರ್ಶಿಕೆ' ಎಂಬ ಐದನೆಯ ಭಾಗವೂ ಇದೆ. ಕಲಾವಿದ ಕೆ. ಕೆ. ಹೆಬ್ಬಾರರು ಬರೆದ ಬಣ್ಣದ ಪೋರ್ಟ್ರೆಟ್ ಮತ್ತು ಒಂದು ರೇಖಾಚಿತ್ರವಲ್ಲದೆ ಕಾರಂತರ ಕೌಟುಂಬಿಕ ಮತ್ತು ವೃತ್ತಿ ಜೀವನಕ್ಕೆ ಸಂಬಂಧಿಸಿದ ಹಲವು ಚಿತ್ರಗಳೂ ಇದರಲ್ಲಿವೆ. ಮಣಿಪಾಲ ಪವರ್ ಪ್ರೆಸ್ಸಿನಿಂದ ಮುದ್ರಣ ಹೊಂದಿ ನಿರ್ಮಾಣ ದೃಷ್ಟಿಯಿಂದ ಉಚ್ಚಕೋಟಿಯದಾಗಿದೆ.

ಮೊದಲನೆಯದಾದ 'ವ್ಯಕ್ತಿ ಪ್ರಪಂಚ'ದ 156 ಪುಟಗಳಲ್ಲಿ ಕಾರಂತರನ್ನು ಅವರ ಮಿತ್ರರು, ಬಂಧುಗಳು, ಸಹಕಾರಿಗಳು, ಶಿಷ್ಯರು ಮತ್ತು ಮೆಚ್ಚಿದವರು ಕಂಡ ಬಗೆಗಳಿವೆ. ಡಿ.ವಿ.ಜಿ., ಮಾಸ್ತಿ, ಬೇಂದ್ರೆ, ವಿ.ಸೀ., ಶಂ.ಬಾ. ರಂಥ ಹಿರಿಯರು 'ಹರಕೆ'ಗಳನ್ನು ನೀಡಿ ದ್ದಾರೆ. ಎ. ಎನ್. ಮೂರ್ತಿರಾವ್, ಸೇಡಿಯಾಪು, ಮಾಳವಾಡ, ಜವರೇಗೌಡ ಮೊದ ಲಾದವರು ಹಾರೈಕೆಗಳನ್ನು ಕೊಟ್ಟಿದ್ದಾರೆ. ಆದರೆ ಈ ವಿಭಾಗದ ನೂರಕ್ಕೂ ಮಿಕ್ಕಿದಷ್ಟು ಪುಟಗಳು ಕಾರಂತರ ನೇರ ಸಂಪರ್ಕ ಬಂದವರ ನೆನಪುಗಳಿಂದ ತುಂಬಿವೆ. ಇಲ್ಲಿ ಹಲ ಸಂಗಿಯ ಗೆಳೆಯರನ್ನು ಹೊಲಸಂಗಿಯ ಗೆಳೆಯರೆಂದು ನಗುವ ಕಾರಂತರೂ (ಸಿಂಪಿ

ಲಿಂಗಣ್ಣ), ಪುತ್ರವಿಯೋಗಕ್ಕೆ ಸಹಾನುಭೂತಿಪರ ಪತ್ರ ಬರೆದವರಿಗೆ "ಬಂದಿರುವ ವಿಪತ್ತು ಘನತರದ್ದಾದರೂ ಅನೇಕಾನೇಕ ತಂದೆತಾಯಿಗಳಿಗೆ ಬಂದುದೇ ನಮಗೆ ಬಂತು" ಎನ್ನುವ ವಿಷಕಂಠ ಕಾರಂತರೂ (ಕೋ. ಚನ್ನಬಸಪ್ಪ) ಇಲ್ಲಿ ನಮಗೆ ಎದುರಾಗುತ್ತಾರೆ. ಕೆಲೆಂಡರ್ ಕಲಾವಿದನ ಚಿತ್ರಗಳನ್ನು ಕಣ್ಣೆತ್ತಿಯೂ ನೋಡದೆ ಎದ್ದು ಬಂದ ನಿತಾಂತ ನಿಷ್ಠುರ ಕಾರಂತರು ಜನಪ್ರಿಯತೆಗಾಗಿ ಏನನ್ನು ಬೇಕಾದರೂ ಹರಸಲು ಸಿದ್ಧರಾಗುವ ಅನೇಕ ಹಿರಿಯರಿಗಿಂತ ಬೇರೆಯಾಗಿ ಎದ್ದು ಕಾಣುತ್ತಾರೆ. ಹಾಗೇ 30–35 ವರ್ಷಗಳ ನಂತರ ಅಕಸ್ಮಾತ್ತಾಗಿ ಭೆಟ್ಟಿಯಾದ ತಮ್ಮ ಹಳೇ ಕನ್ನಡ ಲೆಕ್ಚರರಿಗೆ ರೇಶ್ಮೆ ಶಾಲನ್ನು ತಂದು ಹೊದಿಸಿದ (ಗುರುಭಕ್ತ ಎನ್ನೋಣವೆ? – ಕಾರಂತರ ವಿಷಯದಲ್ಲಿ ಇದು ಕ್ಲೀಷೆ ಎನ್ನಿಸೀತು) ಕಾರಂತರನ್ನೂ ಕಾಣುತ್ತೇವೆ. ಕಾರಂತರ ಇಬ್ಬರು ಅಣ್ಣಂದಿರಾದ ರಾಮ ಕೃಷ್ಣ ಕಾರಂತರೂ ಲಕ್ಷ್ಮೀನಾರಾಯಣ ಕಾರಂತರೂ ಶಿವರಾಮ ಕಾರಂತರ ಬಾಲ್ಯದ ಪರಿಸರವನ್ನು ವರ್ಣಿಸಿದ್ದಾರೆ. ತಂದೆ ಶೇಷ ಕಾರಂತರು ಪ್ರಾರಂಭದಲ್ಲಿ ತಿಂಗಳಿಗೆಂಟಾಣೆ ಸಂಬಳದಲ್ಲಿ ಗಟ್ಟದ ಮೇಲೆ ಕೆಲಸ ಮಾಡಿದ ಶಾಲಾ ಉಪಾಧ್ಯಾಯರಾಗಿದ್ದರೆಂದೂ ತಾಯಿ ರೂಪಾಯಿ ಬೆಲೆಯ ಕಿರಿಗೆಯನ್ನು ದಾನ ಪಡೆಯುವುದಕ್ಕೆ 50 ಮೈಲು ದೂರದ ಶೃಂಗೇರಿಗೆ ನಡೆದು ಹೋಗುತ್ತಿದ್ದರೆಂದೂ ಕೇಳಿ ಅಂದಿನ ಬಡತನದ ಬದುಕಿಗೆ ಚಕಿತ ರಾಗುತ್ತೇವೆ. ಸಾಹಿತಿಗಳಲ್ಲದ ಕಾರಂತ ಮಿತ್ರರಾದ ಕೊಡಗಿನ ಪ್ಲಾಂಟರ್ ಮಂಜುನಾ ಥಯ್ಯನವರೂ (ಸಂದರ್ಶನ: ಜಿ. ಟಿ. ನಾರಾಯಣರಾವ್) ಬೆಂಗಳೂರಿನ ಹೊಟೆಲ್ ಉದ್ದಿಮೆದಾರರಾದ ಗುಂಡ್ಮಿ ರಾಮಕೃಷ್ಣ ಐತಾಳರೂ ಕಾರಂತರ ಹೃದಯವಂತಿಕೆಯ ಬಗ್ಗೆ ಹೇಳುವ ಮಾತುಗಳು, ಹುಬ್ಬಳ್ಳಿಯ ಮಿತ್ರ ದಿವಂಗತ ಗುರುರಾಯರೊಡನೆ ಅವರಿಗಿದ್ದ ಆರ್ದ್ರ ಸಂಬಂಧ. ಕಾರಂತರು ಎಲ್ಲ ವರ್ಗಗಳ ಜನರೊಡನೆಯೂ ಎಷ್ಟು ಸಹಜವಾಗಿ ಬೆರೆತು ತನ್ನವರನ್ನಾಗಿ ಮಾಡಿಕೊಳ್ಳಬಲ್ಲವರೆಂದು ತೋರಿಸುತ್ತವೆ. ವಿ. ಎಂ. ಇನಾಂದಾರರೂ ಕು. ಶಿ. ಹರಿದಾಸ ಭಟ್ಟರೂ ಕಾರಂತರೊಡನೆ ಮಾಡಿದ ಸಂದರ್ಶನಗಳು ಕಾರಂತ ಸಾಹಿತ್ಯದ ಪ್ರೇರಣೆ – ವ್ಯವಸಾಯಗಳ ಮೇಲೆ ತುಂಬಾ ಬೆಳಕು ಚೆಲ್ಲುತ್ತವೆ. ......'ಕಲಾ ಪ್ರಪಂಚ', 'ಸಾಹಿತ್ಯ ಪ್ರಪಂಚ', 'ಕಾದಂಬರೀ ಪ್ರಪಂಚ' ಎಂಬ ಮುಂದಿನ ಮೂರು ಪ್ರಪಂಚಗಳು ಕಾರಂತರ ಬಹುಮುಖ ವ್ಯವಸಾಯವನ್ನು ಬಲ್ಲವರಿಗೆ ಕೂಡ ಹೊಸ ದರ್ಶನವನ್ನು ಮಾಡಿಸುವಂತಿವೆ. ಕಾರಂತರ ದೀರ್ಘಕಾಲೀನ ಮೋಹವಾದ ಯಕ್ಷಗಾನವನ್ನೇ ನೋಡಿ. ಈ ಕಲಾ ಸಂಪ್ರದಾಯದ ವಿಷಯ ಎಷ್ಟು ಗಾಢವಾಗಿ ಅವರು ಚಿಂತಿಸಿದ್ದಾರೆ, ಅದರ ನೃತ್ಯ, ಸಂಗೀತ, ಪ್ರಯೋಗ ಮೂರೂ ಅಂಗಗಳ ಮರ್ಮಗಳನ್ನು ಅರಿತುಕೊಳ್ಳಲು ಅವರೆಷ್ಟು ಸಾಧನೆ ಮಾಡಿದ್ದಾರೆ ಎಂಬಂಶ ಬೈಕಾಡಿ ವೆಂಕಟಕೃಷ್ಣರಾವ್, ಕೆ. ವಿ. ಸುಬ್ಬಣ್ಣ ಮೊದಲಾದವರ ಲೇಖನಗಳಿಂದ ವೇದ್ಯವಾಗು ತ್ತದೆ. ಕುರಿಯ ವಿಠಲ ಶಾಸ್ತ್ರಿಗಳು ಕಾರಂತರು ತಮ್ಮನ್ನು ತರಬೇತುಗೊಳಿಸುವ ರೀತಿ ಯನ್ನು ಸ್ವಾರಸ್ಯವಾಗಿ ಬರೆದಿದ್ದಾರೆ.

'ಸಾಹಿತ್ಯ ಪ್ರಪಂಚ' ಕಾದಂಬರಿಯೊಂದನ್ನು ಬಿಟ್ಟು ಕಾರಂತರು ಕೈಯಾಡಿಸಿದ ಎಲ್ಲಾ ಸಾಹಿತ್ಯ ಪ್ರಕಾರಗಳನ್ನು ಕುರಿತ ಲೇಖನಗಳಿಂದ ಕೂಡಿದೆ. ಪತ್ರಿಕಾಕರ್ತರಾಗಿ ಕಾರಂತರು ಕನ್ನಡಿಗರಿಗೆ ಅಷ್ಟಾಗಿ ಪರಿಚಿತರಲ್ಲ; ಆದರೆ 'ವಸಂತ', 'ವಿಚಾರವಾಣಿ'

ಪತ್ರಿಕೆಗಳನ್ನು – ಮೊದಲನೆಯದನ್ನು ತೀರ ತಾರುಣ್ಯದಲ್ಲಿ, ಎರಡನೆಯದನ್ನು ಮಾಗಿದ ವಯಸ್ಸಿನಲ್ಲಿ ಕಾರಂತರು ಯಶಸ್ವಿಯಾಗಿ – ಹಣದ ವಿಷಯದಲ್ಲಲ್ಲ, ಪತ್ರಿಕಾ ಧರ್ಮದ ವಿಷಯದಲ್ಲಿ – ನಡೆಸಿದರು. ಅವರ ಪ್ರಬಂಧಗಳೂ ಅಷ್ಟಾಗಿ ಗಮನಿಸಲ್ಪಟ್ಟಿಲ್ಲ. ಅವರು ಕಾದಂಬರಿಗಳನ್ನು ಬರೆಯದಿದ್ದರೆ ಪ್ರಥಮ ವರ್ಗದ ವಿಡಂಬನಕಾರರೆಂದೇ ಅವರನ್ನು ನಾಡು ತಿಳಿಯಬಹುದಿತ್ತು. ಅವರ ಗೀತನಾಟಕ, ಲೇಖನ ಮತ್ತು ಅಭಿನಯ ಅವರನ್ನು ಕನ್ನಡದ ಅಕ್ಷರಶಃ ಅದ್ವಿತೀಯ ಬ್ಯಾಲೇ ಕರ್ತನಾಗಿಸಿದೆ. ಅವರು ಚಾಲುಕ್ಯ ವಾಸ್ತು ಶಿಲ್ಪದ ಮೇಲೂ ಅಧಿಕಾರಯುತವಾಗಿ ಬರೆದಿದ್ದಾರೆ. ಅವರ ವಿಜ್ಞಾನಸಾಹಿತ್ಯ ಹಲವು ತಜ್ಞರಿಗೆ ಹಲವು ವರ್ಷಗಳು ಹಿಡಿಯಬಹುದಾದ ಕಾರ್ಯವನ್ನು ಒಬ್ಬ – ವಿಜ್ಞಾನದ ತರಬೇತಿ ಇಲ್ಲದ – ವ್ಯಕ್ತಿ ಕೆಲವೇ ವರ್ಷಗಳಲ್ಲಿ ಮಾಡಿದ ಉದಾಹರಣೆಯಾಗಿದೆ. ಸಣ್ಣ ಕಥೆ ಬರೆಯುವುದನ್ನು, ಕಾರಂತರು ಬಹಳ ಬೇಗನೇ ಕೈಬಿಟ್ಟದ್ದು ಒಂದು ನಷ್ಟವೇ. ಅವರು ಮಕ್ಕಳಿಗೆ ಪಠ್ಯ ಪುಸ್ತಕಗಳನ್ನೂ ಬರೆದರು – ಆರ್ಥಿಕ ಒತ್ತಡದಿಂದಲ್ಲ; ಮಕ್ಕಳ ಅಭಿರುಚಿಯನ್ನು ಪ್ರಚೋದಿಸಬಲ್ಲ ಪಠ್ಯಪುಸ್ತಕಗಳು ಬೇಕು, ಅವು ಹೇಗಿರಬೇಕು ಎಂದು ತೋರಿಸುವುದಕ್ಕಾಗಿ. ಅವರು ಚಿತ್ರಕಲಾ ಪ್ರವೀಣರೂ ಹೌದು.

ಹೀಗೆ ಕಾರಂತ ಮಂದಿರದ ಹಲವಾರು ಮಹಾದ್ವಾರಗಳನ್ನು ಸುತ್ತಿ ನಾವು 'ಕಾದಂಬರೀ ಪ್ರಪಂಚ'ಕ್ಕೆ ಬರುತ್ತೇವೆ. ಅವರ ಸೃಜನಾತ್ಮಕ ಸಾಹಿತ್ಯದ ಬಹುಭಾಗ (36 ಪುಸ್ತಕಗಳು) ಕಾದಂಬರಿಯಾಗಿವೆ ಎಂಬುದಕ್ಕೆ ಮಾತ್ರವಲ್ಲ, ಕಾರಂತರ ಅಂತರಂಗ ಪ್ರದರ್ಶನ, ಅವರ ಜೀವನದೃಷ್ಟಿ ವ್ಯಕ್ತವಾಗುವುದೂ ಈ ಪ್ರಕಾರದಲ್ಲೇ ಎಂಬುದಕ್ಕಾಗಿ ಗ್ರಂಥದ ಸುಮಾರು ಮೂರರಲ್ಲೊಂದು ಭಾಗ ಈ ವಿಭಾಗಕ್ಕೆ ಮೀಸಲಿರುವುದು ಸಹಜವೇ ಆಗಿದೆ. ಗ್ರಂಥದ ಅತಿ ಮಹತ್ವದ ಲೇಖನಗಳೂ ಇದರಲ್ಲೇ ಇವೆ.

'ವಿಚಿತ್ರ ಕೂಟ' ಮತ್ತು 'ಭೂತ' ಎಂಬ ಎರಡು ಪತ್ತೇದಾರಿ ಕಾದಂಬರಿಗಳ ಮೂಲಕ ಕಾದಂಬರೀ ಪ್ರಪಂಚವನ್ನು ಹೊಕ್ಕು, ಉಗ್ರಾಣ ಮಂಗೇಶರಾಯರ ಇದು ನಿರರ್ಥಕ ಸಾಹಿತ್ಯವೆಂಬ ಟೀಕೆಯ ಸತ್ಯತ್ವವನ್ನು ಗ್ರಹಿಸಿ ಆ ಸಾಹಿತ್ಯ ಪ್ರಕಾರಕ್ಕೆ ತಿಲಾಂಜಲಿ ಕೊಟ್ಟ ಮೇಲೆ ಕಾರಂತರು ಬರೆದ ಎರಡೂವರೆ ಡಜನ್ ಕಾದಂಬರಿಗಳು ಬಹುಮಟ್ಟಿಗೆ ಕಾರಂತರ ಜೀವನದರ್ಶನದ ಬೆಳವಣಿಗೆಯ ಮೈಲುಕಲ್ಲುಗಳೇ ಆಗಿವೆ. ಶ್ರೀ ಎಲ್. ಎಸ್. ಶೇಷಗಿರಿರಾವ್ ಅವರೆನ್ನುವಂತೆ, "ಕಲೆಗಾಗಿ ಕಲೆ ಎಂಬುದನ್ನು ಕಾರಂತರು ಎಂದೂ ಒಪ್ಪಿಲ್ಲ. ಅವರ ದೃಷ್ಟಿಯಲ್ಲಿ ಸಾಹಿತ್ಯ ಮನಸ್ಸಿಗೆ ಪರಿಪಕ್ವತೆಯನ್ನು ತರುವ ಸಾಧನಗಳಲ್ಲಿ ಒಂದು." ಅವರ ಕಾದಂಬರಿಗಳು ಈ ಪರಿಪಾಕದ ಬೇರೆ ಬೇರೆ ಹಂತಗಳ ಮತ್ತು ಬೇರೆ ಬೇರೆ ಕಲೆಗಳ ನಿರಂತರ ಅನುಸಂಧಾನ ರೂಪವಾಗಿವೆ. ಬದುಕಿಗೆ ಅರ್ಥವೊಂದುಂಟೆ? ಇದ್ದರೆ ಅದೇನು? ಪ್ರಾರಂಭದ 'ಸರಸಮ್ಮನ ಸಮಾಧಿ'ಯಿಂದ ಹಿಡಿದು ತೀರ ಈಚೆಗಿನ 'ಮೂಕಜ್ಜಿಯ ಕನಸುಗಳು'ವರೆಗೂ ಈ ಅರ್ಥಾನುಸಂಧಾನ ಅವರ ಕಾದಂಬರಿಗಳ ಕೇಂದ್ರ ವಿಷಯವಾಗಿದೆ. ತಮ್ಮ ಜೀವನದ ಅಸಂಖ್ಯ ಮುಖದ ಚಟುವಟಿಕೆಗಳಿಂದಲೂ ಕಾಲಿಗೆ ಗಾಲಿ ಕಟ್ಟಿಕೊಂಡವರಂತೆ ದೇಶ ಸುತ್ತುವ ಲವಲವಿಕೆಯಿಂದಲೂ ದೊರೆತ ನಾನಾ ವ್ಯಕ್ತಿ, ಸನ್ನಿವೇಶ, ಪರಿಸರಗಳ, ಪರಿಚಯುಗಳ ಅನುಭವದ ಪ್ರಪಂಚದಲ್ಲಿ ಈ ಅರ್ಥಾನ್ವೇಷಣೆಗೆ ಪಾತ್ರಗಳನ್ನು ಅವರು ಆಯ್ದುಕೊಂಡಿದ್ದಾರೆ.

ಬ್ರಹ್ಮಚರ್ಯೋಪದೇಶ ಮಾಡುತ್ತ ತಿರುಗುತ್ತಿದ್ದ ಕಾರಂತರು ಆ ಪರಿವ್ರಾಜಕತ್ವಕ್ಕೆ ಶರಣುಹೊಡೆದು ತಮ್ಮ ದಾರಿ ಹುಡುಕತೊಡಗಿದಾಗಿನಿಂದಲೇ ಕಾರಂತರು ಒಂದು ನಿಶ್ಚಯ ಮಾಡಿಕೊಂಡಂತಿದೆ. ದೇವರೊಬ್ಬನಿದ್ದಾನೋ ಇಲ್ಲವೋ, ಮಾನವ ಈ ಪ್ರಪಂಚಕ್ಕೆ ಬಂದ ಮೇಲೆ ತನ್ನ ಬದುಕಿಗೆ ತಾನೇ ಅರ್ಥವನ್ನು ಹುಡುಕಿಕೊಳ್ಳಬೇಕು. ಮನುಷ್ಯ ಮಾಡಿಕೊಂಡ ಅರ್ಥ ಹೊರತು ಬೇರೆ ಅರ್ಥ ಬದುಕಿಗೆ ಇರಲಾರದು ಎಂದು ಅಸ್ತಿತ್ವವಾದಿಗಳೊಡನೆ ಅವರೂ ಸಹಮತರು. ಆದರೆ ಈ ಅರ್ಥವನ್ನು ಅನುಸಂಧಾನ ಮಾಡದೆ ಇರುವ ಜೀವನ ಎಂದೂ ನಿಜವಾದ ಜೀವನ ಎನಿಸಲಾರದು.

ಆ ಅರ್ಥ ಏನು? ಬದುಕು ಇದೆ, ಆದ್ದರಿಂದ ಅದನ್ನು ಬದುಕಬೇಕು. ಬದುಕಿನಿಂದ ಪಲಾಯನ ಮಾಡಿ ಪಾರತ್ರಿಕ ಸಾಧನೆಯಲ್ಲಿ ಅಡಗಿಕೊಳ್ಳುವವರ ಮೇಲೆ ಕಾರಂತರಿಗೆ ಸಹಾನುಭೂತಿಯಿಲ್ಲ. ಬದುಕನ್ನು ನೇರವಾಗಿ ಎದುರಿಸಿ ಸಂಕಷ್ಟಗಳ ಮುಂದೆ ಎದೆಗೆಡದೆ ಹೋರಾಡಿ ತನ್ನ ಬಾಳನ್ನು ಹಸನು ಮಾಡಿಕೊಳ್ಳಬೇಕು.

ಇದನ್ನು ಅತ್ಯುತ್ತಮವಾಗಿ ಸಾಧಿಸುವುದು ಹೇಗೆ? ಕಾರಂತರ ಉತ್ತರ – ನಂಬಿಕೆ. ಬದುಕಿನ ವಿಷಯವಾಗಿ ಕೆಲ ಗಟ್ಟಿ ನಂಬಿಕೆಗಳನ್ನು ಇಟ್ಟುಕೊಂಡು ಅವುಗಳ ಬೆಳಕಿನಲ್ಲಿ ದುಡಿದಾತನೇ ತನ್ನ ಬದುಕಿಗೆ ಅರ್ಥವನ್ನು ಸೃಷ್ಟಿಸಬಲ್ಲ. ಕೇವಲ ಬೌದ್ಧಿಕ ನಂಬಿಕೆಗಳನ್ನು ಕಟ್ಟಿಕೊಂಡು, ಭಾಷಣದ, ಚರ್ಚೆಯ ವಿಷಯವಾಗಿ ಮಾತ್ರ ಅವುಗಳನ್ನುಪಯೋಗಿಸಿ, ತನ್ನ ಬಾಳಿನಲ್ಲಿ ಅವುಗಳನ್ನು ಆಚರಣೆಗೆ ತರಲಾರದ ಬುದ್ಧಿವಾದಿಗಳ ಬಗ್ಗೆಯೂ ಕಾರಂತರ ತಿರಸ್ಕಾರವೇ ಕಾಣಿಸುತ್ತದೆ.

ದೇವರುಂಟೋ ಇಲ್ಲವೋ, ಅದರಿಂದ ಆತ್ಮವುಂಟೋ ಇಲ್ಲವೊ? ಆದ್ದರಿಂದ ಮಾನವನು ರೂಢಿಸಿಕೊಂಡ ನಂಬಿಕೆಗಳು ಒಳಿತೋ ಕೆಡುಕೋ ನಿರ್ಧರಿಸುವುದಕ್ಕೆ ಆ ನಂಬಿಕೆಗಳು ಅವನ ಸುತ್ತಲ ಇತರ ಜನರನ್ನು ಅವನು ಕಾಣುವ ದೃಷ್ಟಿ, ಅವರೊಡನೆ ಸ್ಥಾಪಿಸುವ ಸಂಬಂಧದ ಸ್ವರೂಪವೇ ನಿಕಷವಾಗಬೇಕು. ಈ ಸಂಬಂಧದಲ್ಲಿ ತಿಳಿವಳಿಕೆ, ಸಹಾನುಭೂತಿ, ಸಹಾಯ ಕಂಡುಬಂದರೆ ಅದು ಒಳಿತು, ಇಲ್ಲದಿದ್ದರೆ ವ್ಯರ್ಥ. ಹೀಗೆ ಕಾರಂತರ ಮೌಲ್ಯಗಳು ಮಾನವ ಕೇಂದ್ರಿತವಾಗಿವೆ; ಬಹಿರ್ಮುಖವಾಗಿವೆ.

ಕಾರಂತರ ಜೀವನದೃಷ್ಟಿಯ ಈ ಅಂಶದ ವಿಷಯದಲ್ಲೇ ಆಧುನಿಕ ವಿಮರ್ಶಕರು ಆಕ್ಷೇಪವೆತ್ತುವುದು. ಮನುಷ್ಯನ ಆಂತರಂಗಿಕ ವಿಷಯಗಳಲ್ಲಿ ಕಾರಂತರು ಅನಾಸಕ್ತರಲ್ಲದಿದ್ದರೂ ಮನುಷ್ಯನಿಗೆ ತನ್ನೊಡನೆ ತನಗೆ ಬರುವ ಸಂಬಂಧದ ಸಂಕಟಗಳಲ್ಲಿ ಕಾರಂತರು ಅನಾಸಕ್ತಿ ತೋರುತ್ತಾರೆ. ತನ್ನೊಡನೆ ತಾನು ಶಾಂತಿ ಮಾಡಿಕೊಂಡ ಹೊರತು ಮನುಷ್ಯ ಪ್ರಪಂಚದೊಡನೆ ಸುಕರವಾಗಿ ವ್ಯವಹರಿಸಲಾರ. ಮನುಷ್ಯನನ್ನು ಸಮಾಜಜೀವಿಯೆಂದಲ್ಲದೆ ವ್ಯಕ್ತಿಯನ್ನು ವ್ಯಕ್ತಿಯಾಗಿಯೆ ವಿಶ್ಲೇಷಿಸದೆ ಇರುವುದು ಕಾರಂತರ ಕೊರತೆ. ಅವರ ಕಾದಂಬರಿಗಳಲ್ಲಾಗಲೀ ಇತರ ಬರಹಗಳಲ್ಲಾಗಲಿ ಶೈಲಿಯ ನಯ ನಾಜೂಕು, ಕಾವ್ಯತ್ವ ಕಾಣಿಸದಿರಲು ಕಾವ್ಯದ ಜೀವಾಳವಾದ ಅಂತರಂಗ ಮಥನಕ್ಕೆ – ಚೋಮನ ದುಡಿಯಂಥ ಒಂದೆರಡು ಅಪವಾದಗಳನ್ನು ಬಿಟ್ಟರೆ – ಪ್ರಾಧಾನ್ಯವಿಲ್ಲದಿರುವುದು ಕಾರಣ ಎಂದು ಈ ವಿಮರ್ಶಕರ ಅಭಿಮತವಾಗಿದೆ.

ಈ ಅಭಿನಂದನ ಗ್ರಂಥದ ಒಂದು ಹೆಚ್ಚಳವೆಂದರೆ ಇದೇ. ಅದು ಭಕ್ತರ ಸ್ತುತಿ ಪಾಠದ ಸಮುಚ್ಚಯವಾಗಿಲ್ಲ. ಸ್ತುತಿಪಾಠಗಳು ಇಲ್ಲವೇ ಇಲ್ಲವೆಂದಲ್ಲ. ಸಪ್ರಮಾಣವಾಗಿ ಸವಿಶ್ಲೇಷಣವಾಗಿ ಬರೆಯಲು ವೇಳೆಯಿಲ್ಲದ ಕೆಲ ಹಿರಿಯರ ಲೇಖನಗಳಲ್ಲಿ ಸ್ತುತಿಪಾಠ ಕತ್ವವಿದೆ. ಆದರೆ ಹೆಚ್ಚಿನ ಲೇಖನಗಳಲ್ಲಿ ಕಾರಂತರ ಗುಣಗಳ ಕೂರ್‌ಬೆಳಕಿನಲ್ಲಿ ಅವರ ಕೊರತೆಗಳಿಗೆ ಕಣ್ಮುಚ್ಚುವ ವೃತ್ತಿ ಇಲ್ಲ. ಯಕ್ಷಗಾನ ವಿಚಾರದಲ್ಲಿ ಪ್ರೊ। ಶ್ರೀಧರರಾಗಲಿ, ಗೀತನಾಟಕಗಳ ವಿಷಯದಲ್ಲಿ ಗೌರೀಶ ಕಾಯ್ಕಿಣಿಗಳಾಗಲಿ, ವಿಜ್ಞಾನ ಸಾಹಿತ್ಯ ವಿಷಯ ದಲ್ಲಿ ಜೆ. ಆರ್. ಲಕ್ಷ್ಮಣರಾಯರಾಗಲಿ, ಗದ್ಯಶೈಲಿಯ ವಿಷಯದಲ್ಲಿ ಏರ್ಯ ಲಕ್ಷ್ಮೀನಾರಾ ಯಣ ಆಳ್ವರಾಗಲಿ, ಕಾದಂಬರಿಗಳ ವಿಷಯದಲ್ಲಿ ಬರೆದ ಎಲ್. ಎಸ್. ಶೇಷಗಿರಿರಾವ್, ಶಂಕರ ಮೊಕಾಶಿ, ಎಂ. ಜಿ. ಕೃಷ್ಣಮೂರ್ತಿ, ಡಾ। ಅನಂತಮೂರ್ತಿ, ಡಾ। ಕುರ್ತಕೋಟಿ, ಜಿ. ಎಸ್. ಆಮೂರ, ಅಡಿಗ, ಡಾ। ಶಾಂತಿನಾಥ ದೇಸಾಯಿ, ಸುಮತೀಂದ್ರ ನಾಡಿಗ ಇವರೆಲ್ಲರೂ ವಿಶ್ಲೇಷಣೆಯಲ್ಲಿ ಸ್ವತಂತ್ರರಾಗಿಯೇ ವರ್ತಿಸಿದ್ದಾರೆ. (ಕೆಲ ಸಲ ಅವರ ವಿಮರ್ಶೆಗಳೇ ವಿಮರ್ಶನೀಯವಾಗಿರುತ್ತವೆ ಎಂಬ ಮಾತು ಬೇರೆ.)

ಆದ್ದರಿಂದ ಈ ಗ್ರಂಥ ಕಾರಂತರ ಹಿರಿಮೆಯನ್ನರಿಯಬೇಕೆಂಬವರಿಗೆ ಮಾತ್ರವಲ್ಲ, ಅವರ ಸಾಹಿತ್ಯದ ಮೌಲ್ಯವನ್ನು ನಿರ್ವಿಕಾರವಾಗಿ ಗ್ರಹಿಸಬೇಕೆಂಬವರಿಗೂ ಅನಿವಾರ್ಯ ವಾದ ಕೈಪಿಡಿಯಾಗಿದೆ. ಸಂಪಾದಕರು ಮತ್ತು ಸಮಿತಿಯವರು ಇದಕ್ಕಾಗಿ ಅಭಿನಂದ ನಾರ್ಹರಾಗಿದ್ದಾರೆ. ಸಂಪಾದಕೀಯ ನೀಲಿ ಪೆನ್ಸಿಲು ಹೆಚ್ಚು ಕಠೋರವಾಗಿ ಸಂಚರಿಸಿದ್ದರೆ 'ಗದ್ಯದ ಗತಿ' ಮೊದಲಾದ ಕೆಲ ಲೇಖನಗಳಲ್ಲಿ ಬರುವ ಪುನರುಕ್ತಿಗಳನ್ನು ತಪ್ಪಿಸಬಹು ದಾಗಿತ್ತೆಂದು ತೋರುತ್ತದಷ್ಟೇ. ಸಾಹಸಪೂರ್ಣವಾದ ಕಾರಂತರ ಜೀವನಕ್ಕೆ ಕೊಟ್ಟ ಈ ಕಾಣಿಕೆಯೂ ದೊಡ್ಡ ಸಾಹಸವೇ ಆಗಿದೆ, ಗಾತ್ರ ವೈವಿಧ್ಯ ಮತ್ತು ತೂಕ– ಮೂರೂ ದೃಷ್ಟಿಗಳಿಂದ.

# ಅಪೂರ್ವ ಅಭಿನಂದನ ಗ್ರಂಥ 'ಕಾರಂತಪ್ರಪಂಚ'

'ಪ್ರಪಂಚ'ದಲ್ಲಿ

**ನಾ. ಡಿ'ಸೋಜ**

ದಕ್ಷಿಣ ಕನ್ನಡ ಜಿಲ್ಲೆಯ ಜನ ಅದೇನನ್ನೇ ಮಾಡಿದರೂ ಅಚ್ಚುಕಟ್ಟಾಗಿ ಮಾಡುತ್ತಾರೆ. ಒಂದು ತಿಂಗಳ ಹಿಂದೆ ಉಡುಪಿಯಲ್ಲಿ ನಡೆದ ಶಿವರಾಮ ಕಾರಂತರ ಸನ್ಮಾನ ಸಮಾರಂಭವು ಈ ಮೇಲಿನ ಮಾತಿಗೆ ಒಂದು ಉದಾಹರಣೆ. ಈ ಸಮಯದಲ್ಲಿಯೇ ಪ್ರಕಟವಾದ 'ಕಾರಂತ ಪ್ರಪಂಚ' ಅಭಿನಂದನಾ ಗ್ರಂಥ ಕೂಡ ಕನ್ನಡ ಸಾಹಿತ್ಯದಲ್ಲಿ ಬಹಳ ಕಾಲ ನಿಲ್ಲತಕ್ಕಂತಹ ಅಪೂರ್ವವಾದ, ಸುಂದರವಾದ, ಶ್ರೇಷ್ಠವಾದ ಒಂದು ಗ್ರಂಥ. ಶಿವರಾಮ ಕಾರಂತರು ಕನ್ನಡ ನಾಡು, ನುಡಿ, ಜನರಿಗೆ ಮಾಡಿರುವ ಉಪಕಾರದ ಸ್ಮರಣೆಯನ್ನು, ಅರಿವನ್ನು, ಈ ಗ್ರಂಥದ ಮೂಲಕ ಕನ್ನಡದ ಜನ ಅವರಿಗೆ ಕೃತಜ್ಞತೆಗಳೊಂದಿಗೆ ಅರ್ಪಿಸಿದ್ದಾರೆ.

ಕಾರಂತರ ಸಾಹಿತ್ಯ ಕಲಾ ಪ್ರತಿಭೆ, ಅವರು ಕಂಡ, ಬಣ್ಣಿಸಿದ ಹೊಸ ಪ್ರಪಂಚಗಳ ಬಗ್ಗೆ ರಾಶಿ ರಾಶಿ ಪುಸ್ತಕಗಳನ್ನು ಬರೆಯುವುದು ಸಾಧ್ಯವಿದೆಯಾದರೂ ನಮ್ಮಲ್ಲಿ ಈ ಬಗೆಯ ಯಾವ ಪುಸ್ತಕಗಳೂ ಬಾರದೇ ಹೋಗಿರುವುದು ಸಂಕಟದ ವಿಷಯ. ಕಾರಂತರ ಕಾದಂಬರಿಗಳ ಕುರಿತು ಎಸ್. ಅನಂತನಾರಾಯಣರೊಬ್ಬರೇ ಒಂದು ಪುಸ್ತಕವನ್ನು ಬರೆದರು. ಕಾರಂತರ ಕುರಿತು, ಅವರು ಇತರ ಚಟುವಟಿಕೆಗಳ ಕುರಿತು ಬಿಡಿ ಲೇಖನಗಳು ಅಲ್ಲಲ್ಲಿ ಪ್ರಕಟವಾಗಿವೆಯಾದರೂ ಕಾರಂತರ ಕುರಿತು ಬಂದಿರುವ ಬೃಹದ್ ಗ್ರಂಥ ಇದೇ ಮೊದಲನೆಯದು. 550 ಪುಟಗಳ ಈ ಕೃತಿ ವ್ಯಕ್ತಿ ಪ್ರಪಂಚ, ಕಲಾ ಪ್ರಪಂಚ, ಸಾಹಿತ್ಯ ಪ್ರಪಂಚ, ಕಾದಂಬರಿ ಪ್ರಪಂಚ, ಕೃತಿ ಮತ್ತು ಲೇಖನದರ್ಶಿಕೆ ಎಂಬ ಐದು ವಿಭಾಗಗಳನ್ನು ಹೊಂದಿದೆ. ಅಲ್ಲಲ್ಲಿ ಹಲವಾರು ಛಾಯಾ ಚಿತ್ರಗಳೂ ಇವೆ.

ဝဝ ဝဝ ဝဝ

ಹಿರಿಯರಾದ ಡಿ.ವಿ.ಜಿ., ಮಾಸ್ತಿ, ಬೇಂದ್ರೆ, ವಿ.ಸೀ., ಶಂಬಾ, ಕಾರಂತರನ್ನು ಹರಸಿದ್ದಾರೆ. ಎ. ಎನ್. ಮೂರ್ತಿರಾಯರು, ಮಾಳವಾಡರು, ಸಿಂಪಿಯವರು, ಪರಮೇಶ್ವರ ಭಟ್ಟರು, ಹರಿದಾಸ ಭಟ್ಟ, ದೇಜಗೌ ಮುಂತಾದವರು ಕಾರಂತರ ವ್ಯಕ್ತಿತ್ವವನ್ನು, ಅಂತಃಕರಣವನ್ನು, ಅವರ ಹೃದಯವಂತಿಕೆಯನ್ನು, ಬೌದ್ಧಿಕ ಹೆಚ್ಚಳಿಕೆಯನ್ನು, ಕಂಡು ಅನುಭವಿಸಿ, ಬಣ್ಣಿಸಿದ್ದಾರೆ. ಪರಮೇಶ್ವರ ಭಟ್ಟರು – ನಿನ್ನೆಯನ್ನು ನೋಡಿ ಇಂದನ್ನು ತಿದ್ದಿಕೊಂಡು ನಾಳೆಗೆ ಬುದ್ಧಿ ಹೇಳುವ ಗುರು ಕಾರಂತರು – ಎಂದು ಹೇಳಿ, ಮುಂದೆ:—

"ಕಾರಂತರೇ ನಮ್ಮ ಕೊಂಬು ನಮ್ಮ ಕಹಳೆ
ಕಾರಂತರೇ ನಮ್ಮ ಧ್ರುವತಾರೆ
ಕಾರಂತರೇ ನಮ್ಮ ಉತ್ತರ ಮುಖಿ
ಕಾರಂತರನ್ನು ಪಡೆದ ಕನ್ನಡ ಪರಮಸುಖಿ"

ಎಂದಿದ್ದಾರೆ.

ಸೋದರ ಶಿವರಾಮನ ಬಗ್ಗೆ ಕೋಟ ರಾಮಕೃಷ್ಣ ಕಾರಂತರೂ, ಕೋ. ಲ. ಕಾರಂತರೂ ಬರೆದಿದ್ದರೆ, ಉಗ್ರಾಣ ಮಂಗೇಶರಾಯರು ಕಾರಂತರ ಸ್ನೇಹವನ್ನು, ನಾಗೇಶರು "ಅವರ ಸೌಜನ್ಯ"ವನ್ನು ನೆನಪಿಗೆ ತಂದುಕೊಂಡಿದ್ದಾರೆ.

ಗುಂಡ್ಮಿ ರಾಮಕೃಷ್ಣ ಐತಾಳರು, ಕಾರಂತರು ಇಳಿವಯಸ್ಸಿನಲ್ಲಿ ಯಕ್ಷಗಾನ ಕುಣಿದು, ನಿರ್ದೇಶಿಸಿ, ಅನ್ನ ಆಹಾರ, ನಿದ್ರೆಗಳನ್ನು ಬಿಟ್ಟು ಆ ಕಲಾವಿದರೊಂದಿಗೆ ಪ್ರಯಾಣ ಮಾಡಿ ಜನ ಅಷ್ಟೊಂದು ಪ್ರೋತ್ಸಾಹ ಕೊಡದಿದ್ದಾಗ್ಯೂ ಬೇಸರ ಪಡದೆ ಇರುವುದನ್ನು ಕಂಡು ಕಾರಂತರಿಗೆ "ಈ ಎಲ್ಲವನ್ನೂ ನಿಲ್ಲಿಸಬಾರದೇ" ಎಂದು ಬರೆದಾಗ ಕಾರಂತರು, "ಕಲೆ – ಅದೊಂದು ಮೆಚ್ಚಿನ ಕೆಲಸ... ಶರೀರ ಅದರಿಂದ ದಣಿಯುವುದು ನಿಜ. ಆನಂದ ಪಡುವುದೂ ಅಷ್ಟೇ ನಿಜ. ಕುಣಿಯುತ್ತಲೇ ಉಸಿರು ಹೋಗಬಾರದೆಂದಲ್ಲ. ಕುಳಿತು ಸಾಯುವುದಕ್ಕಿಂತ, ಕಾಯಿಲೆ ನರಳುವುದಕ್ಕಿಂತ, ಅದು ಮೇಲಲ್ಲವೆ?... ನನ್ನ ದುಡಿತಕ್ಕೆ ತಕ್ಕ ಮಾನ್ಯತೆಯಿದೆ ಎಂದು ಅನ್ನಿಸುವುದಿಲ್ಲ. ಆದರೂ ಮಾಡುತ್ತಿದ್ದೇನೆ. ಅದರಿಂದ ಇತರರಿಗೆ ಶಿಕ್ಷಣ ಲಾಭ ಸಿಗದೆ ಹೋದರೂ ನನಗೆ ಸಿಕ್ಕುತ್ತದೆ ಎಂಬ ನಂಬಿಕೆ. ನಾಲ್ಕು ಮಂದಿ ನಿಮ್ಮಂತಹ ಸ್ನೇಹಿತರು, ವಯಸ್ಸಾದವರು, ಆಗದವರು ನನ್ನ ಬದುಕಿಗೆ ಗೆಲವನ್ನು ಒದಗಿಸುತ್ತಿದ್ದಾರೆ. ಇಲ್ಲವಾದರೆ ಎಂದೋ ಮನಸ್ಸು ಕಹಿಗೊಂಡು ಕೆಲಸ ಮಾಡದಿರುವ ಹಟ ಹುಟ್ಟಬೇಕಿತ್ತು" ಎಂದು ಬರೆದುದನ್ನು ಓದಿದಾಗ ಮನಸ್ಸು ಹೊಯ್ದಾಡುತ್ತದೆ.

ಸುಮಾರು ಇಪ್ಪತ್ತೇಳು ಜನ, ಕಾರಂತರ ಜೀವನಕ್ಕೆ ಸಂಬಂಧಪಟ್ಟ ರಸಪ್ರಸಂಗ ಗಳನ್ನು ಬಣ್ಣಿಸಿದ್ದಾರೆ. ಇಲ್ಲಿ ಕೆಲವಾರು ರಸವಿಲ್ಲದ ಪ್ರಸಂಗಗಳೂ ನುಸುಳಿಕೊಂಡಿರು ವುದು ಈ ಗ್ರಂಥದ ಶ್ರೇಷ್ಠತೆಯ ದೃಷ್ಟಿಯಿಂದ ವಿಷಾದನೀಯ.'

ಇನಾಮುದಾರ ಹಾಗೂ ಹರಿದಾಸ ಭಟ್ಟರ ಸಂದರ್ಶನಗಳು ಈ ಅಭಿನಂದನಾ ಗ್ರಂಥಕ್ಕೆ ಕಿರೀಟವಿಟ್ಟಂತೆ. ಕಾರಂತರ ಕಾದಂಬರಿಗಳ ಬಗ್ಗೆ, ಈ ಕಾದಂಬರಿಗಳ ಹಿನ್ನೆಲೆ, ದೃಷ್ಟಿ, ತತ್ವ, ಅನುಭವ, ಕಲ್ಪನೆ ಇತ್ಯಾದಿ ಎಲ್ಲ ವಿಷಯಗಳ ಬಗ್ಗೆ ಕಾರಂತರು ಸಂದರ್ಶನ ದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹರಿದಾಸ ಭಟ್ಟರು ರಾಜಕೀಯ, ವಿದ್ಯಾಭ್ಯಾಸ, ಇಂಗ್ಲೀಷ್ ಮಾಧ್ಯಮ, ಯಕ್ಷಗಾನಗಳ ಬಗ್ಗೆ ಕಾರಂತರ ಅಭಿಪ್ರಾಯ ಗಳನ್ನು ಸಂದರ್ಶನದ ಮೂಲಕ ಓದುಗರ ಎದುರು ಇಟ್ಟಿದ್ದಾರೆ.

oo oo oo

ಕಲಾಪ್ರಪಂಚ ಕಾರಂತರಿಗೆ ಪ್ರಿಯವಾದ ಯಕ್ಷಗಾನದ ಕುರಿತೇ ಹೆಚ್ಚಿನ ಲೇಖನ ಗಳನ್ನು ಹೊಂದಿದೆ. ಕಾರಂತರ ಯಕ್ಷಗಾನ ಬ್ಯಾಲೆಗಳು, ಕಾರಂತರು ಮಾಡಿಕೊಂಡ

ಬದಲಾವಣೆಗಳು ಇತ್ಯಾದಿ ವಿಷಯಗಳ ಬಗ್ಗೆ ಬೈಕಾಡಿಯವರು, ಕೆ. ವಿ. ಸುಬ್ಬಣ್ಣ ನವರು. ವಿಠಲ ಶಾಸ್ತ್ರಿಯವರು, ಶ್ರೀಧರ್ ಮತ್ತಿತರರು ಈ ವಿಭಾಗದಲ್ಲಿ ಬರೆದಿದ್ದಾರೆ.

○○ ○○ ○○

ಮೂರನೆಯದಾದ ಸಾಹಿತ್ಯ ಪ್ರಪಂಚ ಕೆಲವೊಂದು ಕಾರಣಗಳಿಂದಾಗಿ ಪರಿ ಪೂರ್ಣವಾಗಿದೆ. ಸೇವ ನಮಿರಾಜ ಮಲ್ಲರು ಪತ್ರಿಕೋದ್ಯಮಿ ಕಾರಂತರ ಪರಿಚಯ ಮಾಡಿಕೊಟ್ಟಿದ್ದಾರೆ. ಕಾರಂತರ ಕಲಾವಿಮರ್ಶೆ, ಸಾಹಿತ್ಯ ವಿಮರ್ಶೆ, ಪತ್ರಿಕಾ ಧರ್ಮದ ನಿಷ್ಠೆ, ಕೆಚ್ಚೆದೆ ಇದೆಲ್ಲದರ ಚಿತ್ರವನ್ನೂ ಈ ಲೇಖನದಲ್ಲಿ ಕಾಣಬಹುದು. ಕಾರಂತರ ಬಾಲಪ್ರಪಂಚ, ಅದ್ಭುತ ಜಗತ್ತು, ವಿಜ್ಞಾನ ಪ್ರಪಂಚಗಳ ಪರಿಚಯ, ಕಾರಂತರ ಆತ್ಮಕಥೆ, ಪ್ರಬಂಧಗಳು, ಗೀತನಾಟಕಗಳು, ಕಾರಂತರ ಗದ್ಯದ ಗತಿ, ಸಣ್ಣಕತೆ ಈ ಹಲವು ವಿಷಯಗಳನ್ನು ಕುರಿತು ಕನ್ನಡದ ಖ್ಯಾತ ಲೇಖಕರು ಬರೆದಿದ್ದಾರೆ.

ಕಾರಂತರು 4ನೇ ಫಾರ್ಮಿನಲ್ಲಿರುವಾಗಲೇ "ವಿಯೋಗಿನಿ" ಎಂಬ ಕಾದಂಬರಿ ಯನ್ನು ಬರೆಯಹೊರಟಿದ್ದನ್ನು ಜಿ. ಎಚ್. ನಾಯಕರು ಹೇಳಿದ್ದಾರೆ. ಅನಂತರ ಕಾರಂತರು ತಮ್ಮ ಪತ್ರಿಕೆಗಾಗಿ ವಿಚಿತ್ರಕೂಟ (1923), ಭೂತ (1924) ಪತ್ತೇದಾರಿ ಕಾದಂಬರಿಗಳ ಸಂಗ್ರಹಿತ ಕತೆ ಅಭಿನಂದನಾ ಗ್ರಂಥದಲ್ಲಿ ಓದಲು ಸಿಗುತ್ತದೆ. ಕಾರಂತರ ವಿಡಂಬನಾ ಕಾದಂಬರಿಗಳ ಕುರಿತು ವರದರಾಜರಾವ್ ಬರೆದಿದ್ದಾರೆ. ಎಂ. ಜಿ. ಕೃಷ ಮೂರ್ತಿಯವರು, ಕುರ್ತಕೋಟಿಯವರು, ದೇಜಗೌ, ಅನಂತಮೂರ್ತಿಯವರು ಕಾರಂತರ ಕಾದಂಬರಿಗಳಲ್ಲಿಯ ಕನಸುಗಾರಿಕೆ, ಚಿಂತನ, ಮಂಥನ, ಸಂವೇದನೆ, ಸಮಾಜ ಚಿತ್ರಣ, ವಾಸ್ತವತೆಯನ್ನು ಕುರಿತು ಜಿಜ್ಞಾಸೆ ನಡೆಸಿದ್ದಾರೆ.

ಮುಂದಿನ ಪುಟಗಳಲ್ಲಿ ಕಾರಂತರ ಖ್ಯಾತ ಕಾದಂಬರಿ "ಮರಳಿ ಮಣ್ಣಿಗೆ"ಯನ್ನು ಡಿ. ಎಲ್. ಎನ್, ಮೂರ್ತಿರಾವ್, ಆಮೂರ, ಗಿರಡ್ಡಿ ಹಾಗೂ ಅಡಿಗರು ವಿಮರ್ಶೆ– ಪುನರ್ವಿಮರ್ಶೆ ಮಾಡಿರುವದಾದರೆ ಕಾರಂತರ ಮತ್ತೂ ಒಂದು ಖ್ಯಾತ ಕೃತಿ "ಬೆಟ್ಟದ ಜೀವ"ವನ್ನು ಆಮೂರ, ದ್ವಾರಕಾನಾಥರೂ, "ಅಳಿದ ಮೇಲೆ" ಕಾದಂಬರಿಯನ್ನು ಸುಮ ತೀಂದ್ರ ಹಾಗೂ ಶಾಂತಿನಾಥರೂ ವಿಮರ್ಶಿಸಿದ್ದಾರೆ. ಈ ವಿಭಾಗವು ಸಾಹಿತ್ಯಾಭ್ಯಾಸಿ ಗಳಿಗೆ, ವಿಚಾರವಂತರಿಗೆ, ಸಾಹಿತ್ಯದ ನಿಜವಾದ ಮೌಲ್ಯಗಳನ್ನು ಗುರುತಿಸಬೇಕೆನ್ನುವವ ರಿಗೆ ತುಂಬಾ ಉಪಯೋಗಕರವಾದುದಾಗಿದೆ.

ಕೊನೆಯ ಪುಟಗಳಲ್ಲಿ ಕಾರಂತರ ಎಲ್ಲ ಕೃತಿಗಳ, ಎಲ್ಲ ಬಿಡಿ ಲೇಖನಗಳ ಹೆಸರು. ಪ್ರಕಟವಾದ ವರುಷ ಇತ್ಯಾದಿ ಎಲ್ಲ ವಿವರಗಳೂ ಇವೆ. ಕಾರಂತರ ಏಕಮೇವ ಕವನ ಸಂಗ್ರಹ "ರಾಷ್ಟ್ರಗೀತ ಸುಧಾಕರ" (1924)ದಿಂದ ಆರಂಭವಾದ ಈ ಲಲಿತಸಾಹಿತ್ಯ ಪಟ್ಟಿಯು, ನಾಟಕ. ಸಣ್ಣಕತೆ, ಕಾದಂಬರಿ, ಪ್ರಬಂಧ, ವಿಚಾರ ಸಾಹಿತ್ಯ, ವಿಜ್ಞಾನ, ಕಲೆ, ಅನುವಾದ, ಸಂಪಾದನ, ಇತ್ಯಾದಿ ಎಲ್ಲ ಕಾರಂತ ಕೃತಿಗಳ ಪರಿಚಯವನ್ನೂ ಹೊಂದಿದೆ.

ಮರಳಿ ಮಣ್ಣಿಗೆ ಕಾದಂಬರಿಯು Back to Soil ಎಂದು ಇಂಗ್ಲೀಷಿಗೂ, 'ಮಣ್ಣಿಂ ಮನಿತರುಂ' ಎಂದು ತಮಿಳಿಗೂ, 'ಫಿರ್ ಮಿಟ್ಟೀಕೀ ಓರ್' ಎಂದು

ಹಿಂದೀಗೂ, 'ಮಣ್ಣಿಲೇಕ್ಕ ಮಡಜ್ಞು' ಎಂದು ಮಲೆಯಾಳಿಗೂ ಅನುವಾದ ಹೊಂದಿದೆ.

೦೦ ೦೦ ೦೦

'ಕಾರಂತ ಪ್ರಪಂಚ' ಕಟ್ಟಿಂಗೇರಿ ಕೃಷ್ಣ ಹೆಬ್ಬಾರರ ಎರಡು ಚಿತ್ರಗಳಿಂದ ಅಲಂಕೃತ ಗೊಂಡಿದೆ. ಖ್ಯಾತ ಕಲಾವಿದ ಹೆಬ್ಬಾರರು ಕಾರಂತರ ಆತ್ಮೀಯ ವ್ಯಕ್ತಿ. ಪರಸ್ಪರ ಅರ್ಥ ವಿಸಿಕೊಂಡು ನಿಕಟವರ್ತಿಗಳಾಗಿರುವ ಈ ವ್ಯಕ್ತಿಗಳ ಕಲಾ ಮಾಧ್ಯಮ ಬೇರೆ ಬೇರೆಯಾ ದರೂ ಉದ್ದೇಶ ಒಂದೇ. ಹೆಬ್ಬಾರರ ವರ್ಣಚಿತ್ರ ಹಾಗೂ ಒಂದು ರೇಖಾ ಚಿತ್ರ ಈ ಗ್ರಂಥದ ಅತ್ಯಮೂಲ್ಯ ಕೃತಿಗಳು. ರೇಖಾ ಚಿತ್ರದ ಚತುರ್ಮುಖದ ಕಾರಂತ ಲೇಖಣಿಕೆ ಯನ್ನು ಕೈಯಲ್ಲಿ ಹಿಡಿದು ತಿಂಗಳಿಗೆ ನೆಗೆದಿದ್ದಾನೆ. ಕೈಗಳಲ್ಲಿ ಸಾಹಿತ್ಯ ಕೃತಿಗಳಿವೆ. ಕಾರಂತರ ಮನೋನಿರ್ಧಾರ, ಗಡಸುತನ, ನೋವು – ನಲಿವು, ಶಾಂತಿ-ಕ್ರಾಂತಿಗಳ ದ್ಯೋತಕ.

ಒಳಗಿನ ಛಾಯಾ ಚಿತ್ರಗಳ ಸೊಬಗೇ ಬೇರೆ – ಕಾರಂತರ ತಂದೆ, ತಾಯಿ, ಗುರು ಗಳು, ಸ್ನೇಹಿತರು, ಕಾರಂತರು ಹುಟ್ಟಿದೂರು, ಅವರ ಬಾಲವನ, ಮುಕ್ತದ್ವಾರದ ಕಾಲ ಯಮನಾಗಿ ಕುಣಿಯುತ್ತಿರುವ ಕಾರಂತ, ಶಬರ ಶಂಕರ ವಿಲಾಸದಲ್ಲಿ ಶ್ರೀಮತಿ ಲೀಲಾ ಮತ್ತು ಕಾರಂತರು, ಯಕ್ಷಗಾನ ಕುಣಿಯುತ್ತಿರುವ ಕಾರಂತರು ಈ ಹಲವಾರು ಚಿತ್ರ ಗಳು ನೋಡುವಂತಹವು. ಕಾರಂತರು ಉತ್ತಮ ಚಿತ್ರಕಾರರು ಹೌದಾದರೂ ಅವರು ಬರೆದ ಒಂದೆರಡು ಚಿತ್ರಗಳು ಇಲ್ಲಿದ್ದರಾಗುತ್ತಿತ್ತು. "ಕಾರಂತ ಪ್ರಪಂಚ"ದ ಹಿಂದಿನ ಶಕ್ತಿ ಕು. ಶಿ. ಹರಿದಾಸ ಭಟ್ಟರು. ಈ ಕೃತಿ ಇಷ್ಟೊಂದು ಕಲಾತ್ಮಕವಾಗಿ, ಫಲಪ್ರದವಾಗಿ, ಯಶಸ್ವಿಯಾಗಿ ಹೊರಬರಲು ಕಾರಣ ಅವರು.

ಆದರೆ ಇಲ್ಲೂ ಅದೇನೋ ಒಂದು ಕೊರತೆ. ಕಾರಂತರ ಅದ್ಭುತ ವ್ಯಕ್ತಿತ್ವದ ಆಳ-ಎತ್ತರ, ವಿಸ್ತಾರ-ಹರವು, ಇನ್ನೂ ಇದ್ದೀತು. ಕಾರಂತರ ಜೀವನದ ರಸಪ್ರಸಂಗ ಗಳು, ಅಮೂಲ್ಯ ಘಟನೆಗಳು ಮತ್ತೂ ಇರಬಹುದು. ಅವುಗಳನ್ನೆಲ್ಲ ಒಂದೆಡೆಯಲ್ಲಿ ಸಂಗ್ರಹಿಸಿ ಕೊಟ್ಟರೆ ಓದಬಹುದು ಅನ್ನುವ ಆಸೆ. ಕಾರಂತರಿಗೆ ಅರುವತ್ತು ವರುಷ ವಾದಾಗ, 'ಕಾರಂತ ಅರುವತ್ತು' ಅನ್ನುವ ಗ್ರಂಥ ಕೊಟ್ಟವರೇ ಈಗ ಈ ಕಾರಂತ ಪ್ರಪಂಚ ವನ್ನು ನೀಡಿದ್ದಾರೆ. ಕಾರಂತಾಭಿಮಾನಿಗಳು ಈಗ ಇಷ್ಟಕ್ಕೇನೆ ತೃಪ್ತರಾಗದೆ ಕಾರಂತರ ಬಗ್ಗೆ ಇನ್ನೂ ದೊಡ್ಡ ಗ್ರಂಥವನ್ನು ಹೊರ ತರಲೆಂದು ಹಾರೈಸಿದರೆ ತಪ್ಪಾಗದು. ನಮ್ಮ ಜನ ಕಾರಂತರನ್ನು ಅರಿತರೆ, ಅರ್ಥ ಮಾಡಿಕೊಂಡರೆ, ಸಾಕು. ಕಾರಂತರು ಇಲ್ಲಿ ಹುಟ್ಟಿದ್ದು ಸಾರ್ಥಕವಾದ ಹಾಗೆ.

# ಓಲೆಗಳು – ಬಂದವರಿಂದ

ವಿ. ಸೀತಾರಾಮಯ್ಯ ಬೆಂಗಳೂರು

ಈ ಊರಿಗೆ ರಾತ್ರಿ 12-30ಕ್ಕೆ ಬಂದು ಸೇರಿದೆವು – ದಾರಿಯಲ್ಲಿ ಆಗಾಗ ನಿಂತು, ದೋಸೆ, ಕಾಫಿ ಸೇವೆಗಳು ಅಲ್ಲಲ್ಲಿ ನಡೆದು – ಬೇಡವೆಂದರೂ ಐತಾಳರ ಆತಿಥ್ಯವೇ ನಡೆಯಿತು, ನನ್ನ ಹುಡುಗರಿಗೆ ಒಂದು ಹೊಸ ಲೋಕವೇ ತೆರೆದಂತಾಗಿತ್ತು, ಆ ಪ್ರದೇಶ, ಆ ಜನಜೀವನ, ಆ ಕಾಡು ಬೆಟ್ಟಗಳ ಸಾಲು, ಕಡಲು, ಕಾರ್ಕಳ ನೋಡಿ. ಇವೆಲ್ಲಕ್ಕೂ ನೀವು ಒದಗಿಸಿಕೊಟ್ಟ ಸವಲತ್ತು, ಧಾರಾಳಗಳೇ ಕಾರಣ.

ಕಡೆಯ ದಿನದ ಹೊತ್ತಿಗೆ ನಿಮ್ಮನ್ನು ಕಂಡರೆ ಅಯ್ಯೋ ಪಾಪ, ಎನ್ನಿಸಿತ್ತು. ಆದರೇನು ಮಾಡುವುದು? ಯಾರಾದರೂ ತಾಯಾಗಿ ತಂದೆಯಾಗಿ – ಎರಡೂ ಒಂದೇ ಶಕ್ತಿಯಾಗಿ – ಹಾಗೆ ದುಡಿದ ಹೊರತು ಇಂಥ ಸಮಾರಂಭಗಳು ಯಶಸ್ವಿಯಾಗವು. ಬಹು ಚೆನ್ನಾಗಿ ವ್ಯವಸ್ಥೆ, ಕೆಲಸ ಕಾರ್ಯಗಳು ನಡೆದುವು. ಸಂತೋಷ. ಇಂಥ ಸಾವಿರ ಕ್ರತುಗಳ ಯಾಜಿಯಾಗಿ.

ಉತ್ಸವವನ್ನು ಸಮರ್ಪಕವಾಗಿ ನಡೆಸಿ ಗೆದ್ದಿರಿ. ಬಂದವರು ತೃಪ್ತರಾಗಿ ಹಿಂದಿರುಗಿದರು. ಸೆಮಿನಾರ್‌ಗಳಲ್ಲಿ ಇನ್ನಷ್ಟು ಮೇಧಾವಿಗಳು – ಈ ಸಾಹಿತ್ಯಕ ವೃಷಭ ಶಾರ್ದೂಲಗಳು – ಸೇರಿಕೊಳ್ಳಬಹುದಾಗಿತ್ತು. ನಮ್ಮನ್ನೇಕೆ ಕರೆಸಿದರೋ ಎಂದು ಕೆಲವರಿಗನಿಸಿತಂತೆ. ಗ್ರಂಥಕ್ಕೆ ನೆರವಾಗಿದ್ದವರೆಲ್ಲರೂ ಸಂತೋಷದಲ್ಲಿ ಬೆರೆಯಬೇಕೆಂಬುದೇ ಕಾರಣವಾಗಿತ್ತು ಎಂಬುದನ್ನು ಅಂಥವರು ಅರಿಯದೆ ಹೋದದ್ದು ಆಶ್ಚರ್ಯ. ಭಗವಂತನ ಕೃಪೆ ಅವ್ಯಾಜ, ಅಹೈತುಕೀ ಅನ್ನುತ್ತಾರೆ. ಇಂಥ ಪೂರ್ತ ಅವ್ಯಾಜವೆನ್ನುವುದನ್ನು ಅರ್ಥಮಾಡಿಕೊಳ್ಳದ ಸಾಹಿತಿಗಳು ನಾವು. ಸಣ್ಣ ಗೋಷ್ಠಿಗಳು ನಡುವೆ ನಡೆಯಬಹುದಿತ್ತು. ಸಾಮಾನ್ಯವಾಗಿ ಬೆರೆಯದ, ವಿರುದ್ಧ ಮನೋಭಾವದ ಜನ ಸೇರಬಹುದಾಗಿತ್ತು ಕೆಳೆಯಲ್ಲಿ. ಅದಿನ್ನೂ ಆಗಬೇಕು – ಅದಕ್ಕೆ ಅನುಕೂಲ ಆವರಣ ಕಟ್ಟಬೇಕು. ನೀವೆಂದ ಹಾಗೆ ಅವರನ್ನು ಶಿಸ್ತಿನಲ್ಲಿ ಸೇರಿಸುವುದು ಹೇಗೆ?

ನಿಮ್ಮ ಜೊತೆಯಲ್ಲಿ ಕೆಲಸ ಮಾಡಿದವರೆಲ್ಲರೂ ನಮ್ಮ ಕೃತಜ್ಞತೆಗೆ ಪಾತ್ರರು. ಅವರಲ್ಲಿಯೂ ನಮ್ಮ ಧನ್ಯವಾದಗಳನ್ನು ಅರ್ಪಿಸಬೇಕು.

oo oo oo

ಕೆ. ಕೆ. ಹೆಬ್ಬಾರ ಮುಂಬಯಿ

ಕಾರಂತ ಅಭಿನಂದನ ಉತ್ಸವವನ್ನು ಅಷ್ಟೊಂದು ಅಚ್ಚುಕಟ್ಟಾಗಿ, ಕಟ್ಟುನಿಟ್ಟಾಗಿ

ಆದರೂ ನಗುಮುಖದಿಂದಲೇ ನಿಭಾಯಿಸಿದ ಆಶ್ಚರ್ಯಕರವಾದ ರೀತಿಗೆ ನನ್ನ ಹಾರ್ದಿಕ ಧನ್ಯವಾದ.

ಶ್ರೀ ಚಟರ್ಜಿ ಒಂಭತ್ತರ ಸಾಯಂಕಾಲದ ಗಾಡಿಗೆ ಕಲ್ಕತ್ತಾಕ್ಕೆ ತೆರಳಿದರು. ನಿಮ್ಮ ಸಂಘಟನೆಯ ದಕ್ಷತೆಗೂ, ಅಂತಃಕರಣಪೂರ್ವಕ ಉಪಚಾರಕ್ಕೂ ಅವರು ಮರುಳಾಗಿದ್ದಾರೆ. ಉಡುಪಿ ಸಂದರ್ಶನದಿಂದ ಅವರಿಗೆ ತುಂಬಾ ಸಂತೋಷವಾಯಿತು.

oo oo oo

**ಪು. ತಿ. ನ.** ಮೈಸೂರು

ತಾವು ವಿಶ್ವಾಸವಿಟ್ಟು ಕರೆಯದೆ ಹೋಗಿದ್ದರೆ ನಾನೊಂದು ಅಪೂರ್ವ ಉತ್ಸವದಲ್ಲಿ ಭಾಗಿಯಾಗುವುದು ತಪ್ಪಿ ಹೋಗುತ್ತಿತ್ತು. ನಿಮಗೆ ಹಾರ್ದಿಕ ನೆನಕೆಗಳು. ನಾನು ಅಲ್ಲಿನ ಏರ್ಪಾಡುಗಳನ್ನೂ ಅಂಥ ಓರಣಗಳನ್ನೂ ನೋಡಿ ಬಹು ಹರ್ಷಗೊಂಡೆ... ಪ್ರಪಂಚ ದಲ್ಲಿ ವಿಶ್ವಾಸಕ್ಕೆ ಸಮಾನವಾದುದು ಯಾವುದೂ ಇಲ್ಲ.

ಕಾರಂತರ ಯಕ್ಷಗಾನವನ್ನು ನೋಡಿದುದು ಒಂದು ಸುಯೋಗ. ಅದರಲ್ಲಿ ಗಯನ ಪಾತ್ರ ಮಾಡಿದವನ ಅಭಿನಯ ತುಂಬಾ ಮನೋಜ್ಞವಾಗಿತ್ತು – Minimum effort, maximum effect – ಅದು ಕಲಾಪರಿಣತಿಯ ಸೂಚನೆ. ಪ್ರತಿಯೊಂದು ಚಲನೆಯೂ ಅರ್ಥವತ್ತಾಗಿತ್ತು. ಬ್ರಹ್ಮ-ಗಯ ಸಂವಾದ ದೃಶ್ಯ ಪೂರ್ಣ ತೃಪ್ತಿ ಯನ್ನು ತರುವಂಥದು. ಅಭಿಮನ್ಯು ಮನವನ್ನು ಸೂರೆಗೊಂಡ. ಪಾತ್ರ ಪ್ರಸಾಧನವಂತೂ ಹೇಳಬೇಕಾಗಿಲ್ಲ... ದೇವರ ದಯ ತಮ್ಮ ಮೇಲೆ ಸದಾ ಇರಲಿ.

oo oo oo

**ಜಿ. ಬಿ. ಜೋಶಿ** ಧಾರವಾಡ

ಕಾರಂತರ ಸತ್ಕಾರಕ್ಕೆ ಬಂದ ನಮಗೆಲ್ಲ ನಮ್ಮದೇ ಸತ್ಕಾರ ಎನಿಸಿತು. ವ್ಯವಸ್ಥೆಯ ಅಚ್ಚುಕಟ್ಟುತನ ನನ್ನ ಜೀವಮಾನದಲ್ಲಿಯೇ ಇಂಥದನ್ನು ಕಂಡಿರಲಿಲ್ಲ. ಅದೆಲ್ಲದರ ಹಿಂದೆ ಎಷ್ಟು ಜೀವ ಸೋತು ಸುಣ್ಣವಾಗಿರಬೇಕು ಎಂಬುದನ್ನು ನೆನಸಿದಾಗ ಇದೊಂದು ಮಹಾಸಾಧನೆ ಎನ್ನಬೇಕು.

ಒಂದೇ ಅಳುಕು. ನಾನೂ ಮೊದಲಿಗೇ ಬಂದು ಏನಾದರೂ ಮಾಡಬೇಕೆಂಬ ನನ್ನ ಪ್ರಬಲ ಇಚ್ಛೆಗೆ ನನ್ನ ಅನಾರೋಗ್ಯ ಮಧ್ಯೆಬಂತು. ನನ್ನಿಂದ ಅದು ಆಗಲಿಲ್ಲವಲ್ಲಾ ಎಂದು ಚಡಪಡಿಸಿದೆ.

ನನ್ನ ಮಟ್ಟಿಗೆ ಇಂತಹ ಅಳಿಯತನ ಕಂಡವನಲ್ಲ. ನಿಮ್ಮಿಂದಾಗಿ ಈ ಸಲ ಕಂಡೆ.

oo oo oo

**ರಾಮು ಜೋಶಿ** ಧಾರವಾಡ

......ಕಾರ್ಯಕ್ರಮ ಎಷ್ಟು ಯಶಸ್ವಿಯಾಗಿ ನಡೆಯಿತು ಎಂಬ ಬಗ್ಗೆ ಭೆಟ್ಟಿ ಯಾವ ಪ್ರತಿಯೊಬ್ಬರ ಮಾತಿನಲ್ಲಿಯೇ ತಿಳಿದುಹೋಗುತ್ತದೆ. ಇದರ ಶ್ರೇಯಸ್ಸು ಯಾರಿಗೆ ಎಂಬುದನ್ನು ಹೇಳಬೇಕಾಗಿಲ್ಲ.

ಆದರೆ ವೈಯಕ್ತಿಕವಾಗಿ ಕಾರಂತರ ಈ ಭೆಟ್ಟಿಯ ಉಪಯೋಗ ನನ್ನ ಜೀವನದಲ್ಲಿ ಸಾಕಷ್ಟು ಪ್ರಯೋಜನಕಾರಿಯಾಗಿದೆ. ಜೀವನದ ಒಂದು ಸಂಧಿ ಪ್ರಸಂಗದಲ್ಲಿ ಇಂಥ ಘಟನೆಗಳಿಂದ ನಮ್ಮ ನಮ್ಮ ಜೀವನದ ಧ್ಯೇಯ ಏಕ್‌ದಂ ನಿಶ್ಚಿತವಾಗಿಬಿಡುತ್ತದೆ... ಆ ರೀತಿ ನಡೆಯುವಲ್ಲಿ ಧೈರ್ಯ, ಸ್ಥಿರ ಮನಸ್ಸು ಬರಲಿ ಎಂಬುದೇ ನನ್ನ ಒಳಗಿನ ಹಂಬಲ. ಹೊರಗಿನ ಆಮಿಷಗಳಿಂದ ಮನಸ್ಸು ಚಂಚಲಗೊಳ್ಳದಿರಲಿ ಎಂದೇ ಪ್ರಯತ್ನಿಸುತ್ತಿದ್ದೇನೆ.

oo oo oo

**ಕೀರ್ತಿನಾಥ ಕುರ್ತಕೋಟಿ** ಆನಂದ

ಮೂರು ದಿನ ಉಡುಪಿಯಲ್ಲಿ ನಿಮ್ಮ ಆತಿಥ್ಯದ ಸವಿ ಆಶ್ರಯದಲ್ಲಿದ್ದು, ಕಾರಂತರ ಸತ್ಕಾರ ಸಮಾರಂಭದ ವೈಭವವನ್ನು ಅನುಭವಿಸಿ ಅದೇ ಗುಂಗಿನಲ್ಲಿ ತಿರುಗಿ ಬಂದೆ. ಸಮಾರಂಭಕ್ಕೆ ಕಾರಂತರ ವ್ಯಕ್ತಿತ್ವವೇ ಮುಖ್ಯ ಆಕರ್ಷಣೆ ಎಂಬುದು ನಿಜವಾದರೂ ನೀವು ಅದಕ್ಕೆ ಕೊಟ್ಟಿದ್ದ ಕಳೆ ಸಾಮಾನ್ಯವಾದದ್ದಲ್ಲ. ಇಂಥ ಸಮಾರಂಭವೊಂದನ್ನು ಅಚ್ಚುಕಟ್ಟಾಗಿ, ಯಶಸ್ವಿಯಾಗಿ ನಿರ್ವಹಿಸಿದ ನಿಮ್ಮ ದಿಟ್ಟತನ, ಸಾಮರ್ಥ್ಯ ಮುತ್ತು ಹೊಣೆ ಪ್ರಶಂಸನೀಯವಾಗಿತ್ತು. ಮೊಟ್ಟಮೊದಲಿಗೆ ಕಾರಂತರನ್ನು ಇಷ್ಟು ಸಮೀಪದಿಂದ ಕಂಡೆ. ಅವರ ಮಾತುಗಾರಿಕೆ, ಅದನ್ನು ಮೀರಿಸಿದ ಅವರ ನಡೆವಳಿಕೆ, ಅದನ್ನೂ ಮೀರಿಸಿದ ಅವರ ಪ್ರತಿಭೆ ಇವು ಒಂದೊಂದೂ ನನ್ನ ಮೇಲೆ ಪ್ರಭಾವ ಬೀರಿದುವು... ಸಮಾರಂಭದಿಂದಾಗಿ ನನಗೆ ಈ ಬೆಲೆಯುಳ್ಳ ವೈಯಕ್ತಿಕ ಲಾಭ ಉಂಟಾಯಿತು. ಸಮಾರಂಭ ಕಾರಂತ ಪ್ರಪಂಚವನ್ನು ತನ್ನೆಲ್ಲ ವಿವರಗಳಲ್ಲಿ ಪ್ರತಿಫಲಿಸಿತ್ತು ಎಂದು ಹೇಳಿದರೆ ಅತಿಶಯೋಕ್ತಿಯಲ್ಲ.

oo oo oo

**ಡಾ. ಜಿ. ವರಜರಾಜರಾವ್** ಮೈಸೂರು

ನಾವು ಅಲ್ಲಿದ್ದಾಗ ತಾವು ತೋರಿದ ಆದರ ಆತಿಥ್ಯಗಳಿಗೆ ಚಿರಕೃತಜ್ಞರಾಗಿದ್ದೇವೆ. ತಮ್ಮ ಸಹೋದ್ಯೋಗಿಗಳು ಮುತ್ತು ವಿದ್ಯಾರ್ಥಿಗಳ ವಿಶ್ವಾಸ ತುಂಬ ದೊಡ್ಡದು. ಸಾಹಿತ್ಯದ ಸವಿಯೊಂದಿಗೆ ಈ ಸ್ನೇಹದ ಸವಿಯನ್ನೂ ಉಂಡ ನಾವು ಕೃತಾರ್ಥರು.

oo oo oo

ಸಿಂಪಿ ಲಿಂಗಣ್ಣ ಚಡಚಣ

ಸುಖವಾಗಿ ಊರು ಸೇರಿದ್ದೇನೆ. ಎರಡು ದಿನ ತಮ್ಮ ಹಾರ್ದಿಕ ಆತಿಥ್ಯದಿಂದ ತಣಿಸಿದ ತಮಗೂ, ತಮ್ಮ ಸಮಿತಿಯ ಸ್ನೇಹಿತರಿಗೂ ನಾನು ಋಣಿಯಾಗಿದ್ದೇನೆ. ಸತ್ಕಾರ ಸಮಿತಿಯ ಕಾರ್ಯಶ್ರಮತೆ ಔದಾರ್ಯಗಳು ಮೆಚ್ಚುವಂಥದಾಗಿವೆ.

oo oo oo

ವಿ. ಎಂ. ಇನಾಂದಾರ ಬೆಂಗಳೂರು

ಥ್ಯಾಂಕ್ಸ್, ಥ್ಯಾಂಕ್ಸ್, ಥ್ಯಾಂಕ್ಸ್ – ಹೀಗೆ ಉದ್ದಕ್ಕೂ. ಅಲ್ಲದೆ ಸಾವಿರ ಅಭಿನಂದನೆಗಳು. ಇದಕ್ಕಿಂತ ಹೆಚ್ಚು ನೀವೇ ಮಾಡಲಾರಿರಿ, ಉಳಿದವರೇನು ಮಾಡಿಯಾರು? ಇಡೀ ಸಮಾರಂಭದ ವಿಜೃಂಭಣೆ ಅನಿರ್ವಚನೀಯ. ನಾನಿನ್ನೂ ಹೆಚ್ಚು ಕೆಲಸ ಮಾಡಬೇಕಾಗಿತ್ತು – ಇದು ನನ್ನ ಕೊರಗು.

oo oo oo

ಎನ್. ಎಸ್. ರಾಮಪ್ರಸಾದ ಬೆಂಗಳೂರು

ಊರು ತಲಪಿ ಐದು ದಿನಗಳ ನಂತರ ನಿಮಗೆ ಬರೆಯುತ್ತಿದ್ದೇವೆ. ಅದಕ್ಕೆ ಕಾರಣವೂ ನೀವೇ. ಬಂದ ದಿನದಿಂದ ನಿನ್ನೆ ವರೆಗೆ 'ಗೃಹಶಾಂತಿ' ಕದಡಿ ಹೋಗಿತ್ತು.

ನಾನು ಮಾಡಿದ ತಪ್ಪು ಇಷ್ಟೇ – ಇಲ್ಲಿಂದ ಹೊರಟು ಪುನಃ ತಲಪುವ ವರೆಗಿನ ಬಣ್ಣನೆ ಮಾಡಿದೆ. ನಾನು ಪಟ್ಟ ಸೌಖ್ಯವನ್ನು ತುಸುವಾದರೂ ಅತಿರಂಜನೆ ಇಲ್ಲದೆ ಬಣ್ಣಿಸಿದೆ – ನನ್ನಾಕೆಗೆ. ಎಷ್ಟಾದರೂ ಹೆಣ್ಣು – ಮತ್ಸರ ಸಹಜ.

'ಅವೆಲ್ಲಾ ನಮಗೆಲ್ಲಿ? ನಾವೇನಿದ್ದರೂ ಮನೆಯಲ್ಲಿ ದುಡಿಯುವುದಕ್ಕೆ ತಾನೇ!' ಎಂದು ಮುಖ ಊದಿಸಿಕೊಂಡು ಕೂತಳು. ಜಗಳವಾಡಿದಳು.

ಆದರೆ ಇಂದಿನಿಂದ ಸರಿಹೋಗಿದ್ದಾಳೆ. ಏನೇನೋ ಹೇಳಿ ಸುಮ್ಮನಾಗಿಸುವುದರಲ್ಲಿ ಸಫಲನಾಗಿದ್ದೇನೆ.

ನೀವು ಕೊಟ್ಟ ಕರೆ, ನಡೆಸಿದ ಆದರೋಪಚಾರಗಳಿಗೆಲ್ಲ 'ವಂದನೆಗಳು' ಎಂಬ ಒಂದು ಶಬ್ದ ಹೇಳಿದರೆ ಅದು ಹೃದಯದ ಭಾವನೆಗಳನ್ನೆಲ್ಲ ವ್ಯಕ್ತಗೊಳಿಸಲು ಶಕ್ಯವಿಲ್ಲ. ನನಗೆ ಒಂದಲ್ಲ, ಹಲವು ರೀತಿಯ ಲಾಭವಾಗಿದೆ. ನನ್ನ ಸ್ನೇಹಸಮುದಾಯ ಹೆಚ್ಚಿದೆ. ನಾನು ಸಾಕಷ್ಟು ಶ್ರೀಮಂತನಾಗಿ ಉಡುಪಿಯಿಂದ ಹೊರಬಂದಿದ್ದೇನೆ. ನಿಮಗೂ ನಿಮ್ಮ ಮೂಲಕ ನಿಮ್ಮ ಸ್ನೇಹಿತ ಸಮುದಾಯಕ್ಕೂ ಹೃತ್ಪೂರ್ವಕ ವಂದಿಸುವೆ.

oo oo oo

ಎಂ. ಮಲ್ಲಿಕಾರ್ಜುನಯ್ಯ ಬೆಂಗಳೂರು

ನಿಮ್ಮಂಥ ಸ್ನೇಹಿತರನ್ನೂ, ಕಾರಂತ, ವಿ.ಸೀ ಅವರಂಥ ಹಿರಿಯರ ಆಶೀರ್ವಾದವನ್ನೂ ಪಡೆದ ನಾನು ಧನ್ಯನೆಂದು ಎಣಿಸಿದ್ದೇನೆ.

ನಿಮ್ಮ ನಾಯಕತ್ವದಲ್ಲಿ ದುಡಿದ ಶಿಸ್ತಿನ ಸೇನೆಯ ಸೇವೆ ಸಂಘಟನೆಗಳನ್ನು ಕಂಡ ನಾವು ಬೆರಗಾಗಿದ್ದೇವೆ. ಆ ಕೆಲವು ದಿನ ನೀವು ರವೀಂದ್ರ ಮಂಟಪದ ಕೆಲಬಲದಲ್ಲಿ ನಿರ್ಮಿಸಿದ ಉಲ್ಲಾಸದ, ಸಂಭ್ರಮದ, ಚೇತನಶೀಲ ಪಾವಿತ್ರ್ಯದ ಅಪೂರ್ವ ಸನ್ನಿವೇಶ ನಿಜಕ್ಕೂ ರೋಮಾಂಚಕ. ನಿಮ್ಮ ಸಂಗಡಿಗರ ಸೌಜನ್ಯ, ವಿನಯ, ಆತಿಥ್ಯ, ನಿಮ್ಮ ವಿದ್ಯಾರ್ಥಿಗಳ ಹಸನ್ಮುಖಿ ಶ್ರಮ ಇವನ್ನು ನೆನೆದರೆ ಹೃದಯ ತುಂಬಿಬರುತ್ತದೆ. ಇಂಥ ಹಲವು ಉತ್ಸವ ನಿಮ್ಮ ಕೈಯಿಂದ ನಡೆಯಲಿ ಎಂದು ಹಾರೈಸುತ್ತೇನೆ.

oo oo oo

ಎಂ. ರಾಮಚಂದ್ರ ಕಾರ್ಕಳ

ಕಾರಂತ ಅಭಿನಂದನ ಉತ್ಸವದಲ್ಲಿ ಪಾಲುಗೊಳ್ಳಲು – ಯಥಾಶಕ್ತಿ ಸೇವೆ ಸಲ್ಲಿಸಲು – ನೀವು ನನ್ನನ್ನು ಕರೆದದ್ದು ನನ್ನ ಸೌಭಾಗ್ಯ. ನಿಮಗೆ ನನ್ನ ಮೇಲಿನ ಪ್ರೀತಿ ವಿಶ್ವಾಸಗಳ ದ್ಯೋತಕ. ನನಗೆ ಎಂ.ಜಿ.ಎಂ., ಎಸ್.ಬಿ.ಸಿ. ಬೇರೆಯಲ್ಲ – ಒಂದೇ. ಇಂತಹ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದು ನನಗೆ ಯಾವಾಗಲೂ ಪ್ರಿಯ – ಒಂದು ಕಾರಣ: ರೋಟರಿ ಪರಿಭಾಷೆಯ 'ಫಲೋಶಿಪ್' ಸ್ನೇಹ ಸಂದರ್ಭ, ಎರಡು: ಕಾರ್ಯಕ್ರಮ ಸಂಘಟಿಸುವ ಪರಿಜ್ಞಾನ.

oo oo oo

ಚಂದ್ರಶೇಖರ ಕಂಬಾರ ಧಾರವಾಡ

ನೀವು ಹಮ್ಮಿಕೊಂಡಿದ್ದ ಕಾರಂತರ ಸತ್ಕಾರ ಸಮಾರಂಭವು ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದೆ. ಇಂಥ ಸದವಕಾಶ ನನಗೆ ಸಿಕ್ಕಿದ್ದಕ್ಕಾಗಿ ನಾನು ನಿಮಗೆ ಅತ್ಯಂತ ಋಣಿಯಾಗಿದ್ದೇನೆ.

oo oo oo

ಸೇವ ನಮಿರಾಜ ಮಲ್ಲ ಹೊನ್ನಾವರ

ಅಂತೂ ಎನನ್ 'ಸಾಯಿತಿ' ಪಂಡ್‌ದ್ ಉತ್ಸವೊಡು ಸೇರ್‌ಸಾದ್ ಭಾರೀ ಉಪ

ಕಾರ ಮಲ್ತುರ್. ಮದ್ಮೆದ ಉನಸ್ ಪಲಾಹಾರದ ಒಟ್ಟುಗು ಕಡೆಕ್ 'ದಕ್ಷಿಣೆ'ಲ ಕೊರ್ದುರ್
ಎನನ್ ನಿಜವಾಯಿ ಸಾಯಿತಿ ಮಲ್ತೊರ ದಾನಿಯ.

'ಕಾರಂತ ಪ್ರಪಂಚ'ದ ಸಾಧನೆ ಅದ್ಭುತವಾಗಿದೆ. ಎಂದು ಇಲ್ಲಿ ಆರಾಮ ಕುಳಿತು ಪುಟ ಮಗಚುವಾಗ ತಿಳಿಯಿತು. ನನ್ನ ಕಲ್ಪನೆಯನ್ನೂ ಅದು ಮೀರಿಸಿದೆ. ಅದಕ್ಕೆ ಮಳಲ ಸೇವೆ ಸಲ್ಲಿಸುವ ಅವಕಾಶ ಒದಗಿಸಿ ಉಪಕಾರ ಮಾಡಿದ್ದೀರಿ.

ಕಾರಂತರನ್ನು ತೃಪ್ತಿಪಡಿಸಲು ನೀವೆಲ್ಲ ಸಮರ್ಥರಾದುದು ನಿಮ್ಮ ದಕ್ಷತೆಯ ಬಗ್ಗೆ ದೊಡ್ಡ ಟೆಸ್ಟಿಮನಿ. ಉತ್ಸವ ಐತಿಹಾಸಿಕವಾಯಿತೆಂಬುದರಲ್ಲಿ ಸಂದೇಹವಿಲ್ಲ.

೦೦ ೦೦ ೦೦

**ಹ. ವೆಂ. ನಾಗರಾಜ** ಬೆಂಗಳೂರು

ಇನ್ನೂ ನನಗೆ ಆ ಉಡುಪಿಯ ಮಂಪರು ಹೋಗಿಲ್ಲ. ಕಾರಂತ ಸನ್ಮಾನದ ಆ ವೈಭವ, ಆತ್ಮೀಯತೆಗಳೇ ನನ್ನ ಮನ ತುಂಬಿವೆ.

೦೦ ೦೦ ೦೦

**ಜಿ. ರಾ. ಐತಾಳ** ಬೆಂಗಳೂರು

ನಾನು ಮತ್ತು ನನ್ನ ಮಿತ್ರರನ್ನು ತಾವೂ ತಮ್ಮ ಬಳಗದವರೂ ಅತ್ಯಂತ ಪ್ರೀತಿ ವಿಶ್ವಾಸದಿಂದ ಸತ್ಕರಿಸಿದ್ದಕ್ಕಾಗಿ ನಾವೆಲ್ಲ ಚಿರಋಣಿಗಳು.

ಉತ್ಸವದ ಏಳು ದಿನಗಳು ಕಳೆದದ್ದೇ ತಿಳಿಯಲಿಲ್ಲ. ಇಲ್ಲಿಗೆ ಬಂದ ಮೇಲೂ ಅಲ್ಲಿಯ ನೆನಪುಗಳದೇ ಕನಸು, ಮೆಲುಕು. ಆ ರಸನಿಮಿಷಗಳನ್ನು ಮರೆಯಲು ಅಸಾಧ್ಯ.

ಆದಾಯಕ್ಕಿಂತ ವೆಚ್ಚವೇ ಹೆಚ್ಚಾದಂತೆ ತೋರಿತು. ಆದ್ಯಂತ ಸಂಗ್ರಹದಿಂದ ವೆಚ್ಚದ ಭಾರ ತೂಗಿಸಬಲ್ಲಿರಾ, ದಯವಿಟ್ಟು ತಿಳಿಸಿ.

೦೦ ೦೦ ೦೦

**ಕಯ್ಯಾರ ಕಿಞ್ಞಣ್ಣ ರೈ** ಪೆರಡಾಲ

ಕಾರಂತ ಅಭಿನಂದನ ಉತ್ಸವದ ಸುವ್ಯವಸ್ಥೆಗಾಗಿ ನಿಮ್ಮನ್ನೂ ನಿಮ್ಮ ಸಹೋದ್ಯೋಗಿ ಮಿತ್ರರನ್ನೂ ಮನಸಾರ ಅಭಿನಂದಿಸುತ್ತೇನೆ.

೦೦ ೦೦ ೦೦

**ಸುಬ್ರಾಯ ಚೊಕ್ಕಾಡಿ** — **ಐವರನಾಡು**

ಒಂದು ಸಮಾರಂಭವನ್ನು ಯಶಸ್ವಿಯಾಗಿ ಹೇಗೆ ನಡೆಸಬಹುದು ಎಂಬುದನ್ನು ಪ್ರತಿಯೊಬ್ಬರೂ ನಿಮ್ಮಲ್ಲಿ ಕಲಿಯಬೇಕಾಗಿದೆ.

ഠഠ ഠഠ ഠഠ

**ಪದ್ಮಚರಣ** — **ಬೆಂಗಳೂರು**

ಸಮ್ಮೇಲನ, ವ್ಯವಸ್ಥೆ ಬಹಳ ತೃಪ್ತಿಕರವಾಯಿತು. ತುಂಬ ಸಂತೋಷವಾಗಿದೆ. ನಿಮ್ಮ ಸಾಮರ್ಥ್ಯ ಮೆಚ್ಚುಗೆಯಾಯಿತು.

ഠഠ ഠഠ ഠഠ

**ರಾಮು ಮೊಳೆಯಾರ** — **ಮಂಗಳೂರು**

ಕಾರಂತ ಸನ್ಮಾನ ರಾಜವೈಭವದಿಂದ ನಡೆಯಿತು. ಸಾಹಿತ್ಯಜ್ಞರಿಗೆ ಈ ರೀತಿಯ ಸನ್ಮಾನ ಕೊಟ್ಟುದಂತೂ ತುಂಬಾ ಅಭಿನಂದನೀಯ ಕೆಲಸ. ಇದು ಋಷಿಪೂಜೆ. ಈ ಸಂದರ್ಭದಲ್ಲಿ ಬಂದವರನ್ನೆಲ್ಲ ಕೊರತೆಯಾಗದಂತೆ ನೋಡಿಕೊಂಡ ನಿಮ್ಮನ್ನೂ ಅಭಿನಂದಿಸಬೇಕು.

ഠഠ ഠഠ ഠഠ

**ಅಮ್ಮೆಂಬಳ ಶಂಕರನಾರಾಯಣ** — **ಕೋಟೆಕಾರು**

ಕಾರಂತ ಅಭಿನಂದನ ಉತ್ಸವ 'ನ ಭೂತೋ, ನ ಭವಿಷ್ಯತಿ' ಎಂಬಂತೆ ನಿಮ್ಮ ಹಾಗೂ ಡಾ। ಪೈ ಅವರ ಸಮರ್ಥ ಮುಂದಾಳುತನದಲ್ಲಿ ಉಡುಪಿಯ ಕೀರ್ತಿಗೆ ಕಳಶ ವಿಡುವಂತೆ – ದಕ್ಷಿಣ ಕನ್ನಡಕ್ಕೆ ಹೊಸದು ಮೈದುಂಬುವಂತೆ – ಜರಗಿದ್ದಕ್ಕೆ ನೀವು ಅಭಿನಂದನೀಯರು.

'ಕಾರಂತ ಪ್ರಪಂಚ'ವು 'ಗಂಗೋತ್ರಿ'ಗೆ ಹೆಗಲೆಣೆಯಾಗುವಂತೆ ಪ್ರಕಾಶನ ಮುಖವನ್ನು ಕಂಡುದು ನಿಮ್ಮ ಅವಿಶ್ರಾಂತ ಪರಿಶ್ರಮಕ್ಕೆ ದ್ಯೋತಕ.

ഠഠ ഠഠ ഠഠ

**ಕೊ. ಅ. ಉಡುಪ** ಕಿನ್ನಿಗೋಳಿ

ಅಭಿನಂದನೋತ್ಸವದ ಯಶಸ್ವಿ ನಿರ್ವಹಣೆಯ ಬಗ್ಗೆ ಅಹರ್ನಿಶಿ ಪರಿಶ್ರಮಿಸಿದ ತಮ್ಮ ಕಾರ್ಯಕೌಶಲ ಸ್ತುತ್ಯ.

oo oo oo

**ಟಿ. ನಾಗೇಶರಾವ್** ಪುತ್ತೂರು

ಜೀವನದಲ್ಲಿಯೇ ಅಪೂರ್ವ ವೈಭವೋಪೇತ ಸಾಹಿತ್ಯೋತ್ಸವವನ್ನು ಕಾಣುವ ಆನಂದಪಡುವ ಭಾಗ್ಯ ದೊರಕಿದ್ದಕ್ಕೆ ಸಂತೋಷ, ಕೃತಜ್ಞತೆ. ಮುಖ್ಯವಾಗಿ ಸಾಹಿತ್ಯಕಲಾ ವಿಶಾರದರಾದ ಡಾ। ಕಾರಂತರಿಗೆ ರಾಜೋಪಚಾರದ ಮನ್ನಣೆ, ಗೌರವಗಳನ್ನು ನೀಡಿ ಅಖಿಲ ಕರ್ನಾಟಕವೇ ಧನ್ಯಭಾಗಿಯಾಗಲು ಅವಕಾಶ ಒದಗಿಸಿದ ಅಭಿನಂದನಾ ಸಮಿತಿಯ ಉಪಕಾರ ಚಿರಸ್ಮರಣೀಯವಾದ್ದು. ಎಲ್ಲ ವಿಧದಿಂದಲೂ ರಸದೌತಣವಾಗಿತ್ತು – ಕಾರಂತ ಉತ್ಸವ.

oo oo oo

**ಜೆ. ಎಂ. ಮಂಜುನಾಥಯ್ಯ** ಸುಂಟಿಕೊಪ್ಪ

ಸಮಾರಂಭದ ವಿಶಿಷ್ಟ ಸಂಘಟನೆ, ಸಂಭ್ರಮವನ್ನು ನಾನು ಬಹಳ ಮೆಚ್ಚಿದೆ. ಎಲ್ಲವೂ ಅಷ್ಟೊಂದು ಸುಸೂತ್ರವಾಗಿಯೂ, ಆನಂದಮಯವಾಗಿಯೂ, ನಡೆದದ್ದು ಭಾರೀ ವಿಶೇಷ.

oo oo oo

**ಜೀ. ಶಂ. ಪರಮಶಿವಯ್ಯ** ಮೈಸೂರು

ಉಡುಪಿಯಲ್ಲಿ ಕಳೆದ ಐದಾರು ದಿನಗಳು ನಿಜಕ್ಕೂ ಅಮೂಲ್ಯವಾದುವು. ಯಕ್ಷಗಾನ ಸಂಬಂಧವಾದ ಅನೇಕ ಉಪಯುಕ್ತ ವಿಷಯಗಳನ್ನು ತಿಳಿದುಕೊಂಡದ್ದರ ಜತೆಗೆ ಡಾ। ಶಿವರಾಮ ಕಾರಂತರನ್ನು ಹೆಚ್ಚು ಹತ್ತಿರದಿಂದ ನೋಡುವ ಸೌಭಾಗ್ಯ ನಮ್ಮದಾಯಿತು. ಕಾರ್ಯಕ್ರಮಗಳ ವ್ಯವಸ್ಥೆಯಲ್ಲಿ, ಅತಿಥಿಗಳನ್ನು ನೋಡಿಕೊಳ್ಳುವುದ ರಲ್ಲಿ ತಾವು ಇತರರಿಗೆ ಆದರ್ಶರಾಗಿದ್ದೀರಿ. ಇಂಥ ಕಾರ್ಯಕ್ರಮಗಳು ತುಂಬ ವಿರಳ ವೆಂದೇ ಹೇಳಬೇಕು.

oo oo oo

**ಅ. ಶಿವರಾಂ** ಬೆಂಗಳೂರು

ಉತ್ಸವವನ್ನು ಅಮೋಘ ಶಿಸ್ತು ಸಂಯಮಗಳಿಂದ ನಡೆಸಿ, ಹೊರ ಊರಿನ ನಮ್ಮನ್ನು ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಕಂಡ ನಿಮ್ಮ ಸಮಿತಿ ಮತ್ತು ಸ್ವಯಂ ಸೇವಕರ ವಿಶ್ವಾಸ, ಆತ್ಮೀಯ ಆದರಾತಿಥ್ಯಕ್ಕಾಗಿ ಅತ್ಯಂತ ನಮ್ರತೆಯಿಂದ ನಮ್ಮ ಕೃತಜ್ಞತೆ ಸೂಚಿಸುತ್ತೇವೆ.

ಮುಖ್ಯವಾಗಿ ನಿಮ್ಮ ವಿದ್ಯಾರ್ಥಿ–ಸ್ವಯಂ ಸೇವಕರಿಗೆ ನಮ್ಮ ವಂದನೆ ಹೇಳಿ.

oo oo oo

**ಬೈಕಾಡಿ ವೆಂಕಟಕೃಷ್ಣರಾಯ** ಬ್ರಹ್ಮಾವರ

ದೀಪಾವಳಿ ತನ್ನ ಹರಕೆಯೊಂದಿಗೆ ನಿಮ್ಮ ಯಜಮಾನತ್ವದಲ್ಲಿ ನಡೆದ ಕಾರಂತ ಸನ್ಮಾನ ಗಡದ್ದಾಯಿತು ಎಂದು ಹೇಳುತ್ತದೆ. ಕಾರಂತರನ್ನು ಅಭಿನಂದಿಸಿದ ನಿಮ್ಮನ್ನು ಅಭಿನಂದಿಸುತ್ತೇನೆ. 'ಕಾರಂತ ಪ್ರಪಂಚ' ಭರ್ಜರಿ ಗ್ರಂಥ – ಅದಲ್ಲಿ ನನ್ನದೂ ಒಂದು ಕುಸುಮ ಸೇರಿಸಿದ್ದಕ್ಕೆ ನಾನು ಋಣಿ.

oo oo oo

**ಶ್ರೀನಿವಾಸ ಉಡುಪ** ಹೊಸನಗರ

ಆ ಊಟ, ಆ ನೋಟ, ಆ ಕೂಟ – ನಾನೆಂತು ಮರೆಯಲಿ ?

oo oo oo

## ....ಬಾರದವರಿಂದಲೂ

**ಕೆ. ಆರ್. ಕಾರಂತ** ಬೆಂಗಳೂರು

ನೀವು ಕಳಿಸಿದ ಸುಂದರ ಅಭಿನಂದನ ಗ್ರಂಥದ ಪ್ರತಿಗೂ, ನೀವು ಈ ವಿಷಯದಲ್ಲಿ ವಹಿಸಿದ ಶ್ರಮಕ್ಕೂ, ಅದರಲ್ಲಿ ನನ್ನ ಲೇಖನವನ್ನು ಸೇರಿಸುವ ಸಂದರ್ಭ ಒದಗಿಸಿದ್ದಕ್ಕೂ, ವಂದನೆಗಳು...... ಆದರೆ ನನ್ನ ಲೇಖನದ ಅನುವಾದದಲ್ಲಿ ಎರಡು ತಪ್ಪು ಉಳಿದು ಕೊಂಡಿವೆ......

oo oo oo

**ಎ. ಪಿ. ಸುಬ್ಬಯ್ಯ** ಪುತ್ತೂರು

ಒಂದನೆ ಸಂಗತಿ – ಏಕೈಕ । – ಅಂದರೆ ನಾನು ಸಮಾರಂಭಕ್ಕೆ ಬರಲಾಗದಿದ್ದುದರ ನನ್ನ ದುಃಖ.

ನಮ್ಮಲ್ಲಿಂದ ಹೋದವರನ್ನು – ಕಾರಂತರನ್ನೂ ಸೇರಿಸಿ – ವಿಚಾರಿಸಲಾಗಿ ಅಲ್ಲಿ ನೀವು ನಡೆಸಿದ ನಮ್ಮ ಸಮಾರಂಭವು ಅಖಿಲ ಭಾರತದಷ್ಟರ ವಿಶಾಲ ಕ್ಷೇತ್ರಗಳಲ್ಲಿನ ಒಂದು ಮಹಾ ಸುವ್ಯವಸ್ಥಿತ ಸಮಾರಂಭದಂತೆ ನಡೆಯಿತೆಂದು ತಿಳಿಯತೊಡಗಿದ್ದೇನೆ. ಪ್ರೊ। ಚಟರ್ಜಿಯವರ ಅಧ್ಯಕ್ಷ ಭಾಷಣದಿಂದ ಹಿಡಿದು ಕಾರ್ಯಕ್ರಮದ ಅಂಗಾಂಗ ಗಳನ್ನೆಲ್ಲ ಅವಲೋಕಿಸಿದರೆ ಇದೇನು ಅಖಿಲ ಭಾರತ ಸಾಹಿತ್ಯ ಸಮಾರೋಹ ಜರಗಿತೇ ಎಂಬ ಭ್ರಮೆ ಉಂಟಾಗುತ್ತದೆ. ಒಂಡು ಕಡೆ ಇದರಿಂದ ನನಗೆ ಆನಂದ, ಇನ್ನೊಂದು ಕಡೆ ದುಃಖ. ಊಟೋಪಚಾರದ ಉತ್ಕೃಷ್ಟತೆ ಹೇಳಿ ಹೇಳಿ ನಾಗೇಶರಾಯರು ನನ್ನನ್ನು ರೇಗಿಸುತ್ತಿದ್ದಾರೆ. ಕಾರಂತರಿಗೂ ಸಂತೋಷವಾಗಿದೆ. ನಾನು ಅವರನ್ನು ಒಕ್ಕಿ ಒಕ್ಕಿ ವಿಚಾರಿಸಿ ಬಹ್ವಂಶ ಎಲ್ಲ ತಿಳಿದೆ.

'ಕಾರಂತ ಪ್ರಪಂಚ'ದ ಸರ್ವತೋಮುಖ, ಸರ್ವಾಂಗ ಸೌಂದರ್ಯವನ್ನು ನಾನು ವರ್ಣಿಸಲಾರೆ. ಇಷ್ಟನ್ನೆಲ್ಲ ಇಷ್ಟೊಂದು ಪರಿಷ್ಕಾರವಾಗಿ ಮಾಡಿದ ನಿಮ್ಮ ಸಮಿತಿ ಯನ್ನು ಹೊಗಳಬಲ್ಲ ಶಕ್ತಿ ನನಗಿಲ್ಲ.

oo oo oo

**ನಿ. ವಾ. ಬಲ್ಲಾಳ** ಮುಂಬಯಿ

ಕಳೆದ ಭಾನುವಾರ ಉಡುಪಿಯಿಂದ ಮರಳಿದ ಕೃಷ್ಣರಾಯರು 'ಕಾರಂತ ಪ್ರಪಂಚ'ದ ಪ್ರತಿ ತೋರಿಸಿದಾಗ ನಿಮ್ಮ ಶ್ರಮ ಸಾರ್ಥಕವಾಯಿತೆಂದು ನನಗನಿಸಿತ್ತು.

ನಾನು ಮನಸ್ಸಿನಲ್ಲಿ ಕಲ್ಪಿಸಿಕೊಂಡ ಸಂಭಾವನಾ ಗ್ರಂಥಕ್ಕಿಂತ ಇದರ ಯೋಗ್ಯತೆ ಒಂದು ತೂಕ ಹೆಚ್ಚಾಗಿ ಇದೆ. ಗ್ರಂಥ ಕೈಗೆ ಬಂದ ಮೇಲೆ ಮೂರು ತಾಸು ಆ ಪ್ರಪಂಚದಲ್ಲೇ ಇದ್ದೆ.

ಉತ್ಸವದ ಸಂಭ್ರಮವನ್ನೆಲ್ಲ ಕೇಳಿ, ಪತ್ರಿಕೆಗಳಲ್ಲಿ ಓದಿ ತಿಳಿದೆ. ನನ್ನ ಮನಸ್ಸೆಲ್ಲ ಉಡುಪಿಯಲ್ಲಿದ್ದು ನೀವು ಕಳುಹಿಸಿದ ಕಾರ್ಯಕ್ರಮದ ಪಟ್ಟಿಯನ್ನೆ ಅನುಸರಿಸುತ್ತಿದ್ದರೂ ನಾನು ಮುಂಬಯಿಯಲ್ಲೇ ಉಳಿದೆ. ಎಲ್ಲ ಭಾಷಣಕಾರರೂ ಚೆನ್ನಾಗಿ ಮಾತಾಡಿರೆಂದು ತಿಳಿದೆ. ನೆರೆದಿದ್ದ ಸಾಹಿತಿಗಳು ಯಾಕೆ ಭಾಗವಹಿಸಲಿಲ್ಲವೆಂಬುದು ತಿಳಿಯಲಿಲ್ಲ.

oo oo oo

**ಜಿ. ಟಿ. ನಾರಾಯಣ ರಾವ್** ಮೈಸೂರು

ನಿಮ್ಮ – ನಮ್ಮ – ನಾನು ಬಾರದ – ಉತ್ಸವದ ಬಗ್ಗೆ ನಾನು ಸಂಗ್ರಹಿಸಿದ ಸಾರ್ವಜನಿಕ ಅಭಿಪ್ರಾಯ ಹೀಗಿದೆ (1) ವ್ಯವಸ್ಥೆ ಸರ್ವೋತ್ಕೃಷ್ಟ; (2) ಗ್ರಂಥ ಸರ್ವೋತ್ತಮ; (3) ಕಾರಂತರ ಮೊದಲ ದಿನದ ಭಾಷಣ ಸಂದರ್ಭಕ್ಕೆ ಸರಿಯಾಗಿತ್ತೇ ಎಂಬ ಸಂದೇಹ (4) ವಿಚಾರಗೋಷ್ಠಿ ನಿರೀಕ್ಷೆಗಿಂತ ನಿಮ್ನ (5) ಮೊದಲ ದಿನದ ಯಕ್ಷ ನೃತ್ಯ ಅದ್ಭುತ. ಜುಮಲಾ ನ ಭೂತೋ ಇತ್ಯಾದಿ. ಕಾರಂತ – ಕು. ಶಿ. ಅಕ್ಷದಲ್ಲಿ ಮಾತ್ರ ಇಂಥದು ಸಾಧ್ಯವೆಂಬ ಸಾಮಾನ್ಯ ಕಲ್ಪನೆ ದೃಢವಾಗಿದೆ.

## ಭರತವಾಕ್ಯ

'ನೀವು ವಹಿಸಿದ ಯಾವತ್ತೂ ಕೆಲಸಗಳು ಬಲು ಚೆನ್ನಾಗಿ ವಿವೇಕ ಯುತವಾಗಿ ನಡೆದುವು.

ಆನೆಯ ಮೇಲೆ ಗ್ರಂಥ ಹೊರಿಸದೆ ಹೇಗೂ ಆನೆಯಿಂದ ಸಲಾಮು ಮಾಡಿಸಿದಿರಿ. ಮುಂದಿನ ಜನ್ಮದಲ್ಲಿ ಅದು ಸಾಹಿತಿ ಆಗುವ ಸಂಭವವಿದೆ. ಇಲ್ಲವಾದರೆ ಸಾಹಿತ್ಯಕ್ಕೆ ಎಲಿಫೆಂಟಿಯಾಸಿಸ್ ಬರುವ ಸಂಭವವಿದ್ದೀತು.

ನಿಮ್ಮ ಗ್ರಂಥ ಯಶಸ್ವಿಯಾಗಿ ತಿರುವಿ ಹಾಕಿದ್ದೇನೆ. ಕಾದಂಬರೀ ತಂತ್ರಕ್ಕಾಗಿ ನಾವು ಬಲು ಸಂಕಟಪಡುವಂತೆ ಕಾಣುತ್ತದೆ.'

– ಶಿವರಾಮ ಕಾರಂತ

## ೧

ಉಡುಪಿ – ಕರ್ನಾಟಕದ ಒಂದು ಪುಣ್ಯಸ್ಥಳ, ಯಾತ್ರಿಕರು ಪರಿಷೆ ಸೇರುವಸರ್ವ ಋತು ಬಂದರು. ಎಂದಿನಿಂದಲೋ – ತಿಳಿಯದು, ಹುಟ್ಟೂರು ಉಡುಪಿಯವನಾದ ನನಗೆ ಬುದ್ಧಿ ತಿಳಿದಂದಿನಿಂದಲೂ ಇಲ್ಲಿಯ 'ಪೊಡವಿಗೊಡೆಯ'ನ ಸನ್ನಿಧಾನದಲ್ಲಿ ಪಂಡಿತರ ಚರ್ಚೆ – ಭಾಷಣ – ಘಟಪಟ ಸಂವಾದ ನಡೆಯುತ್ತಲೇ ಇತ್ತು. ಆದರೆ ನನ್ನ ಇದುವರೆಗಿನ ಅರ್ಧಾಯುಷ್ಯದ ಮೊದಲ 20 ವರ್ಷ ನನ್ನ ಸಾಹಿತ್ಯದ ಕಣ್ಣು ತೆರೆಯದೆ ಇದ್ದುದರಿಂದ ಇದೆಲ್ಲ ನನ್ನಮಟ್ಟಿಗೆ ಪುರಾಣ, ಇತಿಹಾಸ. ಇಂಥವು ನಡೆದಲ್ಲಿ ನನ್ನ ಜೀವನದ ಇಪ್ಪತ್ತು ವಸಂತಕಾಲ ಗೈರು ಹಾಜರು – ಅಲ್ಲಿ ನಾನು ಪ್ರೇಕ್ಷಕನೂ ಅಲ್ಲ, ಶ್ರೋತೃವೂ ಅಲ್ಲ, ಕಾರ್ಯಕರ್ತನೂ ಅಲ್ಲ, ವಿಮರ್ಶಕನೂ ಆಗಿರಲಿಲ್ಲ. ಆ ಬಳವೆಯಲ್ಲಿ ಉಡುಪಿಗೆ ಕನ್ನಡ ನವೋದಯದ ದಿಗ್ಗಜಗಳೆಲ್ಲ ಬಂದು ಘೀಂಕರಿಸಿ ಹೋಗಿದ್ದರು – ಅಂತೆ. ಸ್ವಾಮಿಗಳು –ಉಡುಪಿ ಎಂದಮೇಲೆ ಸ್ವಾಮಿಗಳಿರಲೇ ಬೇಕಲ್ಲವೆ? – ಸಾಹಿತ್ಯಕಲಾರಸಿಕರಾಗಿದ್ದರೆ ಊರಿನ ಜನಕ್ಕೆ ಪರ್ಯಾಯದ ಎರಡು ವರ್ಷವೂ ಕರ್ಣರಸಾಯನ. ಈಗ ಮೂವತ್ತು ವರ್ಷಗಳಿಗೆ ಹಿಂದಿನ ಫಲಿಮಾರು ಶ್ರೀಗಳು ಬಿ.ಎಂ.ಶ್ರೀ, ಮುದವೀಡು ಮೊದಲಾದವರನ್ನು ಕರೆಸಿ ಅವರ ವಾಗ್ಮಿತೆಯನ್ನು ಚೌಕಿ ಮೃಷ್ಟಾನ್ನದ ಪ್ರಸಾದದ ಜತೆಗೇ ಊರಿನ ಜನರಿಗೆ ಮನತಣಿಯೆ ಉಣಬಡಿಸಿದರೆಂದು ನಾನು ಕೇಳಿದ್ದೆ; ಇದು ನನ್ನ ಮಟ್ಟಿಗೆ ಕೇವಲ ಕಥಾಶ್ರವಣ. ಆಗ ಉಡುಪಿಯಲ್ಲಿ ಕೊರಡ್ಕಲ್ ಶ್ರೀನಿವಾಸರಾಯರು, ಸಾಂತ್ಯಾರು ವೆಂಕಟರಾಜರು, ತುಳುನಾಡ ಹುದ್ದರಿ ಶ್ರೀನಿವಾಸ ಪಣಿಯಾಡಿ, 'ಅಂತರಂಗ'ದ ಹೈದರ್ – ಎಂ. ವಿ. ಹೆಗ್ಡೆ, ಪಾ. ವೆಂ. ಆಚಾರ್ಯ (ಈಗ ಕಸ್ತೂರಿ ಸಂಪಾದಕ), ಎಸ್. ಎಸ್. ಕಾರಂತ (ನಾ. ಸು. ಹರ್ಡೀಕರ ಅವರ ತೈನಾತಿ) ಅವರ ಕ್ರಿಯಾತಾತ್ಪರ್ಯದ ಕಾಲ. ಕೊರಡ್ಕಲ್ – ನಾಟಕಕಾರರು, ಕಥೆಗಾರರು. ಉಡುಪಿಯ ಬೋರ್ಡ್ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದ ಇವರು ಆಗಿನ ಕಾಲದ ಸೃಷ್ಟಿಶೀಲ ಲೇಖಕರು; ಸಾಮಾನ್ಯತಃ ಸತ್ಯವಾದಿ, ಕಟುವಾದಿ. ವೆಂಕಟರಾಜರು ಉಡುಪಿಯ ಖಾಸಾ ಕವಿಗಳು. ಕನ್ನಡದ ನವೋದಯದ ಕಾಲದಿಂದಲೂ ಭಾವಗೀತೆಗಳನ್ನು ಬರೆಯುವುದರಲ್ಲಿ ಇವರದು ಎತ್ತಿದ ಕೈ. ಉಳಿದವರೆಲ್ಲ ಗಾಂಧೀಯುಗದ ಹುಮ್ಮಸ್ಸಿನ ತರುಣ ಪತ್ರಿಕೋದ್ಯಮಿಗಳು. ಇವರಲ್ಲಿ ಪಾ.ವೆಂ. ಅತ್ಯಂತ ಸೃಷ್ಟಿಶೀಲ, ಮೌಲಿಕ, ಚಿಂತನಶೀಲ ಬರಹಗಾರರಾದರೂ ಜೀವನೋಪಾಯಕ್ಕಾಗಿ ಪತ್ರಿಕೋದ್ಯಮವನ್ನು ನೆಮ್ಮಿಕೊಂಡಿದ್ದರು. ಮೊದಲು ಉಡುಪಿಯ ಕಥೆಗಾರರಾಗಿ ಉದಯಿಸಿ ಆಮೇಲೆ ಪತ್ರಿಕೋದ್ಯಮಕ್ಕೆ ಮಾರುಹೋದ ಬನ್ನಂಜೆ ರಾಮಾಚಾರ್ಯರು ಕೂಡ ಹೆಚ್ಚುಕಡಿಮೆ ಇದೇ ಯುಗಕ್ಕೆ – 1930, 40ರ ದಶಕಕ್ಕೆ ಸೇರಿದ ಸಾಹಿತ್ಯಿಕ ಕಾರ್ಯಕರ್ತರು. ದಾಸರ ಪದಗಳು ಮತ್ತು ಯಕ್ಷಗಾನ ಪ್ರಸಂಗಗಳ ಪ್ರಕಟನೆಗೆ ಪ್ರಸಿದ್ಧರಾದ ಪಾವಂಜೆ ಗುರುರಾಯರು ತಮ್ಮ ದಾಸೋಹವನ್ನು ಸದ್ದಿಲ್ಲದೆ, ಮಾತೇ ಇಲ್ಲದೆ, ನಡೆಸುತ್ತಿದ್ದರು. ಸಂಪ್ರದಾಯ ಶರಣ ಕೃತಿಗಳನ್ನು ಪ್ರಸಿದ್ಧಿಸಿದ ಈ ಪ್ರಕಾಶಕರ ಅಳಿಯಂದಿರಾದ ಶ್ರೀನಿವಾಸ ಪಣಿಯಾಡಿ ಅವರ 'ಅಂತರಂಗ', ತುಳುಭಾಷೆಯ ಅಭಿವೃದ್ಧಿಗಾಗಿ ಅವರು ಮಾಡಿದ ಪ್ರಯತ್ನ, ಸಂಸ್ಥೆಗಳನ್ನು ಕಟ್ಟಿ ಉಡುಪಿಯ ಜನಜೀವನದ ಸಂಘಟನೆ ಮಾಡಲೆಳಸಿದ ಅವರ ಅದಮ್ಯ ಉತ್ಸಾಹ, ಆರ್ಥಿಕ ವಿಪರ್ಯಾಸದಿಂದಾಗಿ ಅವರು ಊರು ಬಿಡಬೇಕಾಗಿ ಬಂದ ದುರ್ಭರ ಸನ್ನಿವೇಶ – ಇವೆಲ್ಲ ನಮ್ಮ ಉಡುಪಿಯ ಇತಿಹಾಸದಲ್ಲಿ ಮನೆಮಾತಾಗಿ ನಿಂತಿವೆ. ಆ ಗಾಂಧೀಯುಗದ ಸ್ವದೇಶಾಭಿಮಾನ, ಹುರುಪು; ನಿರ್ಮಲ – ಸ್ವತಂತ್ರ ಜೀವನಕ್ಕಾಗಿ ಈ ಕೆಲವು ಜನ ಮಾಡಿದ ತಪಸ್ಸು, ತ್ಯಾಗ; ಕೆಲವೇ ರೂಪಾಯಿ ಸಂಬಳ ಪಡೆದರೂ ಅವರು ಸಂಪಾದಿಸಿದ ಪತ್ರಿಕೆಯ ಓರಣ, ಅಚ್ಚುಕಟ್ಟು – ಆರ್ಥಿಕ ದೃಷ್ಟಿ ಮತ್ತು ವ್ಯಾಪಾರಿ ಮನೋವೃತ್ತಿ ಊರಲ್ಲಿನ್ನೂ ಬೆಳೆಯದ ಆ ಕಾಲದಲ್ಲಿ ಸ್ವಾಭಾವಿಕವಾಗಿ, ಸಹಜವಾಗಿ ನೆಲೆಯಾಗಿತ್ತು.

ಉಡುಪಿ ಸಂಪ್ರದಾಯದ ಒಂದು ಕೋಟೆ ಎಂದು ಹೊರಗಿನವರಿಗೆ ತೋರುವುದುಂಟು. ಆದರೆ ವಸ್ತುಸ್ಥಿತಿ ಎಂದೂ ಹಾಗಿರಲಿಲ್ಲ. 1931–1933ರ ಸಂದಿನಲ್ಲಿ ಅಷ್ಟಮಠಗಳ ಎದುರಾಎದುರಿ ಮಠ ಗಳಲ್ಲಿ ನಡೆಯುವ 'ಅನ್ಯಾಯ'ಗಳ ಕುರಿತು ಡಾಣಾಡಂಗುರವಾಗಿ ಇಂಗ್ಲಿಷಿನಲ್ಲಿ ಭಾಷಣ ಮಾಡುವುದು ಸಾಧ್ಯವಾಗಿತ್ತು. ಇಂಗ್ಲಿಷ್ ಭಾಷಣ – ಕನ್ನಡ ಅನುವಾದ ಎಲ್ಲೋ ಕನಸಿನಂತೆ ನನ್ನ ಸ್ಮೃತಿಸಂಪುಟದಲ್ಲಿ ಉಳಿದಿದೆ. 'ಸತ್ಯಾಗ್ರಹಿ' ಎಂಬ ಕಲ್ಲಚ್ಚಿನ ಪತ್ರಿಕೆ ಅಸಹಕಾರ ಚಳವಳಿಯ ಸಂದೇಶವನ್ನು ಗುಪ್ತವಾಗಿ ಉಡುಪಿಯಿಂದ ಮಂಗಳೂರ ವರೆಗೆ ಪ್ರಚಾರ ಮಾಡುತ್ತಿತ್ತು. ಎ. ಬಿ. ಶೆಟ್ಟರಿಂದ ಸ್ಥಾಪಿತವಾದ 'ನವಯುಗ' ಕೆ. ಕೆ. ಶೆಟ್ಟರ ತರುಣ ಸಂಪಾದಕತ್ವದಲ್ಲಿ ಕಾಂಗ್ರೆಸ್ ಪಕ್ಷದ ಮುಖಪತ್ರವಾಗಿ ಜಿಲ್ಲೆಯ ಉತ್ತರ ಭಾಗದ ಜನರಿಗೆ ಪ್ರಯೋಜನ ಬಯಸಿತು. ಶ್ರೀ ಕೆ. ಕೆ. ಶೆಟ್ಟರು ಧೈರ್ಯಶಾಲಿ ವಿಮರ್ಶಕರು. ಆಗಿನ ನಮ್ಮ ಮಠದ ಸಂಸ್ಥಾನಗಳ ಹುಳುಕನ್ನು ನಾಟಕರೂಪವಾಗಿ ಬರೆದು, ಆಡಿಸಿದ್ದರಂತೆ. ಮಂಗಳೂರಿನಿಂದ ಕುಂದಾಪುರದ ವರೆಗೆ ಪಸರಿಸಿದ್ದ ಸ್ವಾತಂತ್ರ್ಯ ಚಳವಳಿಯ ಪ್ರವಾಹದಲ್ಲಿ ಉಡುಪಿ ಒಂದು ಮಧ್ಯಬಿಂದು ವಾಗಿ, ಧಾರ್ಮಿಕ ನೇತೃತ್ವವು ಮಂಜುಮುಸುಕಾದಾಗ ರಾಜಕೀಯದ ಮೊನೆಯನ್ನೂ ಸಮಾಜ ಸುಧಾರ ಣೆಯ ಚೂಪನ್ನೂ, ರೂಢಿಸಿಕೊಂಡ ಒಂದು ಸ್ಥಳವಾಗಿತ್ತು. ಗಾಂಧೀ ಚಳವಳಿಯ ಸಾಮಾಜಿಕ ಸುಧಾರ ಣೆಯ ಅಂಗವಾಗಿ ನನ್ನ ಈ ಉಡುಪಿಯ ಪ್ರಶಾಂತ ಸರೋವರದಲ್ಲಿ ಕಿರಿ ತೆರೆಗಳು ಎದ್ದದ್ದುಂಟು. ಒಂದು ದೃಶ್ಯ ನನಗೆ ಈಗಲೂ ನೆನಪಿಗೆ ಬರುತ್ತದೆ – ನಾನಾಗ ಹೈಸ್ಕೂಲು ವಿದ್ಯಾರ್ಥಿ. ಮಧ್ಯಾಹ್ನ ಮೂರು ಗಂಟೆ ಸಮಯ – ಒಂದು ಅಪೂರ್ವ ಮೆರವಣಿಗೆಯನ್ನು ಕಂಡೆ. ಮುಂಡಾಸು ಸುತ್ತಿ, ಕೇಸರಿ ಬಣ್ಣದ ಅಂಗಿತೊಟ್ಟು, ಅರಸಿನ ಗೊಂಡೆಹೂವಿನ ಮಾಲೆ ಹಾಕಿಕೊಂಡ ಮುದ್ರಾಡಿ ಜನಾರ್ದನ ಆಚಾರ್ಯರು – ಅವರ ಬೆನ್ನಹಿಂದೆ ನಾಲ್ಕಾರು ಜನ 'ಆಚಾರ್ರುಬಗೆ'ಯವರು. ತುಳುವಿನ 'ಕುದ್ಕ ದಿಬ್ಬಣ' (ನರಿ ದಿಬ್ಬಣ)ದ ಮಾದರಿಯ ಈ ಮೆರವಣಿಗೆಯ ಅರ್ಥ ನನಗೆ ಆದದ್ದು ಮತ್ತೆ ಹತ್ತು ವರ್ಷಗಳ ತರುವಾಯ. ಇವರೇ ಸನಾತನಧರ್ಮ ಸಂಸ್ಥಾಪನಾರ್ಥವಾಗಿ ಕಾರಂತರ ವಿಜಾತೀಯ ವಿವಾಹವನ್ನು ತಮ್ಮ 'ಶ್ರೀಕೃಷ್ಣ ಸಂದೇಶ'ವೆಂಬ ಮಾಸಿಕದಲ್ಲಿ ಟೀಕಿಸಿ, ಕೋರ್ಟಿನ ಕಟ್ಟೆ ಹತ್ತಿ, ಜೈಲಿನ ಸೊಗಸನ್ನುಂಡು ಮರಳಿದ ಸಂಪ್ರದಾಯಶೂರರು. ಯಾವ ಬಿರುದುಬಾವಲಿಯೂ ಇಲ್ಲದೆ, ತಮ್ಮಟೆ ದುರುಸು ಬಾಣ ಇಲ್ಲದೆ ಉಡುಪಿಯ ಅಷ್ಟಮಠಗಳು ತೀರ ಸಪ್ಪೆಯಾಗಿ ಅವರನ್ನು ಸ್ವಾಗತಿಸಿದ್ದನ್ನು ಎಣಿಸಿದರೆ, ಇಲ್ಲಿ ಸನಾತನ ಧರ್ಮ ಕೊನೆಗಾಲದಲ್ಲಿ ನಿಂತಿದೆ ಎಂದು ತೋರಬೇಕು; ಕೆಲಗಾಲಾನಂತರ ಮುದ್ರಾಡಿ ಆಚಾರ್ಯರೂ ಉಡುಪಿಯನ್ನು ಬಿಟ್ಟು ಪರದೇಶಿಗಳಾಗಬೇಕಾಯಿತು. ಸಂಪ್ರದಾಯದ ಭದ್ರ ಕೋಟೆಯಲ್ಲಿ ಸಂಪ್ರದಾ ಯದ ಧುರೀಣನಿಗೆ ಸ್ಥಾನವಿರಲಿಲ್ಲ.

ಈ ಹಳೆಗಾಲದ – ನನ್ನ ಬಾಲ್ಯದ ಪರಿಸರದ ಪುನರ್ನಿರ್ಮಾಣ ನನಗೆ ಆಪ್ಯಾಯಮಾನ. ಈ ನನ್ನ ಉಡುಪಿಯಲ್ಲಿ ಎಂದಿನಿಂದಲೂ ಒಂದು ಲವಲವಿಕೆ, ಹುರುಪು, ಏನಾದರೂ ಮಾಡಬೇಕೆಂಬ ಹುಮ್ಮಸ ಇದ್ದೇ ಇರುತಿತ್ತು – ಇದು ಕವಿ ಅಡಿಗರ 'ಏನಾದರೂ ಮಾಡುತಿರು ತಮ್ಮ' ಎಂಬ ಸಮಯ ಭಂಜಕ ಉದ್ಯೋಗವಾಗಿರಲಿಲ್ಲ. ಯಶೋಪ್ರವಾಹದ ದಂಡೆಗುಂಟ ತೆರಳುವ ಪ್ರಯತ್ನವೂ ಆಗಿರಲಿಲ್ಲ. ವಸ್ತುಸ್ಥಿತಿಯನ್ನು ನಿರ್ಭೀತ, ಮುಕ್ತಮನಸ್ಸಿನಿಂದ ಇದಿರಿಸುವ ಛಲ ಉಳ್ಳವರ ತವರೂರು ಉಡುಪಿ ಎನಿಸಿತ್ತು. ವಿಫಲತೆಯೇ ಇಲ್ಲಿನ ಕೆಲವರ ಬದುಕಿನ ಗುರಿಯಾದಂತೆ, ಸೋತು ಊರು ಬಿಡುವುದೇ ಒಂದು ಉದ್ಯೋಗವಾದಂತೆ, ಅನಿಸುತ್ತಿತ್ತು. ಅರ್ಥವುಳ್ಳ ಆದರೂ ಸ್ವಾರ್ಥವಿಲ್ಲದ ಬರಿಯ ಭಾವಗೀತದಂತೆ ಬದುಕನ್ನು ಬಾಳಿ ಉಡುಪಿಯ ಒಂದು ತುಣುಕನ್ನು ತಮ್ಮೆದೆಯಲ್ಲಿ ಹೊತ್ತು ದೂರ ದೂರುಗಳಲ್ಲಿ – ಪರಪ್ರಾಂತ್ಯಗಳಲ್ಲಿ – ನವೆದು ಜೀವ ತೇದ ಈ ಧೀರರ ನೆನಪೂ ಈಗಿನ ಉಡುಪಿಯ ಜನಸಾಮಾನ್ಯಕ್ಕಿರಲಾರದು.

ಉಡುಪಿ ನ್ಯಾಯವಾಗಿ ತುಳುವಿನ ಕೇಂದ್ರವಾಗಬೇಕಾಗಿತ್ತು. ತುಳು ಸಂಸ್ಕೃತಿಯನ್ನು ಬಿತ್ತರಿಸುವ ಹೃದಯಸ್ಥಾನವಾಗಬೇಕಾಗಿತ್ತು. ಇಲ್ಲಿನ ವಿಪುಲ ಮಠೀಯ ಸಂಪತ್ತು ಯಾವ ಪುರುಷಾರ್ಥಕ್ಕೂ ಬಾರದೆ ಹೋಯಿತೆಂದು ವಿವೇಕಿಗಳಿಗೆ ಅನಿಸಿದರೆ ಅದರಲ್ಲಿ ತಪ್ಪಿಲ್ಲ. ಉಡುಪಿ ಶ್ರೀಕೃಷ್ಣ ಮಠದ. ಪೂಜೆ, ಪುನಸ್ಕಾರ, ಮೃಷ್ಟಾನ್ನ, ಪ್ರಸಾದ ಇಷ್ಟೇ ಒಂದು ವಿಧಿನಿಯಮದಂತೆ ಇಲ್ಲಿ ನಡೆಯುತ್ತಿದೆ

ಮಠಗಳ ಪಾಂಡಿತ್ಯ ಮತ್ತು ಗುರುತ್ವದ ವಿಸ್ಮರಣ ಉಡುಪಿಯಲ್ಲೇ ಸರಿಯಾಗಿ ಆಗದಿದ್ದರೆ ದ್ವೈತ ವೇದಾಂತದ ಪ್ರತಿಫಲನ, ಪ್ರತಿಧ್ವನಿ ಎಲ್ಲಿ ಕೇಳಿಸಬೇಕು? ಈಗಂತೂ ವೇದಘೋಷ ಟೇಪುಗಳಲ್ಲಿ, ಸಹಸ್ರನಾಮ ರಿಕಾರ್ಡು ಮತ್ತು ಬಾನುಲಿಯಲ್ಲಿ ಕೇಳಿಸುವ ದುಷ್ಕಾಲವೂ ಬಂದಿದೆ. ಹೀಗಾಗಿ ಇಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡುವ ಹೊಣೆ ಜನರ ಮೇಲೆ ಬೀಳಬೇಕಾಯಿತು.

ಈ ಹೊಣೆಯನ್ನು ಅರಿತು, ಆಚರಿಸಿದವರಲ್ಲಿ ದಿ| ನಿಡಂಬೂರು ರಾಜಗೋಪಾಲಕೃಷ್ಣರಾಯರು ಎಲ್ಲರಿಗೂ ಆದ್ಯರು. ಉಡುಪಿಯ ಸಾಹಿತ್ಯಿಕ ಚಳವಳಿಯ ಅಗ್ರಗಾಮಿಗಳಾದ ಇವರು ಬಂಗಾಳಿ ಕಲಿತು, ಕೃಷ್ಣಸೂಕ್ತಿ ಸಂಪಾದಿಸಿ, ಆಲೂರ, ಮುದವೀಡು, ಪಂಜೆಯವರ ಸಮಕಾಲೀನರಾಗಿ ಕನ್ನಡದ ಕೆಲಸ ವನ್ನು ಈ ಊರಲ್ಲಿ ಮೂರು ನಾಲ್ಕು ದಶಕಗಳ ಕಾಲ ನಡೆಸಿಕೊಟ್ಟರು. ಕರ್ನಾಟಕಸ್ಥರಾದ ಇವರಿಗೆ ಮೈಸೂರು – ಧಾರವಾಡದ ಕಡೆಯ ಕನ್ನಡ ಸಾಹಿತಿಗಳೆಂದರೆ ಪಂಚಪ್ರಾಣ. 1943ರ ಸುಮಾರಿಗೆ ಸ್ಥಾಪಿತವಾದ ಉಡುಪಿಯ ಕರ್ನಾಟಕ ಸಂಘಕ್ಕೆ ರಾಯರೇ ಜೀವಾಳ – ಸಾಂಸ್ಕೃತಿಕವಾಗಿಯೂ, ಆರ್ಥಿಕ ವಾಗಿಯೂ. ಬಂದ ಸಾಹಿತಿಗಳನ್ನು ಕಡೆಕಾರಿನ ತಮ್ಮ ನಿವಾಸಕ್ಕೆ ಕರೆದೊಯ್ದು ಅತಿಥಿಸತ್ಕಾರ ಮಾಡಿ ದಷ್ಟೂ ರಾಯರು ದಣಿಯರು. 1910–20ರ ದಶಕದ 'ಕೃಷ್ಣಸೂಕ್ತಿ' ಸಂಪಾದಕ ರಾಯರು ನನಗೆ ಗೊತ್ತಿಲ್ಲ; ಆದರೆ ಕರ್ನಾಟಕ ಸಂಘದ ಅಧ್ಯಕ್ಷತನದಿಂದ ಅವರು ದಸರೆಗೆ ಒಂದು ವಾರ ಇಡೀ – ಸುಮಾರು ಹತ್ತು ವರ್ಷ – ಏರ್ಪಡಿಸಿದ ನಾಡಹಬ್ಬ ನನಗೆ ಅನುಭವವೇದ್ಯ. ರಾಯರಂಥ ಹಿರಿಯರು ಕರೆದರೆ ಬರದಿರುವ ಸಾಹಿತಿ ಯಾರು? ದಿನಕ್ಕೆ ಬೆಳಗ್ಗೆ – ಸಂಜೆ ಎಂಟೆಂಟು ಜನ ಸಾಹಿತಿಗಳು ಭಾಷಣ ಮಾಡಿದ್ದೂ ಉಂಟು. ಭಾಷಣ ಮುಗಿದ ಮೇಲೆ ನಾಟಕ, ಯಕ್ಷಗಾನದ ವಿನೋದದ ಸರದಿ. ಸಾಹಿತಿಗಳ ಆಗಮನ, ನಿರ್ಗಮನಕ್ಕೆ ಸಿ.ಪಿ.ಸಿ. ಕಂಪೆನಿಯ ಕುಡ್ವರ ಸಹಕಾರ. ಅವರ ಕಂಪೆನಿಯ ಬಸ್ಸು ಓಡುವಲ್ಲಿ ಸಾಹಿತಿಗಳಿಗೆ, ಅಭ್ಯಾಗತರಿಗೆ ಪುಕ್ಕಟೆ ಪ್ರವಾಸ. ಪ್ರತಿಯೊಬ್ಬರ ಹೆಸರಿಗೂ ಬರುವ–ಹೋಗುವ ಟಿಕೇಟು ಬರೆದು ಸಮಾರಂಭಕ್ಕೆ ಮೂರು ದಿನ ಇರುವಾಗಲೇ ಅಂಚೆಯಿಂದ ರವಾನಿಸುತ್ತಿದ್ದ ಶ್ರೀ ವಾಮನ ಕುಡ್ವರ (ಇವರ ಕಾರ್ಯಕ್ಷೇತ್ರವೂ ಮೊತ್ತಮೊದಲು ಉಡುಪಿಯಲ್ಲಿ ಇತ್ತು ಎಂಬುದು ಇಲ್ಲಿ ಸ್ಮರಣೀಯ) ಔದಾರ್ಯ ಮರೆಯುವಂಥದಾಗಿರಲಿಲ್ಲ. ಉಡುಪಿಯಿಂದ ಕುಂದಾಪುರದ ವರೆಗಿನ ಕನ್ನಡ ಅಭಿಮಾನಿ ಗಳಿಗೆ ರಾಯರ ಕೃಪೆಯಿಂದ ಸಾಹಿತ್ಯದ ರಸದೌತಣ ದೊರೆಯುತ್ತಿತ್ತು.

ಅಷ್ಟು ಹೊತ್ತಿಗೆ – ಪ್ರಾಯಃ ನಾನು ಆಗ ಕ್ರಿಶ್ಚನ್ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿದ್ದೆ – ಸಾಕಷ್ಟು ಹಿಂದೀ – ಕನ್ನಡ ಓದಿಕೊಂಡಿದ್ದೆ – ನನ್ನ ಸಾಹಿತ್ಯದ ಕಣ್ಣು ತೆರೆಯಿತು. ಖಾಸಗಿಯಾಗಿ 18ನೆಯ ವಯ ಸ್ಸಿಗೆ ಪ್ರಾಥಮಿಕ ಶಾಲೆಯ ಉಪಾಧ್ಯಾಯತನದ ಒಜ್ಜೆ ಹೊತ್ತ ನನಗೆ, ನನ್ನ ಓರಗೆಯವರೆಲ್ಲ ಡಿಗ್ರಿವಂತ ರಾದ್ದು ಕಂಡು ಖಾಸಗಿಯಾಗಿಯೇ ಕಟ್ಟಿ ಅವರನ್ನೆಲ್ಲ ಮೀರಿಸುವ ಚಪಲ ಸೇರಿಕೊಂಡಿತ್ತು. ಮಂಗಳೂರಿನ ಲ್ಲಿದ್ದಾಗ ಮುಳಿಯದವರು, ಕಡೆಂಗೋಡ್ಲು, ಸೇಡಿಯಾಪು, ಏಕೆ, ಸ್ವತಃ ಶಿವರಾಮ ಕಾರಂತರೇ ಪಾಠ ಹೇಳುತ್ತಿದ್ದ 'ಕನ್ನಡ ಜಾಣ' ತರಗತಿಗೆ ವರ್ಷದ ಕೊನೆಯಲ್ಲಿ ಸೇರಿದರೂ ಪಾಸಾಗುವ 'ಜಾಣ' ತನವನ್ನು ಮೆರೆದೆ. ತದನಂತರ ಮದರಾಸಿನ ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾಂಸನೆನಿಸಿದೆ. ಇಂಟರ್ ಪರೀಕ್ಷೆ ಖಾಸಗಿಯಾಗಿ ರ್‍ಯಾಂಕ್ ಸಹಿತ ಪಾಸಾಗಿ ಸಾಹಿತ್ಯದ ಹೆಚ್ಚಿನ ಅಭ್ಯಾಸಕ್ಕಾಗಿ ಮದ್ರಾಸಿಗೆ ಹೊರಟೆ. ಅಲ್ಲಿ ನನಗೆ ಒದಗಿದ ಸ್ನೇಹಿತರು ಮತ್ತು ಕ್ರಿಶ್ಚನ್ ಕಾಲೇಜಿನ ನಿರ್ಮಲ ಪರಿಸರದ ದೆಸೆಯಿಂದ ನನ್ನ ಓದು ಅವಿರತವಾಗಿ ಸಾಗಿತು. ಬಾಗಲೋಡಿ ದೇವರಾಯರ ಉತ್ತೇಜನ, ಸೇವ ನಮಿರಾಜ ಮಲ್ಲರ ಸಾಹಚರ್ಯಗಳಿಂದ ಬರೆಯುವ ಗೀಳೂ ಹತ್ತಿಕೊಂಡಿತು. ಓದಿ ರಾಶಿ ಹಾಕುವುದಂತೂ ಒಂದೇ ಸವನೆ ನಡೆಯಿತು. ಓದುವುದು ಅರ್ಥಶಾಸ್ತ್ರವಾದರೂ, ನನ್ನ ಪ್ರೀತಿ ಎಲ್ಲ ಸಾಹಿತ್ಯದ ಕಡೆಗೇ. ಅಂತೂ 1950ರ ಹೊತ್ತಿಗೆ ಉಡುಪಿಗೆ ಮರಳಿ ಆಗತಾನೇ ಸ್ಥಾಪಿತವಾದ ಈ ಕಾಲೇಜಿಗೆ ಉಪಾಧ್ಯಾಯನಾಗಿ ಸೇರಿದಾಗ ನನ್ನ ಪ್ರಾಥಮಿಕ ಶಾಲಾ ಮಾಸ್ತರಿಕೆಯ ಪುಕ್ಕಲು, ಅಳುಕು, ಅಳುಬುರುಕತನ ಮಾಯವಾಗಿ ನಾನು ಕನ್ನಡಿ–ಗರಡಿ–ಯಾಳು ಆಗಿಬಿಟ್ಟಿದ್ದೆ. ಅದೇ ವರ್ಷ ರಾಜಗೋಪಾಲರಾಯರ ಅಧ್ಯಕ್ಷತನದ ಸಂಘಕ್ಕೆ ಕಾರ್ಯದರ್ಶಿ ಆದೆ. ಇಷ್ಟು ನನ್ನ ಸಾಹಿತ್ಯ ಸಂಘಟನೆಯ ಉಪೋದ್ಘಾತ. ಈ ಸಂಘಟನೆ ಹೊರತು,

ಹೊರಗೆ ನನ್ನ ಬದುಕಿನ ಅರ್ಥ ಸಾಹಿತ್ಯದ ಮಟ್ಟಿಗೆ ಹೆಚ್ಚು ವಿಸ್ತರಿಸಲಿಲ್ಲವಾದ್ದರಿಂದ ಇದೇ ನನ್ನ ಆತ್ಮ ಕಥನವೂ ಆದೀತು.

೨

ನನ್ನ ಕನ್ನಡ ಸಂಘಟನೆಯ ಮೊದಲ ವರ್ಷದ ಅನುಭವ ಎಲ್ಲಾ ಸಾರ್ವಜನಿಕ ಕಾರ್ಯಕರ್ತರಿಗೆ ಆಗುವಂಥದೇ ಆಯಿತು. ಸಿಹಿ-ಕಹಿ, ನೆಳಲು-ಬೆಳಕು. ನಾಡಹಬ್ಬದ ಕಾರ್ಯಕ್ರಮವನ್ನು ರೇಶನಿಂಗ್ ಜಾರಿಯಲ್ಲಿದ್ದ ಆ ಕಾಲದಲ್ಲಿ ಮೂರು ದಿನಕ್ಕೆ ಇಳಿಸಿದರೂ ಬೇಕೆನಿಸುವಷ್ಟು ಧನಸಂಗ್ರಹ ಮಾಡುವಾಗ ಊರಿನ ಹಿರಿಯರ, ಮಹನೀಯರ ಕಟೂಕ್ತಿ ವೈದ್ಯರ ಸೂಜಿಯಂತೆ ಚುಚ್ಚುತ್ತಿತ್ತು. ನನ್ನ ಜತೆ ನಿ. ರಾಜ ಗೋಪಾಲರಾಯರ ಅಭಿಮಾನಿಗಳಾದ ಒಬ್ಬ ಜನಪ್ರಿಯ ವೈದ್ಯಡಾ। ಐತಾಳರೇ ಬಂದರೂ ಅವರಿಗೂ ಜನ ಅನ್ನುವ ಮಾತು ಕೇಳಿ ಕನ್ನಡದ ಕೆಲಸಗಾರರಿಗೆ ಮೊದಲ ಅರ್ಹತೆ ಕಿವಿ ಕಿವುಡಾಗಿರಬೇಕು ಅನಿಸಿತು. ಒಬ್ಬ ಮಹನೀಯರು ನಾವು ಬಂದ ಇರಾದೆ ತಿಳಿದಮೇಲೆ ಮೇಜಿನ ಮೇಲಿಟ್ಟ ಕಾಲನ್ನು ಹಿಂತೆಗೆಯದೆ ಅವರ ಪವಿತ್ರ ಪಾದಗಳನ್ನಷ್ಟು ತೋರಿಸಿದರು, ಪುಣ್ಯಕ್ಕೆ ಮನೆಯ ಹಜಾರದಲ್ಲಿ ಅವರು ಕೂತಿದ್ದುದ ರಿಂದ ಕಾಲುಗಳಿಗಿರಬೇಕಾದ 'ರಕ್ಷೆ'ಯ ದರ್ಶನ ನಮಗಾಗಲಿಲ್ಲ. ಇನ್ನೊಂದು ಕಡೆ 'ಹೌದಯ್ಯಾ, ನಿಮಗೆ ಈ ಭಿಕ್ಷೆ ಬೇಡುವ ಕೆಲಸ ಯಾಕೆ ಬೇಕು?' ಅಂದರು. ಕೊಡುವ ಅಥವಾ ಕೊಡದ ಒಂದು ರೂಪಾಯಿಗೆ ಅವರನ್ನುವ ಮಾತುಗಳನ್ನುವ ಕೇಳಿ ನಾನು ನಾಡಹಬ್ಬ ಮುಗಿದ ಮೇಲೆ, ಕಾರಂತರಿಗೆ ಒಂದು ಪತ್ರ ಬರೆದು 'ಈ ಕೆಲಸ ಯಾತಕ್ಕಾಗಿ ಮಾಡಬೇಕು?' ಎಂದು ಪ್ರಶ್ನೆ ಕೇಳಿದೆ. ಅವರಿಂದ ಅನುಭವದ ಉತ್ತರ ಬಂತು – 'ಸಂಘದ ಕೆಲಸ ಎಂದರೆ ಇರುವುದೇ ಹೀಗೆ – ಯಾರಾದರೂ ಕತ್ತೆ ಚಾಕರಿ ಮಾಡುತ್ತಿರಬೇಕು, ಅನಿಸಿ ಕೊಳ್ಳಲೇಬೇಕು.' ಈ ವಾಕ್ಯ ಆಮೇಲಿನ ಹಲವರ್ಷಗಳ ನನ್ನ ಕಾರ್ಯದರ್ಶಿತ್ವಕ್ಕೆ ವಜ್ರಕವಚವಾಯಿತು. ಕಿವಿ ಕಿವುಡಾಗದಿದ್ದರೂ, ನನ್ನ ಚರ್ಮ ದಪ್ಪವಾಯಿತು.

ಆ ವರ್ಷ ಗೊರೂರು ಅವರು ನಮ್ಮ ಮುಖ್ಯ ಅತಿಥಿಗಳು. ನಾನಾಗ ಇನ್ನೂ ಬ್ರಹ್ಮಚಾರಿ ಆದ್ದ ರಿಂದ ಸಾಹಿತಿಗಳಿಗೆ ಬಿಡಾರ ಉಡುಪಿಯ ಹೋಟೆಲೊಂದರಲ್ಲಿ ಮಾಡಿದ್ದೆ. ಸಾಹಿತಿಗಳನ್ನು ನೋಡಿ ಕೊಳ್ಳಲು ಗೆಳೆಯ ಬನ್ನಂಜೆಯವರನ್ನು ಪ್ರಾರ್ಥಿಸಿಕೊಂಡಿದ್ದೆ. ಗೊರೂರು ಅವರು ಬಸ್ಸಿಂದ ಬಂದಿಳಿದಾಗ ಯಾರೂ ಇರಲಿಲ್ಲ; ಅವರೇ ನಮ್ಮನ್ನು ಹುಡುಕಿಕೊಂಡು ಬಂದರು; ಯಾವಾಗಲೂ ನಗುಮೊಗದ ಸ್ವಾಗತ ನೀಡುತ್ತಿದ್ದ ಅವರ ಮಾನವೀಯ ದೃಷ್ಟಿ – ಸಾಹಿತಿಗಳನೇಕರಲ್ಲಿ ವಿರಳವಾದ ಗುಣ – ಎಂದು ಕೊಂಡಿದ್ದೇನೆ. 'ರಾಮಾಚಾರ್ರೆ, ನೀವು ಒಂದ್ಕೆಲಸ ಮಾಡಿ, ಈ ಹೋಟಲಿನವರು ಹಾಕುವ ರೇಶನ್ ನನಗೆ ಸಾಲುವುದಿಲ್ಲ, ಬೇರೆಲ್ಲಾದರೂ ಊಟ ಮಾಡಿಸಿ' ಎಂದರಂತೆ ಗೊರೂರು. ರಾಮಾಚಾರ್ಯರು ಅವರನ್ನು ಇನ್ನೊಂದು ಕಡೆ ಒಯ್ದು ಎರಡನೇ ಊಟ ಮಾಡಿಸಿದ ಕಥೆ ಹೇಳಿದರು. ಮರುವರ್ಷ ಎಂ. ಆರ್. ಶ್ರೀ ಅವರು ಬರುವಾಗಲೂ ಬಸ್ಸು ಬರುವ ಹೊತ್ತಿಗೆ ನಮ್ಮ ಸ್ವಯಂಸೇವಕರು ಕಾಣೆ – ಹಾಗಾಗಿ ಅವರ ಬಿಡಾರದ ಫಲಿಮಾರು ಮಠವನ್ನು ಅವರೇ ಹುಡುಕಿಕೊಂಡು ಬರುವಂತಾಯಿತು. ಹಿಂದಿನ ನಾಡಹಬ್ಬದ ಆಯವ್ಯಯ ಪಟ್ಟಿಯನ್ನು ತೆಗೆದು ನೋಡಿದಾಗ ಕಾಲಂಶ ವೆಚ್ಚ ಸ್ವಯಂಸೇವಕರ ಸ್ವಯಂ ಸೇವನೆಗೇ ಮೀಸಲಾದ್ದನ್ನು ಕಂಡು ನನ್ನ ಮೊದಲ ಸುಗ್ರೀವಾಜ್ಞೆ ಹೊರಡಿಸಿದೆ – ಸ್ವಯಂಸೇವಕರು ಕೈಬೆರಳೆಣಿಕೆಗಿಂತ ಮೀರಬಾರದು; ಅವರು ಅವರವರ ಮನೆಯಲ್ಲಿ ತಿಂಡಿತೀರ್ಥ ಮಾಡಿ ಬರಬೇಕು. ಹೀಗಾಗಿ ನಾವು ಸಂಗ್ರಹ ಮಾಡುತ್ತಿದ್ದ 300–350 ರೂಪಾಯಿಗಳಲ್ಲಿ ಮೂರು ದಿನಗಳ ಗಡದ್ದಾದ ಉತ್ಸವ ನಡೆಸಲು ಬರುತ್ತಿತ್ತು. ಪ್ರಥಮ ವರ್ಷದಲ್ಲಿ ನಾನು ಕಂಡುಕೊಂಡ ವಿಷಯ: ಕಾರ್ಯ ಸಮಿತಿ ಎಂದರೆ ಒಂದು ನಾಮ್‌ಕೇ ವಾಸ್ತೇ ಬಂಧನ; ಕೆಲಸ ಮಾಡಲು ಸಿಗುವವರೆಲ್ಲ ನಿಮ್ಮ ಆಪ್ತರೇ ಆಗ ತಕ್ಕದ್ದು. ಐನ್ ಸಮಯ ನಿಮಗೆ ಕೈಕೊಡಬೇಕಾದರೆ ಕಾರ್ಯಸಮಿತಿಯ ಸದಸ್ಯರಿಗೋ, ನಿಮ್ಮ ಜತೆ ಕಾರ್ಯದರ್ಶಿಗೋ ಒಂದು ಕೆಲಸ ಕಟ್ಟಿಕೊಡಿ – ಹೊತ್ತಿಗೆ ಆತ ಇರುವುದೂ ಇಲ್ಲ, ಬರುವುದೂ ಇಲ್ಲ. ಪ್ರಧಾನ ಕಾರ್ಯದರ್ಶಿ ಹೇರುಗತ್ತೆಯಾಗಿ ದುಡಿಯಲು ಸಿದ್ಧನಾಗಬೇಕು. ಅವನಿಗೆ ನೆರವಾಗಲು ಆತ್ಮೀಯರನ್ನೇ ಕರೆದುಕೊಳ್ಳಬೇಕು: ಜೀವನದ ಇತರ ರಂಗಗಳವರು ಆದರೆ ಒಳ್ಳೆಯದು. ಸಾಹಿತಿಗಳ

ನ್ನಂತೂ ಹತ್ತಿರ ಬರಗೊಡಬಾರದು. ತಮಗೆ ಸಲ್ಲದ ಗೌರವ ಈತ ಬೇರೆಯವರಿಗೆ – ನಮ್ಮ ಊರ ಲ್ಲಂತೂ ಆ ಕಾಲಕ್ಕೆ 'ಮೈಸೂರವರಿಗೆ' – ಈತ ಯಾಕೆ ಸಲ್ಲಿಸಬೇಕು,ನಾವೇನು ಕಮ್ಮಿ ಎಂಬ ಧೋರಣೆ ಉಳಿದುಕೊಂಡಿರಲಾಗಿ ನನ್ನ ಕಷ್ಟಕಾಲದಲ್ಲಿ ನೆರವಿಗೆ ನಿಂತವರು ನನ್ನ ಓರಗೆಯ ಕೆಲವರು ವ್ಯಾಪಾರೀ ಮಿತ್ರರು, ಒಬ್ಬಿಬ್ಬರು ನನ್ನ ಸಹೋಪಾಧ್ಯಾಯರು – ಅಷ್ಟೇ. ಸುಮಾರು ನಾಲ್ಕೈದು ವರ್ಷಗಳ ಕಾಲ ಕರ್ನಾಟಕ ಸಂಘ ತನ್ನ ಮೂರು ದಿನದ ನಾಡಹಬ್ಬವನ್ನು ಯಶಸ್ವಿಯಾಗಿ ನಿರ್ವಹಿಸಿತು. ರಾಜಗೋಪಾಲ ರಾಯರು ದಿವಂಗತರಾದ ಬಳಿಕ ಸಿಂಡಿಕೇಟ್ ಬ್ಯಾಂಕಿನ ಟಿ. ಎ. ಪೈ ಸಂಘದ ಅಧ್ಯಕ್ಷರಾದರು. ಅವರ ಬಳಿಕ ಡಾ। ಕೆ. ಎಲ್. ಐತಾಳರು. ಸುಮಾರು ಹದಿನೈದು – 1955ರಿಂದ ಈ 1970ರ ವರೆಗೆ – ಸಂಘ ನಿಶ್ಚೇಷ್ಟವಾಯಿತು. ಈ ನಿರುದ್ಯೋಗ ಪರ್ವದಲ್ಲಿಯೂ ನನ್ನ ಹೆಸರು ಕಾರ್ಯದರ್ಶಿ ಎಂದೋ, ಕೊನೆಗೆ ಅಧ್ಯಕ್ಷನೆಂದೋ 'ರಾರಾಜಿಸು'ತ್ತಲೇ ಇದ್ದರೂ, ಸಂಘದ ಹೆಸರು ಉಡುಪಿಯ ಗತಕಾಲದ ವೈಭವಕ್ಕೆ ಸೇರಿಕೊಂಡಿತು. ಇದಕ್ಕೆ ಒಂದು ಕಾರಣ ಕಾರ್ಯಕರ್ತರ – ನನ್ನನ್ನು ಸೇರಿಸಿ – ಔದಾಸೀನ್ಯ; ಇನ್ನೊಂದು ಅಷ್ಟು ಹೊತ್ತಿಗೆ ಉಡುಪಿಯಲ್ಲಿ ಉದಯವಾದ ಒಂದು ಅಪೂರ್ವ ಶೈಕ್ಷಣಿಕ ಸಂಘಟನೆಯ ಬದಲಿ ವೇದಿಕೆ. ನಾನು ಮಣಿಪಾಲದ ಎಕಾಡೆಮಿಯ ಒಂದು ಕಾಲೇಜಿನ ನೌಕರನಾದರೂ ಸಂಸ್ಥೆಯ ಮುಖ್ಯ ಸ್ಥರು ನನ್ನ ಮೇಲೆ ತೋರಿದ ಪ್ರೀತಿ, ವಿಶ್ವಾಸ, ನಂಬಿಕೆಯ ದ್ಯೋತಕವಾಗಿ ಕನ್ನಡದ ಚಟುವಟಿಕೆಗಳಿಗೆ ನಾನು ಈ ಬದಲಿ ವೇದಿಕೆಯನ್ನೇ ಬಳಸಿಕೊಂಡೆ. ಇಲ್ಲಿ ಕ್ರಯಕೊಟ್ಟು ಪಡೆದುಕೊಳ್ಳಬೇಕಾದ ಎಷ್ಟೋ ಸವಲತ್ತುಗಳು ತನ್ನಿಂತಾನೆ ಯಾವ ವೆಚ್ಚವೂ ಇಲ್ಲದೆ ನಮಗೆ ಲಭ್ಯವಾಗುತ್ತಿರುವಾಗ ಊರೆಲ್ಲ ಬಿಕ್ಕೆ ಬೇಡಿ ಕನ್ನಡ ಸಂಘದ ಉತ್ಸವ ಏಕೆ ನಡೆಸಬೇಕು ಎಂದು ನನಗೆ ಅನಿಸಿತು. ಅಲ್ಲದೆ ನಾಡಹಬ್ಬದ ಕಾರ್ಯ ಕ್ರಮಗಳು 1956ರ ನಂತರ ಸಂಪ್ರದಾಯದಂತೆ ಸರ್ವವ್ಯಾಪಿಯಾಗಿ ತಹಸೀಲ್ದಾರರ ಮುಖಾಂತರ ಅರ್ಥವಿಹೀನವಾಗಿ ನಡೆಯುವ ವಿದ್ಯಮಾನದಿಂದ ನನಗೆ ನಾಡಹಬ್ಬದಿಂದ ನುಣುಚಿಕೊಳ್ಳುವುದೇ ಜಾಣತನವೆಂದು ತೋರಿತು. ಈ ಪ್ರವೃತ್ತಿಗೆ ಪೋಷಕವಾಗಿ ನಡೆದ ಕೆಲವು ಸನ್ನಿವೇಶಗಳನ್ನು ನಾನು ನಿರೂಪಿಸಲೇಬೇಕು. ಕರ್ನಾಟಕ ರಾಜ್ಯೋದಯವಾದ ತಕ್ಷಣ ನಮ್ಮ ಸಾಹಿತಿ ವರ್ಗದಲ್ಲಿ ಏನೋ ನಿರಾಶೆ ಮೂಡಿದಂತೆ, ನನಗೆ ಅನುಭವವಾಯಿತು. ಕರೆದವರು ಬಂದಾರೆಂದು ಕತ್ತುಚಾಚಿ ಎಷ್ಟೋ ಸಾರಿ ನಿರಾಶರಾಗುವ, ಬಂದ ಸಭಿಕರಿಗೆ ಅಂಗಲಾಚುವ, ಅಥವಾ ಸ್ವತಃ ನಾನೇ ಭಾಷಣ ಮಾಡಿ – ಅರ್ಥಾತ್ ಯಾರೂ ಇಲ್ಲದ್ದಕ್ಕೆ ಕಾರ್ಯದರ್ಶಿಯಾದವನೇ ಪ್ರಾರ್ಥನೆಯಿಂದ ಹಿಡಿದು, ಭಾಷಣ, ವಂದನಾರ್ಪಣೆ ಎಲ್ಲವನ್ನೂ ಸಾಕಲ್ಯವಾಗಿ ಮಾಡಬೇಕಾದ ವಿಕಟ ಸನ್ನಿವೇಶ ಒದಗಿದಾಗ ಸಂಘದ ಮೇಲೆ ನನಗೆ ವಾಸ್ತವವಾಗಿ ಜುಗುಪ್ಸೆ ಹುಟ್ಟಿತು. ಒಂದು ವರ್ಷ ಉಡುಪಿ ಶ್ರೀಕೃಷ್ಣ ಮಠದಲ್ಲಿ ಪೇಜಾ ವರ ಶ್ರೀಗಳ ಪರ್ಯಾಯ ಕಾಲದಲ್ಲಿ ನಮ್ಮ ಮಠ, ಸಂಘದ ಸಂಯುಕ್ತ ನಾಡಹಬ್ಬ ಕಾರ್ಯಕ್ರಮಕ್ಕೆ ಎರಡು ದಿನ ಬರಬೇಕಾದ ಇಬ್ಬಿಬ್ಬರೂ ಗೈರುಹಾಜರಾಗಿ ನಾನೇ ಎಲ್ಲಿಂದಲೋ ಓಡೋಡಿ ಬಂದು ಅನಿವಾರ್ಯ ಭಾಷಣ ಮಾಡಿ ನಗೆಗೀಡಾದ ಪ್ರಸಂಗ ನೆನಪಿಗೆ ಬರುತ್ತಿದೆ. ಅಂದಿನಿಂದ ಸಂಘದ ಚಟು ವಟಿಕೆಗೆ ಶ್ರೀಕೃಷ್ಣಾರ್ಪಣವೇ ಆಯಿತು. (ಆದರೆ ಉಡುಪಿಯ ಲಕ್ಷಣವೋ ಏನೋ ಮತ್ತೆ ಈ ಇಪ್ಪ ತ್ತೇಳನೇ ವರ್ಷದಲ್ಲಿ, ಸಂಘವು ವರಕವಿ ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ತರುಣ ಲೇಖಕರ, ಪತ್ರಿಕೋದ್ಯಮಿಗಳ ಒಂದು ಚಿಂತನಶೀಲ ಚರ್ಚಾಕೂಟವಾಗಿ, ಬರೆಹಗಾರರ ಬಳಗವನ್ನು ಕಟ್ಟಿ, ಕಾರ್ಯ ತತ್ಪರವಾಗಿರುವುದು ಸಂತೋಷದ ವಿಚಾರ. ಸಂಘದ ಕೆಲಸಕ್ಕೆ ಅಣಿಯಾದ ಈ ಅಕ್ಷಯಕುಮಾರರಿಗೆ ನನ್ನ ಶುಭಾಶಯಗಳುಂಟು.) ಸಂಘದ ನಿತ್ಯನೈಮಿತ್ತಿಕ, ಕಾಲಾವಧಿಯ ನಾಡಹಬ್ಬ ಮುಂತಾದ ಚಟು ವಟಿಕೆಗಳು ಹಿಂದಾಗಲು ಇನ್ನೂ ಒಂದು ಪ್ರಬಲ ಕಾರಣ ಸಂಘದೊಳಗಿನ ನಾನೇ – ನಾವುಗಳೇ – ಆದೆವು.

(ಅ) ನಮ್ಮ ಕಾಲೇಜಿನ ಪ್ರಪ್ರಥಮ ಪ್ರಿನ್ಸಿಪಾಲ್ ಸುಂದರರಾಯರು ಇಂಗ್ಲಿಷ್ ಸಾಹಿತ್ಯದಲ್ಲಿ ಶ್ರೇಷ್ಠ ಅಧ್ಯಾಪಕರೂ ಒಟ್ಟು ಸಾಹಿತ್ಯದ ಅಭಿಮಾನಿಗಳೂ ಆಗಿದ್ದರು. ಉಡುಪಿ ಕವಿ ಮುದ್ದಣನ ಖಾಸಾ ಆಡುಂಬೊಲವಾದ್ದರಿಂದ ಮುದ್ದಣನ ಹೆಸರಲ್ಲಿ ನಾವು ಮೂರು ದಿನಗಳ ಸಾಹಿತ್ಯೋತ್ಸವ ನಡೆಸಬೇಕೆಂಬ ಸೂಚನೆಗೆ ಅವರು ಬೆಂಬಲವಿತ್ತರು. ಕಾಲೇಜಿನ ಭಾಷಾ ಸಂಘದ ಆಶ್ರಯದಲ್ಲಿ

ಈ ಹದಿನೈದು ವರ್ಷಗಳಿಂದ ಏಕಪ್ರಕಾರವಾಗಿ ಮುದ್ದಣನ ಸ್ಮರಣೆಯಲ್ಲಿ ಸಾಹಿತ್ಯದ ಉಪನ್ಯಾಸಗಳೂ, ಕವಿಸಮ್ಮೇಳನಗಳೂ, ಚರ್ಚಾಗೋಷ್ಠಿಗಳೂ ನಡೆದುಬಂದಿವೆ. ಉತ್ಸಾಹಿ ವಿದ್ಯಾರ್ಥಿಗಳೂ, ಪ್ರಾಧ್ಯಾಪಕರೂ ಸಂತೋಷವಾಗಿ ಸ್ವಯಂಸೇವಕರಾಗಿ ದುಡಿಯುತ್ತಾರೆ, ಅತಿಥಿಗಳಿಗಾಗಿ ಅತಿಥಿಗೃಹವುಂಟು, ಆರ್ಥಿಕವಾಗಿ ಪ್ರಿನ್ಸಿಪಾಲ ಸುಂದರರಾಯರ ಕೊಡುಗೈತನವುಂಟು – ಎನ್ನುವಾಗ ಮುದ್ದಣ ಸ್ಮಾರಕ ಸಾಹಿತ್ಯೋತ್ಸವ ಉಡುಪಿಯ ತರುಣ ಜನಾಂಗಕ್ಕೆ ಎರಡು ಮೂರು ದಿನಗಳ ಸಂಭ್ರಮವಾಯಿತು. ಹಾಲು, ಬೆಂಚು, ಕುರ್ಚಿ, ದೀಪ, ಧನ, ಜನ – ಎಲ್ಲಕ್ಕೂ ಪರಾವಲಂಬಿಯಾಗಿರಬೇಕಾಗಿದ್ದ ಕರ್ನಾಟಕ ಸಂಘದ ನೂರು ಬಗೆಯ ಕೀಟಲೆಗಳ ಬದಲು ಸಲೀಸಾಗಿ ರಂಗಮಂಟಪ, ಸುಖಾಸನ, ಸ್ವಯಂಸೇವಕರು, ಆರ್ಥಿಕ ಬೆಂಬಲವುಳ್ಳ – ಈ ನಮ್ಮ ಕಾಲೇಜಿನ ಮುದ್ದಣ ಉತ್ಸವ ಕಾಲೇಜಿನ ಭಾಷಾ ಸಂಘಗಳ ಇತಿಹಾಸದಲ್ಲಿ ಒಂದು ಸ್ಥಾನ ಕಲ್ಪಿಸಿಕೊಂಡಿದೆ. ಈ ಉತ್ಸವಕ್ಕೆ ಬಾರದ ಸಾಹಿತಿಗಳಿಲ್ಲ. ಬಂದವರೇ ವಿದ್ಯಾರ್ಥಿಗಳ ಕೇಳಿಕೆ ಮೇರೆಗೆ ಮೂರು ನಾಲ್ಕು ಸಲ ಬಂದಿದ್ದಾರೆ. (ಉದಾ: ಶ್ರೀ ವೆಂಕಟರಾಮಪ್ಪ, ವಿ.ಸೀ., ಕಾರಂತರು) ಕುಡುವರ ಸಿ. ಪಿ. ಸಿ. ಬಸ್ಸಿನ ಪುಕ್ಕಟೆ ಟಿಕೇಟು ಹಿಡಿದುಕೊಂಡು, ಎರಡು ಮೂರು ಕಡೆ ಬಸ್ಸು ಬದಲಾಯಿಸಿ ಬರಬೇಕಾಗಿದ್ದ ಆ ಕಾಲ ಮರೆಯಾಗಿ, ಕಾರಿನಲ್ಲಿ, ಏಕೆ ವಿಮಾನದಲ್ಲಿಯೂ ಸಾಹಿತಿಗಳನ್ನು ಬರಮಾಡಿಕೊಳ್ಳುವ ಸತ್‌ಸಂಪ್ರದಾಯವನ್ನು ಆರಂಭಿಸಿದ ವಿಷಯದಲ್ಲಿ ನಮ್ಮ ಕಾಲೇಜಿನ ಭಾಷಾ ಸಂಘಕ್ಕೆ ಅಗ್ರ ಸ್ಥಾನ. ಊರಿನ ಜನರಿಗೆಲ್ಲ ಈ ಉತ್ಸವಕ್ಕೆ ಆಮಂತ್ರಣವಿರುವುದರಿಂದ ಅಭಿಮಾನಿಗಳು ಕಾಲೇಜುತನಕ ಬಂದೇ ಬರುತ್ತಾರೆ. ಕನ್ನಡದ ಕೆಲಸ ನಿಂತಿಲ್ಲ – ಇದು ನಮ್ಮ ನಿಲುವು.

(ಆ) ಎರಡನೆಯ ಪ್ರಬಲ ಕಾರಣ: ನಾವು ಆಚರಿಸಿದ ಎರಡು ಅಭೂತಪೂರ್ವ ಶತಮಾನೋತ್ಸವ – – ಪುರಂದರದಾಸ ಮತ್ತು ಕನಕದಾಸರ ಶತಮಾನೋತ್ಸವ. ಇದಕ್ಕೆ ನನ್ನ ಜತೆಗೆ ದುಡಿಯಲೂ ದಣಿಯಲೂ – ಕೆಲವೊಮ್ಮೆ ನನ್ನನ್ನು ಹೆಸರಿಗಾಗಿ ಮುಂದಿಟ್ಟು ಹಿಂದಿನಿಂದ ಕ್ರಿಯಾಶೀಲನಾಗಿರಲೂ ನನ್ನೊಬ್ಬ ವಿದ್ಯಾರ್ಥಿಯೇ ತಯಾರಾಗಿಬಿಟ್ಟ. ವಿಜಯನಾಥ ಶೆಣೈ ಎಂಬ ಹೆಸರಿನಲ್ಲಿ ಈತ ಊರವರಿಗೆಲ್ಲ ಚಾಕರಿ ಒದಗಿಸುವುದನ್ನೇ ತನ್ನ ನಿಜಗುಣವನ್ನಾಗಿ ಮಾಡಿಕೊಂಡು, ಸಂಗೀತಸಭೆ, ಚರ್ಚೆ – ಸಂಘ – ಪರ್ಯಾಯ – ಮಠ ಎಲ್ಲೆಂದರಲ್ಲಿ ರಾತ್ರಿ ಹಗಲೆನ್ನದೆ – ಹಸಿವು ನೀರಡಿಕೆ ಇಲ್ಲದೆ – ಕೇವಲ ಬೀಡದಲ್ಲಿರುವ ಪತ್ರಹರಿತ್ತಿನಿಂದಲೇ ಎಂತೆಂಥ ಮಹೋತ್ಸವಗಳನ್ನೂ ನಡೆಸುವ ತಾಕತ್ತು, ವಿಶ್ವಾಸ ಪಡೆದವನಾಗಿದ್ದ. ಉತ್ಸವ ತೊಡಗುವ ವರೆಗೆ ಕ್ಲಬ್ಬಿನಲ್ಲೋ, ಪ್ರೆಸ್ಸಿನಲ್ಲೋ, ಕಾಗದ ಹರಿಯುತ್ತ, ಕಾರ್ಯಕ್ರಮ ರಚಿಸುತ್ತ, ಪತ್ರವ್ಯವಹಾರ ಮಾಡುತ್ತ, ಏಕಾಕಿ ಯೋಚನಾ – ಯೋಜನಾಮಗ್ನನಾಗುವ ಕಾರ್ಯಪಟುವಾದ ಈತನಿಂದ 'ಶಿಷ್ಯಾದಿಚ್ಛೇತ್ ಪರಾಜಯಂ' ಆಯಿತು ನನಗೆ. ಈತನ ಕೈಸನ್ನೆ ಕಣ್ಸನ್ನೆಗೆ ಸಿದ್ಧವಾಗಿರುತ್ತಿದ್ದ ಕಪಿಪಾಳ್ಯ ರಾತ್ರೋರಾತ್ರಿ ಊರುಮನೆಯ ಬೆಂಚು ಕುರ್ಚಿಗಳನ್ನೆಲ್ಲಾ ಹೊತ್ತು ತಂದು ಸಭಾಭವನವನ್ನು ತುಂಬಿಕೊಡುತ್ತಿದ್ದರು. ನೇಪಥ್ಯದಲ್ಲೇ ಸುಖ ಕಾಣುವ ವಿಜಯನಾಥ – ನಡೆಸಿದ ಎರಡು ಶತಮಾನೋತ್ಸವಗಳ ತೇರಿಗೆ ಹೆಸರಿಗಷ್ಟೇ ನಾನು ಪುರೋಹಿತ; ಸೂತ್ರಧಾರ ಅವನೇ. ಮೂರು ಮೂರು ದಿನ ನಡೆದ ಈ ಉತ್ಸವಕ್ಕೆ ಒಂದೊಂದಕ್ಕೆ ಹತ್ತು ಸಹಸ್ರ ರೂಪಾಯಿಗಳ ವರೆಗೂ ವೆಚ್ಚ ಬಂದಿತ್ತು; ಆದರೆ ಅದಕ್ಕೆ ವಿಜಯನಾಥನ ಮಾಂತ್ರಿಕ ಆರ್ಥಿಕ ಯಂತ್ರ – ಸೋವನೀರು (ಸ್ಮೃತಿಸಂಪುಟ) ಬಾಯಿ ಕೂಡಿಸಿ ಕೊಡುತ್ತಿತ್ತು. ಪುರಂದರ ಶತಮಾನೋತ್ಸವದ ನಮ್ಮ ಸ್ಮರಣ ಸಂಪುಟದಲ್ಲಿ ಕೇವಲ 36 ಪುಟಗಳು – ಅದರಿಂದ ನಮಗೆ ಒದಗಿದ ಜಾಹೀರಾತು ಉತ್ಪತ್ತಿ – ಕೆಲವು ಸಾವಿರ!

ಪತ್ರವ್ಯವಹಾರದಲ್ಲಿ ವಿಜಯನಾಥ ಗಟ್ಟಿಗ. ಯಾರು ಯಾರಿಗೆ ಯಾರು ಯಾರಿಂದ ಬರೆಸಬೇಕು, ಹೇಳಿಸಬೇಕು, ಫೋನಿಸಿಸಬೇಕು, ಪ್ರತ್ಯಕ್ಷ ಭೇಟ್ಟಿ ಮಾಡಿಸಬೇಕು, ಹೇಗೆ ಬರೆದರೆ ಸಾಹಿತಿಗಳು ಬಂದಾರು, ಬಂದವರನ್ನು ಎಲ್ಲೆಲ್ಲಿ ಇಳಿಸಬೇಕು ಎಲ್ಲದರ ರಂಗೋಲೆ ಮೊದಲೇ ಸಿದ್ಧಮಾಡಿಕೊಳ್ಳುತ್ತಿದ್ದ. ಬ್ಯಾಂಕಿನ ಜಾಹೀರಾತು ವಿಭಾಗದಲ್ಲಿ ಕೆಲಸ ಮಾಡುವ ಇವನಿಗೆ ಜಾಹೀರಾತು ಕಲೆ ನೀರು ಕುಡಿದಂತೆ. ಉತ್ಸವದ ಪ್ರಚಾರಕ್ಕೆ ಆಕಾಶವಾಣಿ ಬೇಕೇ, ರಾಜಧಾನಿಯ ಪತ್ರಿಕೋದ್ಯಮಿಗಳು ಬರಬೇಕೆ? ದಿಲ್ಲಿಯ ಫಿಲ್ಮ್ಸ ಡಿವಿಜನ್ ಬರಬೇಕೆ? ಎಲ್ಲದಕ್ಕೂ ಈತನ ನೀಲ ನಕಾಶೆ ಸಿದ್ಧವಾಗಿ ಸಕಾಲಕ್ಕೆ ಅವರುಗಳೆಲ್ಲ ಬಂದು

ಉತ್ಸವ ಮಂಟಪದಲ್ಲಿ ಸಿದ್ಧರಾಗತಕ್ಕದ್ದು. ಮಾಹಿತಿ, ಪ್ರಚಾರ, ಜಾಹೀರಾತು, ಡಂಗುರ – ಪೂರ್ವನಿಶ್ಚಿತ ಯೋಜನೆಯಂತೆ ಸಾಗಬೇಕು. ಮಂಟಪಕ್ಕೆ ಸಾವಿರ ಖರ್ಚಾದರೂ ಅಡ್ಡಿಯಿಲ್ಲ. (ಉತ್ಸವಕಾಲದಲ್ಲಿ ಊರಿನ ಮಂಟಪಕಾರರೆಲ್ಲ ದುಂಬಿಗಳಂತೆ ಈತನ ಸುತ್ತು ತಿರುಗುತ್ತಿರುವುದುಂಟು) ಬರಬರುತ್ತ ಮುಕ್ತ ಹೃದಯ, ಮುಕ್ತ ಹಸ್ತದ ಈತನ ಆಮಂತ್ರಣಕ್ಕೆ ಓಗೊಡದ ಸಾಹಿತಿಗಳೇ ಇಲ್ಲ ಎಂದಾಯಿತು. ಇಂಥ ಉತ್ಸವಗಳಲ್ಲಿ ಹೆಸರಿಗೆ ಕರ್ನಾಟಕ ಸಂಘವನ್ನು ಸೇರಿಸಿ ಹೆಚ್ಚಿನ ಆರ್ಥಿಕ ಭಾರವನ್ನು ಸಿಂಡಿಕೇಟ್ ಬ್ಯಾಂಕಿಗೂ, ಮಣಿಪಾಲದ ಎಕಾಡೆಮಿಗೂ ಗಂಟುಹಾಕಿ, ಸವಲತ್ತುಗಳಿಗಾಗಿ ಉಡುಪಿಯ ಶೈಕ್ಷಣಿಕ ಸಂಸ್ಥೆಗಳನ್ನು ನಂಬಿ, ಚಾಕರಿಗೆ ವಿದ್ಯಾರ್ಥಿ ಸ್ವಯಂಸೇವಕರ ಬೆಂಬಲ ಪಡೆದು ಎಂಥ ಅದ್ಭುತವಾದ ಉತ್ಸವವನ್ನೂ ವಿಜಯನಾಥ ಮಾಡಿಸಿಯಾನು ಎಂಬ ಧೈರ್ಯ ನಮ್ಮಲ್ಲಿ ಮೂಡಿತು. ಊರಿನ ಜನ ಉತ್ಸವಕ್ಕೆ ಒಂದು ತಿಂಗಳ ಮೊದಲು ನಾವು ಹೊಡೆಯುವ ಡಂಗುರ ಕೇಳಿಸದಿದ್ದರೆ – ಕೇಳಿಸದಿರುವಂಥ – ಯಾವ ಸಾಮಾನ್ಯ ಚಟುವಟಿಕೆಗೂ ಗೌರವ ತೋರಿಸದಂತಾಯಿತು. (ಇಂಥ ಒಂದು ಅವಸರ್ಪಿಣಿಯ ಕಾಲದಲ್ಲಿ ಕರ್ನಾಟಕ ಸಂಘಕ್ಕೆ ಜೀವದಾನ ಮಾಡಿ ಎರಡು ದಿನದ ನಾಡಹಬ್ಬದ ಉತ್ಸವ ಮಾಡಿದೆವು. ಶ್ರೀ ಪರಮೇಶ್ವರ ಭಟ್ಟರಂಥ ವಾಗ್ಮಿಗಳನ್ನು ಕರೆಸಿದರೂ ಸೇರಿದ ಜನ 12 ಮಾತ್ರ – ಅಷ್ಟನ್ನಾದರೂ ತಯಾರಿಸಬೇಕಾದರೆ ನಾನೂ ಸ್ನೇಹಿತ ಇನಾಂದಾರರೂ ನಮ್ಮ ಮನೆಮಂದಿಯನ್ನೆಲ್ಲ ಕರೆದುಕೊಂಡು ಬರಬೇಕಾಯಿತು!) ನಗಾರಿ ಬಡಿಯಬೇಕು, ಗರ್ನಾಲು ಹೊಡೆಯಬೇಕು, ಅಲ್ಲಲ್ಲಿ ಭಿತ್ತಿಪತ್ರ ಕಂಗೊಳಿಸಬೇಕು, ದೈನಿಕಗಳಲ್ಲಿ ಉದ್ದಕ್ಕೆ ಕಾರ್ಯಕ್ರಮ ಅಚ್ಚಿಸಬೇಕು, – ಅಂದರೆ ಮಾತ್ರ ಉಡುಪಿಯಲ್ಲೇನೋ ಉತ್ಸವವುಂಟು, ಹೋಗೋಣ ಎಂದು ನಾಗರಿಕರು ತೀರ್ಮಾನ ಮಾಡುವ ದಿನ ಬಂತು. ವ್ಯಕ್ತಿಗಳ ಶಕ್ತಿ ಬೆಳೆದಂತೆ ಸಂಘದ ಬಲ ಕುಗ್ಗಿತು. ಸಂಘದ ಹೆಸರು ಪಟ್ಟಿ ಇಲ್ಲದೆಯೂ ಸುರಳೀತವಾಗಿ ಕಾರ್ಯಕ್ರಮಗಳು ಗಡದ್ದಾಗಿ ನಡೆಯುವ ಪರಿಪಾಠ ಮಾಡಿದವರು ನಾವೇ. ಇಂಥ ಮಹನೀಯರ ಭಾಷಣ – ಇಂಥಲ್ಲಿ – ಬನ್ನಿ ಎಂದು ಉಪ್ಪು ಖಾರ ಇಲ್ಲದೆ ಹೇಳಿದರೆ ಈಗ ಉಡುಪಿಯ ನಾಗರಿಕರು ನಾಳೆ ಪೇಪರಿನಲ್ಲಿ ನೋಡುವಾ ಎನ್ನುತ್ತಾರೆ.

೩

ಸಂಘದಲ್ಲಿ ನಾನು ಪಡೆದ ಹತ್ತು ವರ್ಷಗಳ ಏರುತಗ್ಗಿನ ಅನುಭವವನ್ನು ಒರೆಗೆ ಹಚ್ಚುವ ಒಂದು ಉತ್ತಮ ಸನ್ನಿವೇಶ 1960ನೆಯ ದಶಂಬರದಲ್ಲಿ ಒದಗಿತು. ಅದೇ 42ನೆಯ ಕನ್ನಡ ಸಾಹಿತ್ಯ ಸಮ್ಮೇಳನ. ಸಮ್ಮೇಳನಕ್ಕೆ ಎಂಟು ತಿಂಗಳ ಮೊದಲು ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಯವರು, ಡಾ. ಮಾಧವ ಪೈ ಅವರನ್ನು ಬೆಂಗಳೂರಲ್ಲಿ ಭೆಟ್ಟಿ ಮಾಡಿದ್ದಲ್ಲದೆ, ಪರಿಷತ್ತಿಗೂ ಕರೆದೊಯ್ದು ಹಾರಹಾಕಿ ಹೊಗಳಿದ್ದರ ಫಲಿತಾಂಶವೇ ಮಣಿಪಾಲದಲ್ಲಿ ನಡೆದ ಸಾಹಿತ್ಯ ಸಮ್ಮೇಳನ – ಅನೇಕ ವರ್ಷಗಳ ಬಳಿಕ ನಡೆದ ನಿಜವಾದ ಸಾಹಿತಿಗಳ ಸಮ್ಮಿಳನ. ಅದುವರೆಗಿನ ಯಾವ ಸಮ್ಮೇಳನಕ್ಕೂ ಸೇರದಷ್ಟು ಪ್ರತಿನಿಧಿಗಳು – ರೊಕ್ಕ ತೆತ್ತು ಬಂದವರು – ಮಣಿಪಾಲದಲ್ಲಿ ಸೇರಿದರು. ನನ್ನ ನೆನಪಿನಲ್ಲಿ 711 ಮಂದಿ ಪ್ರತಿನಿಧಿ ಶುಲ್ಕ ತೆತ್ತರು. ಅವರಲ್ಲಿ ಹಿರಿ-ಕಿರಿ-ಮರಿ ಸಾಹಿತಿಗಳ ಜತೆಗೆ ಸಾಹಿತ್ಯಭಕ್ತರೂ, ಅಭಿಮಾನಿಗಳೂ ಕೂಡಿಕೊಂಡಿದ್ದರು. ಇವರಲ್ಲದೆ ನಿತ್ಯದ ಸಭೆಗಳಿಗೆ ಮೂರು ನಾಲ್ಕು ಸಾವಿರ ಜನ ಮುದ್ದಣ ಮಂಟಪದಲ್ಲಿ ಹಾಜರಾಗುತ್ತಿದ್ದರು. ಊಟ-ವಸತಿಗೆ ಮೆಡಿಕಲ್ ಕಾಲೇಜಿನ ಮೂರು ಬೃಹತ್ ಹಾಸ್ಟೆಲುಗಳಲ್ಲಿ ಏರ್ಪಾಟು ನಡೆಯಿತು. ದಿನವೂ ಐದಾರು ಸಹಸ್ರ ಜನಕ್ಕೆ ಸಂತರ್ಪಣೆ. ದುಡ್ಡು ಕೊಟ್ಟವರೂ – ಅಭ್ಯಾಗತರೂ – ಉಂಡರು, ಕೊಡದ ಅತಿಥಿಗಳೂ ಉಂಡರು. – ಉಡುಪಿಯ – ಮೃಷ್ಟಾನ್ನದ ಸವಿಯನ್ನೆಲ್ಲರೂ ಪ್ರತ್ಯಕ್ಷ ಅನುಭವಿಸಿದರು. ಊಟದ ಮನೆಯ – ಅರ್ಥಾತ್ ಸಮ್ಮೇಳನದ ಹೃದಯಸ್ಥಾನದ – ಅಚ್ಚುಕಟ್ಟನ್ನು ಕಾಪಾಡಲು ಅಹರ್ನಿಶಿ ದುಡಿದ ವಿದ್ವಾನ್ ಕಡಿಯಾಳಿ ರಾಮಚಂದ್ರ ಉಪಾಧ್ಯಾಯರು ನನ್ನ ಕನ್ನಡದ ಗುರುಗಳು; ಅವರಿಗೆ ಸಹಚಾರಿಯಾಗಿ ಎಲ್ಲಾ ಸರಕು ಸರಂಜಾಮುಗಳಿಗೆ ಸರ್ಪಕಾವಲು ಹಾಕಿ ನಿಂತ ನನ್ನ ಬಾಲ್ಯಸ್ನೇಹಿತ ಪ್ರಭಾಕರ ಪೈಗಳು. ಉಡುಪಿಯ ತಿಂಡಿತೀರ್ಥಗಳ ಸವಿ ಹೆಚ್ಚೋ, ಇವರ ಉಪಚಾರದ ಮಾತಿನ ಸವಿ ಹೆಚ್ಚೋ ಎಂದು ನಿರ್ಣಯಿಸು

ವುದು ಸಾಹಿತಿಗಳಿಗೆ ಕಷ್ಟವಾಯಿತು. ಯಾರೇನೆಂದರೂ ತಮ್ಮ ನಿಜವಾದ ಪ್ರತಿಕ್ರಿಯೆ ತೋರದೆ ಹಗಲು ರಾತ್ರಿ ಭೋಜನಶಾಲೆಯ ವ್ಯವಸ್ಥೆ ನೋಡಿಕೊಂಡ ಇವರಿಬ್ಬರ ಸಾಹಸ ಸಮ್ಮೇಳನದ ಯಶಸ್ಸಿನ ಬಹು ಭಾಗಕ್ಕೆ ಕಾರಣವಾಯಿತು.

ಊಟದ ಮನೆಯ ಮುಂಭಾಗದಲ್ಲಿ ಎತ್ತರದ ಪ್ರತಿನಿಧಿ ನಿವಾಸದ ಮುಖ್ಯ ಸ್ವಾಗತ ಕಚೇರಿಯ ಸಂಪೂರ್ಣ ಆಡಳಿತ, ಹೊಣೆ ನನ್ನ ನಾಲ್ಕು ಜನ ಕಾಲೇಜಿನ ಅಧ್ಯಾಪಕರಿಗೆ ವಹಿಸಿಕೊಟ್ಟೆ. ಇವರ ನಾಯಕ ರಾದ ಪ್ರೊ। ಬಿ. ವಿ. ಆಚಾರ್ಯರು ಸ್ವತಃ ಸಾಹಿತಿಗಳಲ್ಲವಾದರೂ ಸಾಹಿತ್ಯದ ಮತ್ತು ಸಾಹಿತಿಗಳ ಅಂತರಂಗವನ್ನು ಬಲ್ಲವರಾಗಿದ್ದರು. ಹುಟ್ಟುಸಾಹಿತಿಗಳ ಮನೆತನಕ್ಕೆ ಸೇರಿದ ಆಚಾರ್ಯರ ಮಾತಾಮಹ ಸ್ಥಾನದಲ್ಲಿ ನಿ. ರಾಜಗೋಪಾಲ ರಾಯರಿದ್ದರು; ಶ್ವಶುರ ಸ್ಥಾನದಲ್ಲಿ ಕಾದಂಬರಿಕಾರ ಬೆಳ್ಳೆಯವರಿದ್ದರು. ಸ್ವತಃ ಬರೆಯಬಲ್ಲರಾದರೂ ಅದಕ್ಕೆ ಸ್ವನಿರ್ಣಯದ ಮುಟ್ಟುಗೋಲು ಹಾಕಿ ಮಾತಿನಲ್ಲಿಯೇ ಕಥೆ-ಕಾದಂಬರಿ ಹೆಣೆದು ಎಲ್ಲರನ್ನೂ ರಂಜಿಸುವ, ಇಪ್ಪತ್ತನಾಲ್ಕು ತಾಸು ನಗುಮೊಗದಿಂದಲೇ ಸೊಗಯಿಸುವ ಆಚಾರ್ಯರ ಬೀಡ ಚರ್ಚಿತ ವದನಾರವಿಂದದ ಪ್ರಸನ್ನತೆಗೆ ಮರುಳಾಗದವರು ಯಾರು? ಹಾಸ್ಟೆಲಿನ ಹತ್ತೆಂಟು ಜನ ಸಿಬ್ಬಂದಿಯ ಕೊರಗರು, ಹತ್ತು ಜನ ವಿದ್ಯಾರ್ಥಿಗಳು, ಮತ್ತು ಹತ್ತು ಜನಸ್ನೇಹಿತರನ್ನು ಬಿಟ್ಟರೆ ಬೇರೆ ಸ್ವಯಂಸೇವಕ ದಳವೇ ನಮ್ಮಲ್ಲಿರಲಿಲ್ಲ.

ಪರಿಷತ್ತಿನ ಅಧ್ಯಕ್ಷರಿಗೊಂದು ಪ್ರತ್ಯೇಕ (ಮಠದ ಸ್ವಾಮಿಗಳನ್ನು ಇರಿಸಿದಂತೆ) ಬಿಡಾರ; ಸಮ್ಮೇಳನದ ಅಧ್ಯಕ್ಷರಿಗೆ ಏರ್‌ಕಂಡಿಷನ್ಡ್ ಕೊಠಡಿಯುಳ್ಳ ಬಂಗಲೆ, ಬೆಂಗಳೂರಿಂದ ಬರಲು ಬಾಡಿಗೆ ವ್ಯಾನು; ಅತಿಥಿ ಅಭ್ಯಾಗತರಿಗೆ ಪ್ರಥಮ ದರ್ಜೆ ಹಾಸ್ಟೆಲು ಕೊಠಡಿಗಳ ಸೌಕರ್ಯ; ಕಿಕ್ಕಿರಿದ ಮುದ್ದಣ ಮಂಟಪದಲ್ಲಿ ಅವ್ಯಾಹತವಾಗಿ ಮುಂಜಾನೆ 9ರಿಂದ ಸಂಜೆ 9ರ ವರೆಗೆ ಉಪನ್ಯಾಸ ಕಾರ್ಯಕ್ರಮ, ವಿಚಾರಗೋಷ್ಠಿ, ಕಾವ್ಯಗೋಷ್ಠಿ, ಪರಿಷತ್ತಿನ ಬಹಿರಂಗ, ಅಂತರಂಗ ಅಧಿವೇಶನಗಳು; ಆಕಾಶವಾಣಿ ಯವರಿಗೂ, ಪತ್ರಿಕಾ ಪ್ರತಿನಿಧಿಗಳಿಗೂ ವಿಶಿಷ್ಟ ವ್ಯವಸ್ಥೆ; ಕಾರ್ಯಕ್ರಮದ ನಿರ್ವಾಹದಲ್ಲಿ ಕ್ಲಪ್ತತೆ; ಭಾಷಣಕಾರರ ಆಯ್ಕೆಯಲ್ಲಿನ ವಿವೇಚನೆ; ಸಮ್ಮೇಳನಾಧ್ಯಕ್ಷರ ಅಭೂತಪೂರ್ವ ಪುರಪ್ರವೇಶದ ಮೆರ ವಣಿಗೆ; ಉಡುಪಿಯ ಪರ್ಯಾಯೋತ್ಸವವನ್ನು ಮೀರಿಸಿದ ಈ ಸಮ್ಮೇಳನಕ್ಕೆ ಮೂರು ತಿಂಗಳ ಮೊದಲೂ, ಅನಂತರವೂ ದೊರೆತ ಪತ್ರಿಕಾ ಪ್ರಚಾರ, ವಾದ, ವಿವಾದ, ಅಪವಾದ – ಹೀಗೆ ಈ 42ನೇ ಸಾಹಿತ್ಯ ಸಮ್ಮೇಳನ ಸಮ್ಮೇಳನಗಳ ತುಲನಾತ್ಮಕ ವಿಮರ್ಶೆ ಮಾಡಬಲ್ಲ ನಿರೀಕ್ಷಕರ ಅಭಿಪ್ರಾಯ ದಂತೆ 'ಇನ್ನಿಲ್ಲ, ಮುನ್ನಿಲ್ಲ' ಎಂಬಂತಾಯಿತು. 'ಊಟ ಮದ್ರಾಸಿನಲ್ಲಿ ಚೆನ್ನಾಗಿತ್ತು, ಆದರೆ ಕಾರ್ಯ ಕ್ರಮ ಇಷ್ಟು, ಇಂಥಾ ಮಟ್ಟದ್ದು ಅಲ್ಲಿ ಇರಲಿಲ್ಲ,' ಎಂದು ಒಬ್ಬರು ನುಡಿದರೆ, 'ಇದು ದ. ಕ. ಜಿಲ್ಲೆಗೆ ಮಾತ್ರ ಸಾಧ್ಯ. ಮಣಿಪಾಲದ ಮಾಧವ ಪೈ ಅವರಿಗೆ ಮಾತ್ರ ಸಾಧ್ಯ' ಎಂದು ಇತರರು ಅನ್ನುತ್ತಿದ್ದರು.

ಆದರೆ ಉಡುಪಿಯ ಮಹತ್ವಕ್ಕೆ ಹೇಗೆ ಶ್ರೀಕೃಷ್ಣ ಕಾರಣನೋ ಹಾಗೆ ಮಣಿಪಾಲ ಸಮ್ಮೇಳನದ ಯಶಸ್ಸಿಗೆ ಸಮ್ಮೇಳನಾಧ್ಯಕ್ಷ ಅ. ನ. ಕೃಷ್ಣರಾಯರು ಮೂಲಕಾರಣ ಎಂದು ನಾನು ತಿಳಿದಿದ್ದೇನೆ. 'ನಿಮ್ಮ ಉಡುಪಿಯ ಸಮ್ಮೇಳನಕ್ಕೆ ಕೃಷ್ಣರಾಯರಿಗೊಂದು ಅವಕಾಶ ಮಾಡಿಕೊಡಿ', ಎಂದು ಮೊತ್ತ ಮೊದಲು ಅಂದವರು ಶಿವರಾಮ ಕಾರಂತರು. 'ನೋಡಿ, ಅವರ ಹೆಸರೆತ್ತಿದರೆ ಬೇರೆ ಕಡೆ ವಿರೋಧ ಮಾಡುವವರೇ ಹೆಚ್ಚು. ನಿಮ್ಮಲ್ಲಿ ಮಾತ್ರ ಅವರು ಅಧ್ಯಕ್ಷರಾಗುವುದು ಸಾಧ್ಯ' ಎಂದು ಕಾರಂತರು ತಿಳಿಸಿದ ಮೇಲೆ – ಎಂದೋ ಆಗಬೇಕಾಗಿದ್ದ ಒಂದು ನ್ಯಾಯ ನಮ್ಮಲ್ಲಿ ನಡೆಯಲಿ ಎಂದು ನಾನೂ ನನ್ನ ಕೆಲವು ಸಾಹಿತಿಮಿತ್ರರೂ ಒಮ್ಮತದಿಂದ ನಿರ್ಣಯಿಸಿ ಸ್ಥಾನೀಯ ಕಾರ್ಯಸಮಿತಿಗೆ ಸೂಚನೆ ಮಾಡಿದೆವು. ಸಮ್ಮೇಳನದ ಅಧ್ವರ್ಯು ಮತ್ತು ಸ್ವಾಗತ ಸಮಿತಿಯ ಅಧ್ಯಕ್ಷರಾದ ಡಾ। ಪೈ ಅವರೂ ಇದಕ್ಕೆ ಹೃದಯದಿಂದ ಒಪ್ಪಿಗೆ ಕೊಟ್ಟರು. ಆದರೆ ಈತನ್ಮಧ್ಯೆ ಪತ್ರಿಕೆಗಳಲ್ಲಿ ಕೋಲಾಹಲ ತೊಡಗಿತು; ಅ. ನ. ಕೃ. ಆಯ್ಕೆಯನ್ನು ಪರಿಷತ್ತಿನ ಅಧ್ಯಕ್ಷರು ವಿರೋಧಿಸುತ್ತಿದ್ದಾರೆ, ಸ್ವಾಗತ ಸಮಿತಿ ಯವರೂ ಶಾಸ್ತ್ರಿಗಳ ಪಕ್ಷದಲ್ಲಿ ನಿಲ್ಲುತ್ತಾರೆ ಎಂಬರ್ಥದ ವದಂತಿ ಹಬ್ಬಿತು. ಅದನ್ನು ಸಮರ್ಥಿಸುವಂತೆ ಯಾರಿಂದಲೋ ಡಾ। ಪೈ ಅವರಿಗೆ ಒಂದು ಪತ್ರವೂ ಬಂದಿತು – ಎಸ್. ವಿ. ಕೃಷ್ಣಮೂರ್ತಿ ರಾಯರನ್ನು ನೀವು ಅಧ್ಯಕ್ಷರಾಗಿ ಮಾಡಿದರೆ ಯಾವ ಚರ್ಚೆಯೂ ಇರುವುದಿಲ್ಲ ಎಂದು. ಡಾ। ಪೈಯವರಿಗೆ ಭಾರತೀಯ

ರಾಜ್ಯಸಭೆಯ ಉಪಾಧ್ಯಕ್ಷರಂಥ ಅಧಿಕಾರಸ್ಥ ಜನದ ಕಡೆಗೇ ಒಲವು ಹೆಚ್ಚು, ಕಾರ್ಯಸಮಿತಿಯ ಸಭೆಯಲ್ಲಿ ಅವರು ಎಸ್.ವಿ.ಕೃ ಅವರ ಪರವಾಗಿ ಮಾತನಾಡುವುದು ಖಂಡಿತ, ಹಾಗಾಗಿ ಒಂದು ಜೇಬಿನಲ್ಲಿ ಕಾರ್ಯದರ್ಶಿ ಸ್ಥಾನದ ರಾಜೀನಾಮೆ ಪತ್ರವನ್ನು ಬರೆದಿಟ್ಟುಕೊಂಡಿದ್ದೆ. ಒಂದು ಪಕ್ಷ ಎಸ್.ವಿ.ಕೃ. ಅಧ್ಯಕ್ಷರಾಗುವುದಕ್ಕೆ ಸಮಿತಿಯ ಬಹುಮತ ಸಮ್ಮತಿಸಿದರೆ ಸಾಹಿತ್ಯ ಪಕ್ಷಪಾತಿಯಾದ ನನ್ನಂಥವನಿಂದ ಸಾರಥ್ಯ ಸಾಧ್ಯವಿಲ್ಲ ಎಂಬುದನ್ನು ಸಾರಬೇಕೆಂಬುದು ನನ್ನ ಆಕಾಂಕ್ಷೆ. ಆದರೆ ಡಾ। ಪೈ ಅವರ ಔದಾರ್ಯ, ಅ. ನ. ಕೃ. ಅವರ ಅದೃಷ್ಟ – ನಮ್ಮ ಸ್ನೇಹಿತರೆಲ್ಲ ಅ.ನ.ಕೃ.ಗೂ ಎಸ್.ವಿ.ಕೃ.ಗೂ ಇರತಕ್ಕ ವ್ಯತ್ಯಾಸವನ್ನು ತಿಳಿಯಪಡಿಸಿದ ಮೇಲೆ – ಡಾ। ಪೈ ಅವರು ತಮಗೆ ಬಂದ ಪತ್ರ ಓದಿ ಹೇಳಿದರೇ ವಿನಾ ಛಲ ಹಿಡಿಯ ಲಿಲ್ಲ. ನನ್ನ ಜೇಬಿನ ಪತ್ರ ನನ್ನ ಕೈಯಲ್ಲೇ ಉಳಿಯಿತು – ಅ.ನ.ಕೃ. ಅವರ ಹೆಸರು ಬೆಂಗಳೂರಿಗೂ ಹೋಯಿತು. ನಮ್ಮ ಇಚ್ಛೆಗೆ ವಿರೋಧವಾಗಿ ಪರಿಷತ್ತಿನ ಅಧ್ಯಕ್ಷರು ನಡೆದುಕೊಳ್ಳಲಿಲ್ಲ. ಆದರೆ ಮಾತ್ರ ಈ ಸನ್ನಿವೇಶದಿಂದಾಗಿ ನನ್ನ ಹೊಣೆ ಅಧಿಕವಾಯಿತು. ಕಾರ್ಯಕರ್ತರ ಕಷ್ಟಸುಖದ ಪರಿವೆ ಇಲ್ಲದ ಕೆಲವರು ಕುಚೋದ್ಯಗಾರರು ಪತ್ರಿಕೆಗಳಲ್ಲಿ ಏಕಪ್ರಕಾರವಾಗಿ ಈ ವಿಷಯವನ್ನು ಅದರ ತೀರ್ಮಾನವಾದ ಬಳಿಕವೂ ಮಥಿಸಿ ವಾತಾವರಣದಲ್ಲೆಲ್ಲ ನಂಜು ಹಬ್ಬಿಸಿದರು. ಸಮ್ಮೇಳನಪೂರ್ವದ ಮೂರು ತಿಂಗಳ ಈ ಚರ್ವಿತ ಚರ್ಚೆಯಿಂದಾಗಿ ನಮ್ಮ ಸಮ್ಮೇಳನಕ್ಕೆ ಪುಕ್ಕಟೆ ಜಾಹೀರಾತು ಒದಗಿ ಸಿದ ಹಾಗಾಯಿತು. ಪ್ರತಿನಿಧಿಗಳ ಸಂಖ್ಯೆ ಏರುತ್ತಲೇ ಹೋಗಿ 711ಕ್ಕೆ ಮುಟ್ಟಿತು. ನನಗೆ ಮಾತ್ರ ಏಳೂ ಹನ್ನೊಂದೂ–ಆಯಿತು.

ಅ.ನ.ಕೃ. ಅವರನ್ನು ನಾನು ಮೂರು ಮೂರು ಸಾರಿ ಭೆಟ್ಟಿಯಾಗಿ ಅವರಿಗೂ ಶಾಸ್ತ್ರಿಗಳಿಗೂ ಎಂಥ ಭಿನ್ನಾಭಿಪ್ರಾಯಗಳಿದ್ದರೂ, ಮಣಿಪಾಲ ಸಮ್ಮೇಳನ ಶಾಂತವಾಗಿ ನಡೆಯಬೇಕೆಂಬುದು ನಮ್ಮ ಅಪೇಕ್ಷೆ, ಡಾ। ಪೈ ಅವರ ಅಭಿಮತ ಎಂದು ಬಿನ್ನವಿಸಿದೆ. ಅಂಥದೇನೂ ಆಗದೆಂದು ಅವರು ಭರವಸೆ ಕೊಟ್ಟಮೇಲೆ, ಸಮ್ಮೇಳನದ ದಿನದ ವರೆಗೂ ನಾನು ನಿಶ್ಚಿಂತನಾಗಿಯೇ ಇದ್ದೆ. ಸಮ್ಮೇಳನಕ್ಕೆ ಮೂರು ದಿನ ಮೊದಲು ಅ. ನ. ಕೃ. ಸಪರಿವಾರ – ಪತ್ನಿ, ಮಗ, ಮಗಳು, ಅಳಿಯ, ಸೊಸೆಯರನ್ನು ಕೂಡಿಕೊಂಡು ಶಿವಮೊಗ್ಗ – ತೀರ್ಥಹಳ್ಳಿ ದಾರಿಯಾಗಿ ಉಡುಪಿಗೆ ಬಿಜಯ ಮಾಡಿಸಿದರು. ನಾನು ಬೇಡ ಎಂದರೂ ಯಾವುದೋ ಹಳೇ ವ್ಯಾನನ್ನು ಸಂಪಾದಿಸಿ ಹೊರಟಿದ್ದರು. ಅದು ಸರಿಯಾದ ವೇಳೆಗೆ ಕೈಕೊಟ್ಟಿತು. ಸಮ್ಮೇಳನಕ್ಕೆ ಮುನ್ನ ಸಂಜೆ ನಾವು ಇರಿಸಿಕೊಂಡ ಭಾರೀ ಮೆರವಣಿಗೆಯ ವೇಷಗಳೆಲ್ಲ ಸಿದ್ಧವಾಗಿ ಕಾಲ್ತುರಿಕೆಯಿಂದ ನಿಂತಿದ್ದಾವೆ – ಅ. ನ. ಕೃ. ಸುಳಿವಿಲ್ಲ! ಮುಂಜಾನೆ ಬರುತ್ತೇನೆ ಅಂದವರು ಸಂಜೆ 5 ಆದರೂ ಸುಳಿವಿಲ್ಲ. ಹಠಾತ್ತನೆ ಸುದ್ದಿ ಸಿಕ್ಕಿತು – ಧಾರವಾಡದಿಂದ ಕಾರಿನಲ್ಲಿ ಬರುತ್ತಿದ್ದ ಬೇಂದ್ರೆಯವರ ಮೂಲಕ. ಉಡುಪಿಯಿಂದ ಎಂಟು ಮೈಲಿ ದೂರದಲ್ಲಿ ವ್ಯಾನಿನ ಎಕ್ಸಲ್ ಕೆಟ್ಟು ಅ.ನ.ಕೃ. ಪೇಚಿಗೆ ಸಿಕ್ಕಿದ್ದಾರೆ ಎಂದು. ಕೂಡಲೇ ನಮ್ಮ ಕಾರನ್ನು ಕಳಿಸಿಕೊಟ್ಟೆ. ಅಂತೂ ಸಾಯಂ 6ಕ್ಕೆ ಮೆರವಣಿಗೆ ಹೊರಡಿಸಿದೆವು. ಒಂದೂವರೆ ತಾಸಿಗೆ ಒಂದೂವರೆ ಮೈಲಿಗಳಷ್ಟು ಪುರಭ್ರಮಣ ಮಾಡಿದ ಮೆರವಣಿಗೆ ನಮ್ಮ ಕಾಲೇಜಿನಲ್ಲಿ ವಿಸರ್ಜಿತವಾಯಿತು. ಗೋಕುಲಾಷ್ಟಮಿಯ ಹುಲಿ, ಬಯಲಾಟದ ವೇಷಗಳನ್ನು ಮುಂದಿರಿಸಿ ಅ.ನ.ಕೃ, ಶಾಸ್ತ್ರಿ, ಡಾ। ಪೈ ಅವರನ್ನು ಅಲಂಕೃತ ಮೋಟರಿನಲ್ಲಿ ಕೂಡಿಸಿ ಊರೆಲ್ಲ ಸುತ್ತಿಸಿದ್ದಾಯಿತು. 'ಸಿರಿಗನ್ನಡಂ ಗೆಲ್ಗೆ' ಉಡುಪಿಯ ಸಾಲ್ಮರಗಳ ಗೆಲ್ಲುಗಳಿಗೂ ತಗಲುವಂತೆ ಕೂಗೆದ್ದಿತು. ಅ.ನ.ಕೃ. ಜೈ ಜೈಕಾರ ಉಡುಪಿಯ ಜನಕ್ಕೆ ಗಾಂಧೀ, ನೆಹ್ರೂ ಅವರ ಸ್ವಾಗತದ ಸಂಭ್ರಮವನ್ನು ನೆನಪಿಗೆ ತಂದಿತು. ಮಣಿಪಾಲದ ಅತಿಥಿಗೃಹ ಮತ್ತು ಬಯಲಿನ ಮುದ್ದಣ ಮಂಟಪದಲ್ಲಿ ಆ ಸಂಜೆ ಜನರ ಗದ್ದಲ ಹೇಳತೀರದು. ರೂಮುಗಳ ವಿತರಣೆ, ಮರುದಿನದ ಧ್ವಜಾರೋಹಣದಿಂದ ಹಿಡಿದು ಮಹಾಧಿವೇಶನದವರೆಗಿನ ಕಾರ್ಯಕ್ರಮ ಸಂಯೋಜನೆಯಲ್ಲಿ ನಾನು ಬಿದ್ದಿರುತ್ತ ಡಾ। ಪೈ ಅವರ ಮನೆಯಲ್ಲಿ ಇನ್ನೊಂದೇ ಪ್ರಕರಣ ನಡೆದಿತ್ತು. ಸಮ್ಮೇಳನದ ಅಧ್ಯಕ್ಷರ ಭಾಷಣವನ್ನು ತರಿಸಿ ನೋಡಿದರೆ ಅದರಲ್ಲಿ ಮೂರು ಪುಟ ಪರಿಷತ್ತಿನ ಅಧ್ಯಕ್ಷರ ಧೋರಣೆಯ ಕಟು ಸತ್ಯವಾದ ಟೀಕೆ – ಅ.ನ. ಕೃ. ಅವರ ನಿಶಿತ ಶೈಲಿಯಲ್ಲಿ ವಜ್ರಕ್ಕೆ ಕುಂದಣದ ಕಟ್ಟು ಹಾಕಿದಂತೆ ನಿಶ್ಚಲವಾಗಿ, ನಿರ್ಭಯವಾಗಿ ಮೂಡಿ ಬಂದಿತ್ತು. ಡಾ। ಪೈ ಅವರು ಸಾಹಿತ್ಯ ಪ್ರಪಂಚದ ಟೀಕೆಗೂ, ಇತರ ಬಗೆಯ ಟೀಕೆಗಳಿಗೂ ತಾರತಮ್ಯವನ್ನು ಅರಿಯ

ಲಾರದ ಮನೋಭೂಮಿಕೆಯುಳ್ಳವರಾಗಿ ಇದರಿಂದ ಹೌಹಾರಿದರು. ಉದ್ಘಾಟಕ ಎಸ್.ವಿ.ಕೃ. ರಾಯರ ಹತ್ತಿರ ಸಮ್ಮೇಳನವನ್ನು ಇಲ್ಲಿಗೇ ಬರ್ಖಾಸ್ತು ಮಾಡಲೇ ಎಂದೂ ಕೇಳಿದರಂತೆ. ಸಾಹಿತ್ಯಜ್ಞರಾದ – ಅಥವಾ ಸಾಹಿತಿಗಳ ಹಣೇಬರಹವನ್ನು ಸ್ವಲ್ಪವಾದರೂ ಅರಿತಿದ್ದ ಎಸ್.ವಿ.ಕೃ. – ಪೈ ಅವರು ಎತ್ತಿದ ಕೈಯನ್ನು ತಡೆದು ನಿಲ್ಲಿಸಿದರಂತೆ. ಪರಿಷತ್ತು – ಸಮ್ಮೇಳನ ಎಂದರೆ ದೂರ ಸಿಡಿದು ನಿಂತಿದ್ದ ಕಾರಂತರೂ ನಮ್ಮ ಸಲುವಾಗಿ ಅ. ನ. ಕೃ. ಅವರ ಮೇಲಿನ ಪ್ರೀತಿಯಿಂದ ಈ ಸಮ್ಮೇಳನಕ್ಕೆ ಬಂದಿದ್ದರು. ಅನೇಕ ಸಾಹಿತಿಗಳು ಅ. ನ. ಕೃ. ಭೀತಿಯಿಂದಲೂ ಬಂದಿದ್ದರು. ಏನಿಲ್ಲೆಂದರೂ ಮಾಸ್ತಿ, ಕಾರಂತ, ಬೇಂದ್ರೆ, ಪಡುಕೋಣೆ, ನರಸಿಂಹಸ್ವಾಮಿ, ಹಿರೇಮಠ, ಶ್ರೀಧರ, ಎಕ್ಕುಂಡಿ ಆದಿಯಾಗಿ ಹಿರಿಯ ಕಿರಿಯ ನೂರಾರು ಸಾಹಿತಿಗಳು ಸಮ್ಮೇಳನಕ್ಕೆ ಆಗಮಿಸಿ ಮೂರು ದಿನ ಇದ್ದು ಸಂತೋಷ ಕೊಟ್ಟರು, ಪಟ್ಟರು. ಸ್ವಾಗತ ಸಮಿತಿಯನ್ನು ಬಹುವಾಗಿ ಟೀಕಿಸುತ್ತಿದ್ದ ಬೀಚಿ, ಕಟ್ಟೀಮನಿಯವರೂ ಕೂಡ ಅ. ನ. ಕೃ. ಅಭಿಮಾನದಿಂದ ಬಂದು ನೆರೆದಿದ್ದರು. ಅ. ನ. ಕೃ. ನಮ್ಮ ಸಮ್ಮೇಳನದ ಅಧಿದೈವತ, ಆಕರ್ಷಣೆ. ಆ ಮೂರೂ ದಿನ ಅ. ನ. ಕೃ. ದಂಪತಿ ಸಮೇತ ವೇದಿಕೆಯ ಮೇಲೆ ಶೋಭಿಸಿದರು. ಜನ ನೋಡಿ ನೋಡಿ ತಣಿಯದು – ಈ ಸಾಹಿತ್ಯ ಸಾರ್ವಭೌಮನನ್ನು. ಶಿಸ್ತಿನ ಸೈನಿಕನಂತೆ ಕಾರ್ಯದರ್ಶಿಯಾದ ನಾನು ಹೇಳಿದಷ್ಟು ಹೊತ್ತಿಗೆ ಅ.ನ.ಕೃ. ಎಲ್ಲೆಂದರಲ್ಲಿ ಹಾಜರು. ಮುಂಜಾನೆಯಿಂದ ರಾತ್ರಿ ಹನ್ನೆರಡರ ವರೆಗೆ ಅವರ ಬೆನ್ನುಹಿಡಿದು, ಮಾತನಾಡಿಸಿ, ಸಮಯದ ಕ್ಲಪ್ತತೆ ಕಾಯಲು ನಾನು ಸಾಹಿತಿಗಳ ನಕ್ಷತ್ರಕನೊಬ್ಬನನ್ನು – ನನ್ನ ಸ್ನೇಹಿತ ಬೈಕಾಡಿಯನ್ನು – ನೇಮಿಸಿಬಿಟ್ಟಿದ್ದೆ. ಅಂತೂ ಅ.ನ.ಕೃ. ಕನ್ನಡಿಗರಿಗೆ ಎಷ್ಟು ಪ್ರಿಯರು, ಕನ್ನಡಿಗರು ಅವರಿಗೆಷ್ಟು ಪ್ರಿಯರು ಎಂಬುದು ನಮ್ಮ ಸಮ್ಮೇಳನದಲ್ಲಿ ಸ್ಪಷ್ಟವಾಗಿ ವ್ಯಕ್ತವಾಯಿತು. ಮುಂಜಾನೆ ಏಳರ ಸೂರ್ಯನನ್ನು ಅ. ನ. ಕೃ. ನೋಡದೆ ಎಷ್ಟು ವರ್ಷವಾಗಿತ್ತೋ, ಆದರೆ ಮಣಿಪಾಲದಲ್ಲಿ ಮಾತ್ರ ಕೋಳಿ ಕೂಗುವ ಮೊದಲೆ ಅವೆರು ಸಿದ್ಧರು.

ಉದ್ಘಾಟನೆಯ ಪರ್ವದಲ್ಲಿ, ಮಾಸ್ತಿ ವೆಂಕಟೇಶ ಅಯ್ಯಂಗಾರರು ಕೃಷ್ಣರಾಯರನ್ನು ಪರಿಚಯ ಮಾಡಿಸಿದ ಶೈಲಿ – ಆ ಹೃದಯಸ್ಪರ್ಶಿ ಮಾತುಗಳನ್ನು ಯಾರು ಮರೆಯಬಲ್ಲರು? ಮಾಸ್ತಿಯವರ ಆಶೀರ್ವಾದ ಮತ್ತು ಅ.ನ.ಕೃ. ಅವರ ಪುಣ್ಯಬಲದಿಂದ ಸಮ್ಮೇಳನ ಎಂತೆಂಥ ಗಂಡಾಂತರಗಳಿಂದಲೂ ಪಾರಾಗಿ ಎಲ್ಲರ ಹೆಸರನ್ನೂ ಉಳಿಸಿಕೊಟ್ಟಿತು. ಅ.ನ.ಕೃ. ಆವೇಗವನ್ನು ನಿಯಂತ್ರಿಸುವ ಸಲುವಾಗಿಯೇ ನಾನು ಮಾಸ್ತಿ – ಕಾರಂತ ಅವರನ್ನು ಬರಮಾಡಿಕೊಂಡಿದ್ದೆ. ಇವರಿಬ್ಬರ ನಡುವೆ ಅ.ನ.ಕೃ. ಅವರನ್ನು ಉಪಶಮನಗೊಳಿಸಬಹುದೆಂಬ ನನ್ನ ಆಶಯ ಸಂಪೂರ್ಣವಾಗಿ ಈಡೇರಿತು. ಆದರೂ ಚಕಮಕಿಗೆ ಯಥೇಷ್ಟ ಅವಕಾಶವಿತ್ತು. ವಿಷಯ ನಿಯಾಮಕ ಸಮಿತಿಯ ಸಭೆಗೆ ಕಾರಂತರು ಬರುವುದಿಲ್ಲವೆಂದರೂ ಅವರನ್ನು ಅಂಗಲಾಚಿಕೊಂಡೆ, ಬಂದರು – ಬಂದಮೇಲೆ ಕಾರಂತರು – ಕೇಳಬೇಕೆ? ಪರಿಷತ್ತಿನ ಬೆಂಗಳೂರು ನೀತಿಯನ್ನು ಖಂಡಿಸಿದರು. ‘ಮುಂದಕ್ಕೆ ತಿದ್ದಿಕೊಳ್ಳುತ್ತೇವೆ’, ಅಂದರೆ ‘ಮುಂದಿನ ಜನ್ಮಕ್ಕೋ?’ ಅನ್ನುವಾಗಲೆ ಡಾ। ಪೈ ಅವರು ಬಂದುಬಿಡಬೇಕೆ? ಇದೇನು ಈ ಸಾಹಿತಿಗಳು ಬರೇ ಭಾಷಣ ಮಾಡುತ್ತಾರೆ ಎಂದಿದ್ದ ಪೈ ಅವರಿಗೆ ಅವರ ಬಿರುಸಾದ ತಾತ್ತ್ವಿಕ ಮತ್ತು ಸಂಘಟನೆಯ ನೀತಿಯ ವಿರುದ್ಧ ಚರ್ಚೆ ವಿಪರೀತ ಜಗಳದಂತೆ ತೋರುತ್ತಿತ್ತು. ‘ಇದು ನಿಮಗೆ ಸಂಬಂಧಪಟ್ಟದ್ದಲ್ಲ. ಸಮ್ಮೇಳನಗಳು ಬಿಸಿಯೇರುವುದೇ ಹೀಗೆ,’ ಎಂದು ಪೈ ಅವರನ್ನೊಪ್ಪಿಸುವುದೇ ಕೆಲಸವಾಗುತ್ತಿತ್ತು. ಸಮ್ಮೇಳನದ ಕೊನೆಯ ದಿನ ಬಹಿರಂಗ ಅಧಿವೇಶನ – ಠರಾವುಗಳ ಮಂಡನೆ. ಒಂದು ಠರಾವನ್ನು ಕಾರಂತರೇ ಮಂಡಿಸಿದರು: ‘ನಾನು ದುಡ್ಡು ತಿಂದಿದ್ದೇನೆಂದು ಅಪವಾದ ಹೊರಿಸುವ ಮಹಾನುಭಾವರು ಅಧ್ಯಕ್ಷಪೀಠದಲ್ಲಿರುವ ವರೆಗೆ……., ಎಂದು ಮುಂತಾಗಿ ಹೇಳಿ ಒಂದು ಖಂಡನಾತ್ಮಕ ನಿರ್ಣಯವನ್ನು ಮಂಡಿಸಿದರು. ಹೊಳೇನರಸೀಪುರದ ತರುಣ ರಾಮಪ್ರಸಾದ ಅನುಮೋದಕ ಭಾಷಣದಲ್ಲಿ ಪರಿಷತ್ತಿನ ಬಗ್ಗೆ, ಅದರ ಅಧ್ಯಕ್ಷರ ಬಗ್ಗೆ ಕೆಲವು ಮಣಿಮುತ್ತಿನಂಥ ಪದಪುಂಜಗಳನ್ನು ಎಸೆಯಲಾರಂಭಿಸಿದ. ನಾಲ್ಕು ಸಾವಿರ ಜನಸಂದಣಿ ಈ ದಿಗ್ಗಜಗಳ ನಡುವಣ ಹೋರಾಟವನ್ನು ಉತ್ಸುಕತೆಯಿಂದ ಕತ್ತೆತ್ತಿ ಅವೋದಿಸುತ್ತಿತ್ತು. ಇಡೀ ಸಭೆ ಅ. ನ. ಕೃ. – ಕಾರಂತರ ಕಡೆಗೆ ತಿರುಗಿದ ಸೂಚನೆ ಅವರ

ಚಪ್ಪಾಳೆ, ಮುಖದ ಉತ್ಸಾಹದಿಂದ ತಿಳಿಯುತ್ತಿತ್ತು. ಮಹಾಚಿಂತಾಕ್ರಾಂತರಾದ ಡಾ। ಪೈ ಮತ್ತು ನನ್ನ ಪಕ್ಷಕ್ಕೆ ದೇವರ ಹೊರತು ಯಾರಿದ್ದಾರೆಂದು ನಾವು ವಿಷಣ್ಣತೆಯಿಂದ ಪ್ರಾರ್ಥಿಸುವಷ್ಟಕ್ಕೆ ಅ.ನ.ಕೃ. ಅವರು ನಮ್ಮ ಹೆಸರನ್ನು, ಇಡಿ ಸಮ್ಮೇಳನದ ಹೆಸರನ್ನು ಉಳಿಸುವ ನಿಲುಮೆ ತಾಳಿದರು. ಇದು ನನ್ನ ನಿರೀಕ್ಷೆಗೆ ಮಿಗಿಲಾದ, ನನ್ನ ಜೀವನದ ಅತ್ಯಂತ ವಿಸ್ಮಯಕಾರಿ ಘಟನೆಗಳಲ್ಲಿ ಒಂದಾಯಿತು: ಅ.ನ.ಕೃ. ರಾಮಪ್ರಸಾದನ ನಾಲಗೆಗೆ ಕಡಿವಾಣ ಹಾಕಿದರು. ಮಾತ್ರವಲ್ಲ, ನಿರ್ಣಯದ ಪರವಾಗಿ ಮಾತನಾಡುವವರಿಗೆ ಅವಕಾಶ ಕೊಡದೆ, ವಿರೋಧ ಮಾಡುವವರು ಬನ್ನಿ ಎಂದು ದ್ವಾಪರಯುಗದ ಆ ಭಗವಂತನ ಮುತ್ಸದ್ದಿತನವನ್ನು ಮೆರೆದರು. ನಿರ್ಣಯವನ್ನು ಮತಕ್ಕೆ ಹಾಕುವಾಗಲೂ ವಿರೋಧಿಸುವವರು ಕೈ ಎತ್ತಿ ಎಂದಾಗ ಯಾರೂ ಎತ್ತದೆ ಯಾವ ಗದ್ದಲವೂ ಇಲ್ಲದೆ ನಿರ್ಣಯ ಸರ್ವಾನುಮತದಿಂದ ಸ್ವೀಕೃತವಾಯಿತು. ಕಾರ್ಯಕರ್ತರಾದ ನಾವು ಪಾರಾದೆವು.

ಬಹಿರಂಗವಾಗಿ ಯಾರ ಅವಮಾನ ಮಾಡುವುದೂ ಯಾರ ಉದ್ದೇಶವೂ ಆಗಿರಲಿಲ್ಲವಾದರೂ ಅಂದಿನ ಪರಿಷತ್ತಿನ ಧೋರಣೆಗೆ ಅ.ನ.ಕೃ. ಅಧ್ಯಕ್ಷರಾಗಿರುವ ಸಮ್ಮೇಳನದಲ್ಲಿ ಟೀಕೆ – ಖಂಡನೆ ದೊರೆಯದಿರಲು ಸಾಧ್ಯವೆ? ಖಂಡನೆಯನು ಸುತರಾಂ ಒಲ್ಲದ ಡಾ। ಪೈಯವರು ಶಿವಮೂರ್ತಿ ಶಾಸ್ತ್ರಿಗಳ ಹತ್ತಿರ ಅತ್ತು ಕ್ಷಮೆ ಬೇಡಿದರು. ಸಮ್ಮೇಳನ ಮುಗಿದ ಮೇಲೆ ನನ್ನನ್ನು ತರಾಟೆಗೆ ತೆಗೆದುಕೊಂಡರು. "ನಿನಗೆ ಗೊತ್ತಿದ್ದೂ ಹೀಗೆ ಮಾಡಿದಿಯಲ್ಲಾ?" ಎಂದು ಚೆನ್ನಾಗಿ ಥಳಿಸಿದರು. ಸಿಕ್ಕವರಿಗೆ ಅಂದರು. ಇಂಥ ಸಮ್ಮೇಳನ ನನಗೆ ಬೇಡವಿತ್ತು ಎಂದು ಕೊರಗಿದರು. ನಾನೂ ಅತ್ತೆ – ಕಾರಂತರೇ ಸಮಾಧಾನ ಮಾಡಿದರು. ಆಮೇಲೆ ಮಾನಸಿಕ ಸಮತೋಲವನ್ನು ಕಾಪಾಡಿಕೊಳ್ಳಲು 15 ದಿನ ಮದರಾಸಿನಲ್ಲಿ ಅಜ್ಞಾತವಾಸ ಮಾಡಿ ಮರಳಿದೆ.

ಸಮ್ಮೇಳನದ ಮೂರು ದಿನ – ಎಪ್ಪತ್ತೆರಡು ಗಂಟೆ – ನಾಲ್ಕುಸಾವಿರದ ಮುನ್ನೂರಯಿಪ್ಪತ್ತು ಮಿನಿಟು ಅದೆಷ್ಟು ಸಮಸ್ಯೆಗಳು ಬಂದುವೋ, ಹೇಗೆ ಪರಿಹಾರವಾದುವೋ, ಯಾರು ಮಾಡಿದರೋ ಬಿಟ್ಟರೋ ಒಂದೂ ತಿಳಿಯದು. ಇಷ್ಟು ಜನ ವಿವಿಧ ಮನೋಧರ್ಮದ ಮನುಷ್ಯರನ್ನು ಒಂದೇ ಕಡೆ ಸೇರಿಸಿದ ಮೇಲೆ ಉಡುಪಿ ಶ್ರೀಕೃಷ್ಣಾ, ನೀನೇ ಕಾಪಾಡು ಎಂದು ಅವನನ್ನೇ ಶೇಕಡಾ ನೂರರಷ್ಟು ಆಸ್ತಿಕನಲ್ಲದ ನಾನೂ ಪ್ರಾರ್ಥಿಸಬೇಕಾಯಿತು.

ಸಮ್ಮೇಳನ ಮುಗಿದರೂ ಪ್ರತಿಕ್ರಿಯೆ ನಿಲ್ಲಲಿಲ್ಲ, ಕಟ್ಟೀಮನಿಯವರು ರೊಚ್ಚಿನಿಂದ ಟೀಕೆ ಮಾಡಿದರು – ಸಾಹಿತಿಗಳನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ ಎಂದು ಆಪಾದಿಸಿದರು. ಬೀಚಿಯವರು ಲೇವಡಿ ಮಾಡಿ ನನ್ನನ್ನು ಕುರಿದಾಸ ಎಂದು ಕರೆದರು. ಆದರೆ ಇದಾವುದೂ ನನಗೆ ಸಲ್ಲದ ಬಿರುದು. ಪ್ರಾಮಾಣಿಕವಾಗಿ ದುಡಿದ ನನಗೆ ಈ ಟೀಕೆಗಳು ಅಮೃತಪ್ರಾಯವಾದುವು. ನಡೆದ ವಿಷಯ ಸನ್ನಿವೇಶಗಳು ಕ್ಷಣಿಕ ವಿಪ್ಲವವನ್ನುಂಟುಮಾಡಿದರೂ ಆರೋಗ್ಯ ಸಂವರ್ಧನೆಗೆ ನೆರವಾದುವು. ಸಾರ್ವಜನಿಕ ಕಾರ್ಯಕರ್ತನ ಮನಸ್ಸು ದೃಢವಾಗಬೇಕಾದರೆ, ಸ್ನೇಹಿತರ ಶಾಭಾಸಗಿರಿಗಿಂತ ಇಂಥ ಟೀಕಾಕಾರರ ವಾಗ್ಬಾಣಗಳು ಹೆಚ್ಚು ಪ್ರಯೋಜಕವೆಂಬ ತೀರ್ಮಾನಕ್ಕೆ ನಾನು ಬಂದೆ. ಮುಂದಿನ ಕೆಲವು ವರ್ಷಗಳಲ್ಲಿ ನಾನು ಭಾಗವಹಿಸಿದ ಶತಮಾನೋತ್ಸವ, ಸನ್ಮಾನೋತ್ಸವಗಳ ಪ್ರಮಾಣ, ಗುಣ – ಎರಡೂ ಹೆಚ್ಚುವುದಕ್ಕೂ 42ನೆ ಸಾಹಿತ್ಯ ಸಮ್ಮೇಳನದ ಕಷಾಯ ಕಾರಣವಾಯಿತು.

೪

1962ನೆಯ ಅಕ್ಟೋಬರ 10ನೆಯ ತಾರೀಕಿಗೆ ಕಡಲತೀರದ ಭಾರ್ಗವ ಶಿವರಾಮ ಕಾರಂತರಿಗೆ ಅರುವತ್ತು ತುಂಬುವ ದಿನ. ಉಡುಪಿಯವರಾದ ನಮಗೆ ಅದು ಹಬ್ಬದ ದಿನವಾಯಿತು. ಕೋಟದಲ್ಲಿ ಹುಟ್ಟಿದರೂ, ಪುತ್ತೂರಲ್ಲಿ ಮನೆಮಾಡಿಕೊಂಡರೂ, ಉಡುಪಿಯ ಜನರನ್ನು ಉಡಾಫೆಯವರೆಂದು ಬೈದರೂ, ಕಾರಂತರಿಗೆ ನಮ್ಮೂರಿನಲ್ಲಿ ಒಂದು ಹಿತಾಸಕ್ತಿ ಇದ್ದೇ ಇತ್ತು. ಮಠ ಸಂಸ್ಥಾನದ ಗುರುಪರಂಪರೆಯವರನ್ನು ಅಷ್ಟಾಗಿ ಒಪ್ಪದ ಕಾರಂತರಿಗೆ ನಮ್ಮ ಉಡುಪಿಯ ಮಠಗಳು ವಿಡಂಬನೆಯ

ವಸ್ತುವಾಗಿ ಕಂಡರೆ ಅಚ್ಚರಿಯೇನಿಲ್ಲ. ಉಡುಪಿಯಲ್ಲಿಯೇ ಅವರ ಸ್ವಾತಂತ್ರ್ಯ ಹೋರಾಟದ ಸ್ನೇಹಿತ ವರ್ಗ ನೆಲಸಿತ್ತೆಂದೋ, ವರ್ಷಕ್ಕೆ ನಾಲ್ಕು ಸಲ ಪುತ್ತೂರಿಂದ ಕೋಟಕ್ಕೆ ಹೋಗುವ ದಾರಿಯಲ್ಲಿ ಉಡುಪಿ ಒಂದು ತಂಗುದಾಣವಾಗಿರುವುದೆಂದೋ, ಹೇಗೂ ನನಗೂ ಅವರಿಗೂ ಪರಿಚಯವೇ ಇಲ್ಲದ ನನ್ನ ಚಿಕ್ಕಂದಿನಲ್ಲಿ ಉಡುಪಿಯ ಬೀದಿಗಳಲ್ಲಿ ದ್ರುತಗತಿಯಿಂದ ಮೋರೆ ಅಡಿಗಿಕ್ಕಿ ನಡೆಯುವ ಕಾರಂತರ ಚಿತ್ರ ನೆನಪಿಗೆ ಬರುತ್ತಿದೆ. ಉಡುಪಿಯ ಲೇಖಕರು ಒಂದು ಕಾಲಕ್ಕೆ ಕಾರಂತರಿಂದ ಪ್ರಭಾವಿತ ರಾದಂತೆ ತೋರುತ್ತದೆ. ನನ್ನೂರಿನ ಒಬ್ಬರು (ಬನ್ನಂಜೆ) ಕಾರಂತರಂತೆ ಕೂದಲನ್ನು ಬಿಟ್ಟು ಕಾರಂತರ ನಕಲು ಹೊಡೆದಿದ್ದಾರೆ; ಕಾರಂತರಂತೆ ಹಲವಾರು ಪತ್ರಿಕೆಗಳನ್ನೂ ನಡೆಸಿ, ಕೂರಿಸಿ, ನಿಲ್ಲಿಸಿ ಯಶಸ್ವಿ ಯಾಗಿದ್ದಾರೆ. ಉಡುಪಿಗೆ ಬಂದಾಗಲೆಲ್ಲ ಕಾರಂತರು ಅಜ್ಜರಕಾಡಿನ ಕೊಚ್ಚಿಕಾರ ಪಾಂಡುರಂಗ ಪೈ ಎಂಬ ತಮ್ಮ ಸಹಪಾಠಿಯೊಬ್ಬರ ಮನೆಯಲ್ಲಿ ತಂಗುತ್ತಿದ್ದರು. 1944ರ ಸುಮಾರಿಗೆ ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯ ವಿದ್ಯಾರ್ಥಿಗಳು 'ಕಲಾವೃಂದ' ಎಂಬ ಹೆಸರಲ್ಲಿ ಒಂದು ಸಾಹಿತ್ಯ ಸಂಘ ವನ್ನು ಕಟ್ಟಿದರು; ಅಲ್ಲಿ ಕನ್ನಡ ಜಾಣ, ಕಾವ ಪರೀಕ್ಷೆಗಳಿಗೆ ನಾನು ವ್ಯಾಕರಣ, ಕಾವ್ಯ ಪಾಠ ಹೇಳುತ್ತಿದ್ದೆ. ಕಲಾವೃಂದದ ನನ್ನ ಶಿಷ್ಯರು ಒಮ್ಮೆ ಕಾರಂತರನ್ನು ತಮ್ಮ ದಸರಾ ಸಭೆಗೆ ಕರೆದಾಗ ಕೊಚ್ಚಿಕಾರ್ ಅವರ ಮನೆಯಿಂದ ಕಾರಂತರನ್ನು ಕರೆತರುವ ಹೊಣೆ ನನಗೊಪ್ಪಿಸಿದರು. ಆಗ ಉಡುಪಿಯಲ್ಲಿ ಬಾಡಿಗೆ ಮೋಟಾರು ಕಾರು ಇನ್ನೂ ಬಂದಿರಲಿಲ್ಲ – ಜಟ್ಕಾ ಬಂಡಿಯ ಯುಗ ಅದು. ಜಟ್ಕಾದಲ್ಲಿ ಕಾರಂತರ ಜತೆ ಬರುತ್ತಿದ್ದಾಗ ಅವರಿಗೊಂದು ಮಹಾ ಪ್ರಶ್ನೆ ಕೇಳಿದೆ. ಪ್ರೇಮಚಂದ ಅವರ 'ಗಬನ್' ಕಾದಂಬರಿ ಯನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಬೇಕಾಗಿತ್ತು. 'ಗಬನ್' ಅಂದರೆ ಏನು? ಎಂದು ಕೇಳಿದರು. 'ದುಡ್ಡು ತಿನ್ನುವುದು' ಎಂದೆ. 'ಗುಳುಂ' ಅಂತ ಹೆಸರಿಡಿ ಎಂದರು. (ನನ್ನ ಚೊಚ್ಚಲ ಅನುವಾದ – ಕೃತಿಗೆ ಇಂಥ ಹೇಸಿಕೆ ಹೆಸರು ಸಲ್ಲದೆಂದು ನಾನು 'ಗುಳುಂ' ಒಪ್ಪಲಿಲ್ಲ.) ಬಹುಶಃ ಇದೇ ಕಾರಂತರಿಗೆ ನಾನು ಭೆಟ್ಟಿಯಾದ ಪ್ರಥಮ ಸಂದರ್ಭ. ಹೈಸ್ಕೂಲು ಸೇವೆಯ ಘಟ್ಟ ಮುಗಿದು ಕಾಲೇಜು ವಿದ್ಯಾಭ್ಯಾಸ ಮುಗಿಸಿ ಊರಿಗೆ ಮರಳುವಷ್ಟು ಹೊತ್ತಿಗೆ ನನ್ನೂರಲ್ಲಿ ಒಂದು ಕಾಲೇಜು ಸಿದ್ಧವಾಗಿ ನಿಂತಿತ್ತು. ಈ ಕಾಲೇಜಿಗೆ ಚಂದಾ ಎತ್ತಲು ಮಣಿಪಾಲದ ಪೈ ಬಂಧುಗಳ ಜತೆಗೆ ಕಾರಂತರೂ ಊರೂರು ಸುತ್ತಾಡಿದರಂತೆ, ಕರ್ನಾಟಕದ ತನ್ನ ಪರಿಚಯಸ್ಥರ ಕಡೆ ಎಲ್ಲ ಕರೆದುಕೊಂಡು ಹೋದರಂತೆ. ಊರಿನ ಕರ್ನಾಟಕ ಸಂಘದ ಮತ್ತು ಕಾಲೇಜಿನ ಸಾಹಿತ್ಯೋತ್ಸವದ ಸಲುವಾಗಿ ಕಾರಂತರನ್ನು ಹಲವು ಬಾರಿ ಕರೆಯುವ, ಕರೆದೊಯ್ಯುವ, ಕೊಚ್ಚಿಕಾರ ಪಾಂಡುರಂಗ ಪೈ ಅವರ ನಿಧನಾನಂತರ ಮನೆಯಲ್ಲೇ ಇಳಿಸಿ ಕೊಳ್ಳುವ ಕೆಲಸ ನನ್ನದಾಯಿತು. ಯಾವಾಗ ನಾವು ಕರೆದರೂ ಇಲ್ಲ ಎಂದವರಲ್ಲ. ಒಂದು ಸಾರಿ ಎಲ್ಲರಂತೆ ಎಂದುಕೊಂಡು ಬಂದದ್ದಕ್ಕೆ ಭತ್ತೆಯನ್ನು ಮನಿಯಾರ್ಡರ್ ಮಾಡಿದೆವು – ಕೈಯಲ್ಲಿ ಕೊಡಲು ಹೆದರಿ. ಮನಿಆರ್ಡರು ಮರಳಿ ಬಂತು. ಈ ಜಿಲ್ಲೆಯ ಒಳಗೆ ನನ್ನದು ಧರ್ಮ ದರ್ಶನ ಎಂದೇನೊ ಬರೆದಿದ್ದರು. ನನ್ನ ವಿವಾಹಪೂರ್ವದಲ್ಲಿ ನನ್ನ ಮುಪ್ಪಿನ ಮಾತಾಪಿತರಿಗೂ ಕಾರಂತರು ನಮ್ಮಲ್ಲಿ ಬರುವುದೆಂದರೆ ಒಂದು ಹಿಗ್ಗು, ತವಕ. ಮದುವೆಯಾದ ಮೇಲೆ ನಾನು ಹೇಳಿದಂತೆ ಕೇಳುವ ಒಂದು ಜೀವ ನನಗೆ ದೊರೆತ ಮೇಲೆ ನಮ್ಮ ಮನೆಯಲ್ಲಿ ಕಾರಂತರಿಗೆ ಆತಿಥ್ಯ ಮಾಡುವುದು ಅಚ್ಚುಕಟ್ಟಾಗಿ ನಡೆಯತೊಡಗಿತು. ಕಾರಂತರ ಗುಬ್ಬಚ್ಚಿ ಊಟಕ್ಕೆ ಯಾವುದೂ ಹೆಚ್ಚಾಗಿ ಬೇಕಾಗುತ್ತಿರಲಿಲ್ಲ. ಕೆಲವು ಸಮಯದ ಮೇಲೆ ನಮ್ಮ ಹಳ್ಳಿಯ ಪದಾರ್ಥಗಳನ್ನೇ ಅವರು ಮೆಚ್ಚುವುದನ್ನು ಕಂಡು ಅಮಟೆ ಗೊಜ್ಜು, ಉದ್ದಿನ ಹಿಟ್ಟು ಇದೇ ಅವರಿಗೆ ತಯಾರಾಗುತ್ತಿತ್ತು. ಕಾಫಿ ಒಂದು ನಾಲ್ಕು ಸಲ ಭಟ್ಟಿ ಇಳಿಸಿದರಾಯಿತು. ರಾತ್ರಿ ಒಂಭತ್ತಾಯಿತೋ ಕಾರಂತರ ಕಣ್ಣು ಬಾಡಲು ತೊಡಗುತ್ತದೆ – ಯಾರು ಇರಲಿ ಬಿಡಲಿ ನಿದ್ದೆ ಬಂದೇ ಬಿಡುತ್ತದೆ. ಮುಂಜಾನೆ ನಾವೇಳುವ ಮುನ್ನವೇ ಎದ್ದರೂ ಸದ್ದಿಲ್ಲದೆ ಸಿಕ್ಕಿದ ಪುಸ್ತಕ, ಪೇಪರು ಓದುತ್ತ ಕಾಫಿಗಾಗಿ ಕಾಯುತ್ತಾರೆ. ನಮ್ಮ ಐದು ಮಕ್ಕಳು ಒಂದೊಂದಾಗಿ ಅವರ ನಿದ್ರಾಭಂಗ ಮಾಡುವ ದಿನ ಗಳನ್ನು ಅವರು ಸಹಿಸಿಕೊಂಡಿದ್ದಾರೆ. ಅವುಗಳ ಬಾಲಾಪ್ಯದ ಕಾಟ ನೆಚ್ಚಿಕೊಂಡಿದ್ದಾರೆ; ಕಾರು ಬಂದ ಮೇಲೆ ಅವುಗಳಿಗೆ ಮಣಿಪಾಲದ ವರೆಗೆ ಒಂದು ಟ್ರಿಪ್ ಕೊಡುತ್ತಾರೆ. ಅವರ ಜತೆ ನಾನು ಅವರ ಕೃತಿಗಳ ಜನನ ದಿನಾಂಕ, ಮಾರಾಟದ ಸ್ಥಿತಿಗತಿ, ಅವರ ಮನೆ ಮಕ್ಕಳ ಕ್ಷೇಮ ಸಮಾಚಾರ ಇಷ್ಟೇ ಕೇಳುತ್ತೇನೆ.

ಅವರ ಕೃತಿಯ ವಿಮರ್ಶೆ ನಾನು ಈಗ ಮಾಡುವುದಿಲ್ಲ – ಮುದ್ರಿತವಾದ ಪ್ರತಿ ಗ್ರಂಥವೂ ನನಗೆ ಬಂದೇ ಬರುತ್ತದೆ. ಅವರ ಮಕ್ಕಳಲ್ಲಿ ಉಲ್ಲಾಸ ಒಬ್ಬನನ್ನು ಬಿಟ್ಟು ಉಳಿದವರೆಲ್ಲರೂ ನಮ್ಮ ಕಾಲೇಜಿಗೇ ಕಲಿಯಲು ಬಂದರು. ಈ ಇಪ್ಪತ್ತು ವರ್ಷಗಳಲ್ಲಿ ಕಾರಂತರು ನಮ್ಮ ಮನೆಯವರೇ ಆಗಿದ್ದಾರೆ. ಯಾವ ತಿಳಿಸುವ ಅಗತ್ಯವಿಲ್ಲದಿದ್ದರೂ ಬರುವ ಸುದ್ದಿ ಮೊದಲೇ ತಿಳಿಸಬೇಕು – ಅದು ಅವರ ಶಿಸ್ತು. ಅವರ ಎಷ್ಟೋ ಮಂದಿ ದೇಶೀಯ ವಿದೇಶೀಯ ಸ್ನೇಹಿತರ ಪರಿಚಯ ನಮಗಾಗಿದೆ. ನಾನೂ ಮಣಿ ಪಾಲಕ್ಕೆ ಬಂದ ವಿದೇಶೀಯ ಸಾಹಿತ್ಯ ಕಲಾಭಿಮಾನಿಗಳನ್ನು ಪುತ್ತೂರಿಗೆ ಭೇಟಿ ಕೊಡಿಸಿ ಅಟ್ಟುತ್ತೇನೆ. ಅಲ್ಲಿಂದ ಹಿಂದಿರುಗಿದ ಮೇಲೆ ಈ ವಿದೇಶೀಯ ಪಂಡಿತರು ಕಾರಂತ ಪ್ರತಿಭೆಗೆ ಮನಸೋತು ಬಂದು ನನಗೆ ವರದಿ ಮಾಡಿ ಹೋಗುತ್ತಾರೆ. ಹೀಗೆ ನಮ್ಮ ಪರಸ್ಪರ ಬಾಂಧವ್ಯ ಕುದುರಿದೆ, ಬೆಳೆದಿದೆ.

1958ರ ಹೊತ್ತಿಗೆ ಕಾರಂತರಿಗೆ ಅವರ ಬಾಲ್ಯಾಪ್ಯದ ಒಂದು ಹುಚ್ಚು ಮರುಕಳಿಸಿ ಪೀಡಿಸಲು ತೊಡಗಿತು – ಅದೇ ಯಕ್ಷಗಾನದ ಮರುಳು. ಮೊದಲಿಗೆ ಅವರ ಸೆಮಿನಾರು ದಿಲ್ಲಿಯ ಸಂಗೀತ ನಾಟಕ ಅಕಾಡಮಿಯ ಕೃಪಾಶ್ರಯದಲ್ಲಿ ಬ್ರಹ್ಮಾವರದಲ್ಲಿ ನಡೆಯಿತು; ಅಲ್ಲಿ ನನ್ನ ಸಹೋದ್ಯೋಗಿ ಬಿ. ವಿ. ಆಚಾರ್ಯರು ಉಳಿದ ಏರ್ಪಾಟುಗಳನ್ನು ನೋಡಿಕೊಂಡರು. ಆ ತರುವಾಯ ನಮ್ಮ ಮನೆಯ ಹಿಂದಿನ ಕಲ್ಯಾಣಮಂಟಪದಲ್ಲಿ ಒಂದು ವಾರದ ತನಕ ಯಕ್ಷ ಶೈಲಿಯ ಸಂಗೀತದ ಕುರಿತ ಚರ್ಚೆ, ಪ್ರದರ್ಶನ ನಡೆದುವು. ಈ ಎರಡು ಸಮಿನಾರುಗಳ ಫಲಶ್ರುತಿಯೇ ಕಾರಂತರ 'ಯಕ್ಷಗಾನ ಬಯಲಾಟ'. ಮತ್ತೆರಡು ವರ್ಷದಲ್ಲಿ ಕಾರಂತರ ಬ್ಯಾಲೇ ಪ್ರಯೋಗಗಳಿಗೆ ತರಬೇತಿ ನಡೆಯಬೇಕಾಯಿತು. ಎರಡು ಸಲ ಉಡುಪಿಯಲ್ಲಿ, ಒಂದು ಸಲ ಬ್ರಹ್ಮಾವರದಲ್ಲಿ – ಹೀಗೆ ಭೀಷ್ಮ ವಿಜಯ, ಪಂಚವಟಿ, ಬಭ್ರುವಾಹನ, ಗಯಚರಿತ್ರೆ ಕಾರಂತರ ಕಲಾಸೃಷ್ಟಿಯ ಅದ್ಭುತ ಲೋಕವನ್ನು ಭಾರತೀಯ ಕಲಾಪ್ರಪಂಚಕ್ಕೆ ಬಿತ್ತರಿಸಿ ದುವು. ಬ್ಯಾಲೆ ತಯಾರಿಸುವಾಗ, ಅದನ್ನು ಹೊರಡಿಸುವಾಗ ಯಕ್ಷಗಾನ ಕಲಾವಿದ ಕಪ್ಪೆಗಳನ್ನು ಹಿಡಿದು ಒಟ್ಟುಮಾಡುವ ಸೇರೆಗಾರ ಕೆಲಸ ಬಿ. ವಿ. ಆಚಾರ್ಯರಿಗೆ ಮಾತ್ರ ಸಾಧ್ಯವಾದದ್ದು. ಕಾಲೇಜಿನ ಯಾವತ್ತೂ ಸೌಕರ್ಯಗಳನ್ನು ಒದಗಿಸುವುದು, ಸ್ವಯಂಸೇವಕರು ಬೇಕಾದರೆ ಅವರನ್ನು ನೀಡುವುದು ನನ್ನ ಕೆಲಸ. ಹೀಗೆ ಕಾರಂತರ ಕಲಾಪ್ರಯೋಗದಲ್ಲಿ ನಮ್ಮ ಅಳಿವಸೇವೆ ಸಲ್ಲಿಸಿದ್ದೇವೆ. 'ರಾಮನ ಬಳಿ ಇದ್ದೆ ನಾನು: ಕಂಡೆ ಕೋದಂಡದೋರ್ದಂಡ ಬಲ ನನ್ನ ಕಣ್ಣ ಮುಂದೆಯೇ ಮೊಳೆತು, ಬೆಳೆದ ರೀತಿಯ' ಎಂದು ನಾವೂ ಕಾರಂತರ ಪ್ರಯೋಗಗಳ ಬಗ್ಗೆ ಹೇಳಬಹುದು.

1956ನೆಯ ರಾಜ್ಯೋತ್ಸವ ದಿನದ ತರುವಾಯ ಕರ್ನಾಟಕದಲ್ಲಿ ಕವಿಪೂಜೆ – ವಿಭೂತಿಪೂಜೆ ಅಲ್ಲಿ ಇಲ್ಲಿ ಅದ್ದೂರಿಯಿಂದ ನಡೆಯಲು ಉಪಕ್ರಮವಾಯಿತು. ಸ್ಥಳೀಯ ಅಭಿಮಾನಕ್ಕೂ ಕನ್ನಡದ ಅಭಿಮಾನಕ್ಕೂ ಮಹಾಪೂರ ಎಂಬಂತೆ ಸರ್ಕಾರದ ಮತ್ತು ಜನಾಭಿಪ್ರಾಯ ಎರಡೂ ಪ್ರತ್ಯೇಕ ಪ್ರತ್ಯೇಕ ವಾಗಿ ಸಾಹಿತಿಗಳ ಮನ್ನಣೆಯ ಕಾರ್ಯಕ್ರಮ ಕೈಕೊಂಡವು. ವಿಶ್ವವಿದ್ಯಾನಿಲಯದ ಪಂಡಿತೋತ್ತಮರಿ ಗಂತೂ ಅವರ ಅಪಾರ ಶಿಷ್ಯವರ್ಗ ಹಾರ-ತುರಾಯಿ ಒಪ್ಪಿಸಲು ಸದಾ ಸಿದ್ಧವಾಗಿರುತ್ತಿತ್ತು. ಅರುವತ್ತಾಗುವುದೇ ತಡ – ಸಮಿತಿ, ಸಭೆ, ಹಾರ, ಸನ್ಮಾನ, ಅಭಿನಂದನ ಉಪನ್ಯಾಸ, ಗ್ರಂಥನಿಧಿ ಇದೊಂದು ಸಂಪ್ರದಾಯವೇ ಆಯಿತು (ಈಗ 50ಕ್ಕೇ ಇದು ಪ್ರಾರಂಭ!) ಕಾರಂತರಿಗೆ ಶಿಷ್ಯರೆಲ್ಲಿದ್ದಾರೆ? ಎಂದು ತಡಕಾಡಿದಾಗ ಯಕ್ಷಗಾನ ಶೈಲಿಯಲ್ಲಿ 'ನಾವೇ ಅಂದುಕೊಳ್ಳಬಹುದು' ಎಂದು 1962ರ ಸಪ್ಟಂಬರ ತಿಂಗಳಿಂದ ಮತ್ತೆ ಉಡುಪಿಯ ಕರ್ನಾಟಕ ಸಂಘವನ್ನು ಚುಚ್ಚಿ ಎಬ್ಬಿಸಿ ಒಂದು ಸನ್ಮಾನ ಸಮಿತಿ ರಚಿಸಿ ನಾವು ಕಾರ್ಯಪ್ರವೃತ್ತರಾದೆವು. ನಿಧಿ ಸಂಗ್ರಹಕ್ಕಾಗಿ ' ಕಾರಂತ ಅರುವತ್ತು' ಎಂಬ ಅಭಿನಂದನಗಳ ಚಿಕ್ಕ ಹೊತ್ತಗೆ ಹೊರಡಿಸಿದೆವು. ಅದರೊಳಗಿನ 30–40 ಪುಟ ಜಾಹೀರಾತಿನಿಂದ ಮೂರು ಸಹಸ್ರ ರೂಪಾಯಿಗಳ ಆದಾಯ ಹುಟ್ಟಿತು. ಅಕ್ಟೋಬರ 1ರಿಂದ ಹತ್ತರ ತನಕ ಉಡುಪಿಯ ಆಸುಪಾಸೇ ಅಲೆದಾಡಿ ಮತ್ತೆ ಮೂರು ನಾಲ್ಕು ಸಾವಿರ ಕೂಡಿಸಿದೆವು. ಕಾರಂತರಿಗೆ 5000 ರೂಪಾಯಿ ನಿಧಿ ಅರ್ಪಿಸಿ, ಒಂದೆರಡು ಸಾವಿರ ರೂಪಾಯಿ ಸಮಾರಂಭದ ವೆಚ್ಚಕ್ಕೆ ಹಿಡಿದೆವು. ಒಂದೇ ದಿನದ ಉತ್ಸವ – ಎ. ಎನ್. ಮೂರ್ತಿರಾವ್, ಕಯ್ಯಾರ ಕಿಞ್ಞಣ್ಣ ರೈ, ಟಿ. ಎ. ಪೈ ಮುಂತಾದ ಮೂರು ನಾಲ್ಕು ಜನರ ಅಭಿನಂದನ ಉಪನ್ಯಾಸ. ರಾತ್ರಿ ಪೆರ್ಡೂರು ಕಲಾಮಂಡಳಿಯ 'ಸೋಮಿಯ ಸೌಭಾಗ್ಯ'

ವನ್ನು ಕಾರಂತರಿಗೆ ಕಡ್ಡಾಯವಾಗಿ ತೋರಿಸಲಾಯಿತು. 'ಪರವಾಗಿಲ್ಲ, ಚೆನ್ನಾಗಿತ್ತು' ಎಂಬ ಶಿಫಾರಸು ಪೆರ್ಡೂರಿನವರಿಗೆ ಪರ್ವತವಾಯಿತು. ಕಾರಂತರ ಸಮಕಾಲೀನರೂ, ಓರಗೆಯವರೂ, ಪರಿಚಯಸ್ಥರೂ ಆದ ಸುಮಾರು 20–30 ಜನ ಸಾಹಿತಿಗಳಿಂದ ನಾನು ತರಿಸಿಕೊಂಡ ಪ್ರಶಂಸೆಯ ಸರಮಾಲೆ 'ಕಾರಂತ ಅರುವತ್ತು' ಮಣಿಪಾಲದಲ್ಲಿ ಬಹಳ ಸುಂದರವಾಗಿ ಮುದ್ರಿತವಾಯಿತು. ಮೊನೋಟೈಪ್ ಯುಗಕ್ಕೆ ಪೂರ್ವದ ಈ ಚಿಕ್ಕ ಪುಸ್ತಕದ ಚೆಲುವನ್ನು ಎಲ್ಲರೂ ಕೊಂಡಾಡಿದರು. ಕಾರಂತರ ಸ್ವಂತ ಆಲ್ಬಮಿನಿಂದ ಪುಟಗಳನ್ನು ಕಿತ್ತು ತಂದು ಅಚ್ಚು ಹೊಡೆದಿದ್ದೆ. ಈ ಗ್ರಂಥಕ್ಕೆ ಯಾವ ಬೆಲೆಯನ್ನೂ ಇಟ್ಟಿರಲಿಲ್ಲ. ಮುದ್ರಿತ 500 ಪ್ರತಿಗಳನ್ನು 'ವಿಶ್ವಾಸ', 'ಗೌರವ'ಪೂರ್ವಕವಾಗಿ ಮುಗಿಸಿಬಿಟ್ಟೆ. ಉಳಿದ ಕೆಲವನ್ನು ಅಟ್ಟದ ಮೇಲೆ ಒರಳೆಗಳಿಗೆ ಆಹಾರವಾಗಿ ಕೊಟ್ಟೆ. ಈ ಉತ್ಸವದ ಸಮಯ ಕಾರಂತರ ಮುಂಬಯಿ ಮಿತ್ರರಾದ ಎಸ್. ಎನ್. ಮೂಡಬಿದ್ರಿ, ಕೆ. ಕೆ. ಹೆಬ್ಬಾರ, ನಿ. ವ್ಯಾಸರಾಯ ಬಲ್ಲಾಳ ಅವರಿಗೂ ವಿನಂತಿ ಕಳಿಸಿ ಚಂದಾ ಎತ್ತಿದ್ದೆ. ಬಲ್ಲಾಳರು 'ಕಾರಂತ ಅರುವತ್ತ'ರ ಸಂಕ್ಷಿಪ್ತತೆಯನ್ನು ಬಿ.ಎಂ.ಶ್ರೀ ಸಂಭಾವನಾ ಗ್ರಂಥದ ಗಾತ್ರದೊಡನೆ ಹೋಲಿಸಿ 'ನಮ್ಮಿಂದ ಇಷ್ಟೇ ಸಾಧ್ಯವಾಯಿತೇ' ಎಂದು ಕೊರಗಿ ಪತ್ರ ಬರೆದರು. ನನಗೂ ಹಾಗೆಯೇ ಅನಿಸಿತ್ತು. ಆದರೆ ಬಿಡುಸಮಯದಲ್ಲಿ ಮಾತ್ರ ಇಂಥ ಕೆಲಸ ನಿರ್ವಹಿಸ ಬಲ್ಲ ತರಾತುರಿಯ ನಮ್ಮಿಂದ ಇದಕ್ಕಿಂತ ಹೆಚ್ಚು ಸಾಧ್ಯವೆ? ಇಷ್ಟಾದರೂ ಆಯಿತಲ್ಲಾ ಎಂದು ಅಂದಿನ ಮಟ್ಟಿಗೆ ಸಮಾಧಾನ ತಂದುಕೊಂಡೆ. ಕಾರಂತರಿಗೂ ಇದರಿಂದ ಸಂತೋಷವಾಯಿತು. ಅವರ ಆತ್ಮ ಕಥನದ ಎರಡನೆಯ ಆವೃತ್ತಿಯಲ್ಲಿ ಈ ವಿಷಯ ಪ್ರಸ್ತಾಪ ಮಾಡಿದ್ದಾರೆ: "1962ರ ಮಳೆಗಾಲದಲ್ಲಿ ನಾನು ಎರಡು ತಿಂಗಳ ಕಾಲ ಉಡುಪಿಯಲ್ಲಿ ಕಳೆಯಬೇಕಾಯಿತು. ಅಲ್ಲಿ ನನ್ನ ಕೆಲಸ ಮಾಡುತ್ತಿ ದ್ದಾಗ ಮಿತ್ರರಾದ ಹರಿದಾಸ ಭಟ್ಟರು ಏನೇನೋ ಹಂಚಿಕೆ ನಡೆಯಿಸುತ್ತಿದ್ದುದು ಪರೋಕ್ಷವಾಗಿ ತಿಳಿ ಯಿತು. ಅವರು ನನ್ನ ಅರುವತ್ತನೆ ವರ್ಷಾಬ್ದಿಯನ್ನು ನಡೆಯಿಸಲು ಯೋಚಿಸುತ್ತಿದ್ದರು...... ವಾಸ್ತ ವಿಕವಾಗಿ ಅಂಥ ಉಪಚಾರಗಳಲ್ಲಿ ನನಗೆ ಏನೂ ತೃಪ್ತಿ ಇಲ್ಲ. ಈ ನೆಪದಲ್ಲಿ ನನ್ನನ್ನು ನಾನು ಚಿರಸ್ಥಾ ಯಿಯಾಗಿ ಮಾಡಿ ಕೊಳ್ಳಲು ಇಚ್ಛಿಸಲಾರೆ. ಅವರ ಮನಸ್ಸನ್ನು ಮುರಿಯುವ ಕೆಲಸವೂ ಒಪ್ಪಲಿಲ್ಲ. ಸ್ನೇಹ, ಪ್ರೀತಿಗಳ ನಡುವೆ ನಾನೆಷ್ಟರವ – ಎನಿಸಿತು. ಹೀಗೆ ನನಗೆ ಅರುವತ್ತು ತುಂಬುತ್ತದೆ – ಎಂಬ ನೆನಪನ್ನು ಅವರು ಪ್ರಕಟಿಸುತ್ತಲೇ ಆ ಬಗ್ಗೆ ಕೆಲವು ಪತ್ರಿಕೆಗಳಲ್ಲಿ ಲೇಖನಗಳೂ ಬರತೊಡಗಿದವು...... 10–10–1962. ಉಡುಪಿಯವರಂತು ಆ ದಿನವನ್ನು ಬಲು ವಿಜೃಂಭಣೆಯಿಂದ ಜರಗಿಸಿದರು. ಹರಿದಾಸ ಭಟ್ಟರು, ಅವರಮಿತ್ರವರ್ಗ, ಪೈ ಬಂಧುಗಳು, ಡಾ। ಐತಾಳರು – ಎಲ್ಲರೂ ದೀರ್ಘ ಕಾಲದಿಂದ ನನ್ನನ್ನು ತನ್ನವನೆಂದು ತಿಳಿದವರೇ. ಆ ದಿವಸ ಅವರೆಂದ ನುಡಿಗಳಿಗೆ ಕಿವುಡಾಗಿ ಕುಳಿತು 'ನಿಮ್ಮ ವಿಶ್ವಾ ಸಕ್ಕೆ ನಾನು ಋಣಿ' ಎನ್ನಲೇಬೇಕಾಯಿತು...... ಉಡುಪಿ ಹಾಕಿದ ಪಾಠವನ್ನು ಕರ್ನಾಟಕದ ಹಲವು ನಗರಗಳು ಅನುಸರಿಸಿದವು. ನಾನು ಆ ಒಂದು ವರ್ಷವೆಲ್ಲ ಸನ್ಮಾನ ಹೆಕ್ಕುತ್ತ ಶಿವಮೊಗ್ಗ, ಅಂಕೋಲೆ, ಕಾರವಾರ, ಹೊಳೆನರಸೀಪುರ, ಮೈಸೂರು, ಭದ್ರಾವತಿ ಮೊದಲಾದ ಹಲವಾರು ಕಡೆಗಳಿಗೆ ಹೋಗಿ ನನ್ನ ಋಣಭಾರವನ್ನು ಹೆಚ್ಚಿಸಿಕೊಂಡು ಮರಳುವಂತಾಯಿತು." ಉಡುಪಿ ಕಟ್ಟಿಕೊಟ್ಟ ಅರುವತ್ತರ ಸನ್ಮಾನದ ತೇರು ಅಖಿಲ ಕರ್ನಾಟಕ ಸಂಚಾರ ಮಾಡಿತು.

೫

1966ರಲ್ಲಿ ಕನ್ನಡದ ನವ್ಯಕವಿ ಗೋಪಾಲಕೃಷ್ಣ ಅಡಿಗರು ನಮ್ಮೂರಿಗೆ ಪ್ರಿನ್ಸಿಪಾಲರಾಗಿ ಬಂದರು. ಅದೇ ವರ್ಷ ಅವರಿಗೆ 50 ತುಂಬಿತ್ತೆಂದು ಅವರ ಸ್ನೇಹಿತವರ್ಗದವರೆಲ್ಲ ಒಂದು ಸನ್ಮಾನೋ ತ್ಸವವನ್ನು ಏರ್ಪಡಿಸುವ ಯೋಚನೆ ಮಾಡಿದರು. ಸಾಗರದಿಂದ ಶ್ರೀ ಕೆ. ವಿ. ಸುಬ್ಬಣ್ಣ, ಮೈಸೂರಿಂದ ಶ್ರೀ ನ. ರತ್ನ ಮೊದಲಾದವರು ಮೊದಲೇ ಯೋಚಿಸಿಕೊಂಡಿದ್ದ ಒಂದು ಉತ್ಸವಕ್ಕೆ ಉಡುಪಿ ವೇದಿಕೆ ಯನ್ನೊದಗಿಸಿತು. ನಿಸ್ಸಿಮ ಎಜಿಕಿಲ್, ಲಂಕೇಶ, ಸುಮತೀಂದ್ರ ನಾಡಿಗ, ಯಶವಂತ ಚಿತ್ತಾಲ, ವೈ.ಎನ್.ಕೆ., ಎಂ. ಜಿ. ಕೃಷ್ಣಮೂರ್ತಿ ಮುಂತಾದ ನವ್ಯ ಕವಿ ಕಥೆಗಾರರೂ, ವಿಮರ್ಶಕರೂ ಸೇರಿ ಕೆಲವು ಕೃತಿಗಳನ್ನು ಚರ್ಚಿಸಿದರು. ಓದಿದ ಪ್ರಬಂಧಗಳ ಒಂದು ಉತ್ತಮ ಸಂಕಲನ ಕರ್ನಾಟಕ ಸಂಘದ ಹೆಸರಲ್ಲಿ,

ಮಣಿಪಾಲ ಪ್ರೆಸ್ಸಿನ ಕೃಪೆಯಿಂದ ಪ್ರಕಟಿತವಾಯಿತು. ಕಲ್ಕತ್ತೆಯ ರೈಟರ್ಸ್ ವರ್ಕ್‌ಶಾಪ್ ವತಿಯಿಂದ ಪ್ರಕಟಿತವಾದ ಅಡಿಗರ ಆಯ್ದ ಕವನಗಳ ಇಂಗ್ಲಿಷ್ ಅನುವಾದವೂ ಅಂದೇ ಬಿಡುಗಡೆ ಹೊಂದಿತು. ಇದಲ್ಲದೆ 'ಆಯ್ದ ಕವನಗಳು' ಎಂಬ ಹೆಸರಲ್ಲಿ ಅಡಿಗರ ಒಂದು ಉತ್ತಮ ಕವನ ಸಂಕಲನವನ್ನು ಅಕ್ಷರ ಪ್ರಕಾಶನದವರು ಈ ಉತ್ಸವದ ಸಂದರ್ಭದಲ್ಲಿಯೇ ಪ್ರಕಟಿಸಿದರು. ಸೆಮಿನಾರಿನಲ್ಲಿ ಎಂ. ಜಿ. ಕೃಷ್ಣಮೂರ್ತಿ ಕಾನೂರು ಹೆಗ್ಗಡಿತಿ ಕುರಿತ ಒಂದು ಉತ್ತಮ ಪ್ರಬಂಧ ಓದಿದರು, ಒಬ್ಬಿಬ್ಬರು ಚೆನ್ನಾಗಿ ಮಾತನಾಡಿದರು, ಎಜಿಕಿಲ್ ಅವರು ಹೆಚ್ಚಿನ ಚರ್ಚೆ ವಿವರ ತಿಳಿಯದೆ ಆಗಾಗ ತಮ್ಮ ವಿಚಾರವನ್ನು ಸಂಬಂಧ ಇದ್ದೂ ಇರದೆಯೂ ಮಂಡಿಸುತ್ತಿದ್ದರು. ಹೆಚ್ಚಿನಂಶ ಚರ್ಚಾಳುಗಳಿಗೆ ಸ್ವತಃ ಹೇಳುವುದೇನಿಲ್ಲವಾದರೂ ಚರ್ಚೆಯ ಸಲುವಾಗಿ ಚರ್ಚೆ ನಡೆಯಿತು.

ಅಡಿಗರ ಐವತ್ತರ ಹುಟ್ಟುಹಬ್ಬ ಮಾತ್ರ ನಮ್ಮ ಉಡುಪಿಯ ಇತಿಹಾಸದಲ್ಲಿ ನಡೆಯದ ರೀತಿಯಲ್ಲಿ ನಡೆಯಿತು. ಹೆಸರಿಗೆ ಮಾತ್ರ ನಾನು ಪುರೋಹಿತನಾಗಿದ್ದ ಈ ಉತ್ಸವದಲ್ಲಿ ನಾನು ಬೇರೆಯವರಿಗೆ ವಹಿಸಿಕೊಟ್ಟ ಸ್ವಾತಂತ್ರ್ಯ ಹೆಚ್ಚಾಯಿತೆಂದು ನನಗೆ ಆಮೇಲೆ ವಿಷಾದ ಎನಿಸಿತು. ಉಡುಪಿಯಲ್ಲೇ ಬಹುಜನಕ್ಕೆ ಆಮಂತ್ರಣವಿರಲಿಲ್ಲ, ಹೊರಗಿನ ಊರವರಿಗೂ ಹೆಕ್ಕಿ ಹೆಕ್ಕಿ 'ಅವಕಾಶ' ನೋಡಿ ಆಮಂತ್ರಣ ಕೊಟ್ಟಿರಲಾಗಿ ಒಬ್ಬ ಮಹಾಕವಿಯ ಹುಟ್ಟುಹಬ್ಬದ ಸಂದರ್ಭದಲ್ಲಿ ಎದ್ದು ತೋರಬೇಕಾದ ಉಲ್ಲಾಸಮಯ ವಾತಾವರಣದ ಬದಲು ಯಾವುದೋ ಅನಗತ್ಯವಾದ ಗಂಭೀರ ವಾತಾವರಣ ನಿರ್ಮಿತವಾಗಿತ್ತು. ಇದನ್ನೇ ಆಮೇಲೆ ನಿರಂಜನ ಉಡುಪಿಯ 'ನವಮಠ' ಎಂದು ಕರ್ಮವೀರದಲ್ಲಿ ಟೀಕಿಸಿದರು. ಮಹಾಕವಿಯೊಬ್ಬನನ್ನು ಅವನ ಸ್ನೇಹಿತರೇ ಕರಡಿಗೆಯೊಳಗೆ ಹಾಕಿಡುವ ಈ ವಿಷ್ಕಂಭಕದಲ್ಲಿ ನಾನೂ ಸೇರಿಕೊಂಡೆನಲ್ಲಾ ಎಂದು ದುಃಖವಾಯಿತು. ಕವಿಗಳು ಮಾರ್ಕೆಟಿನ ಸರಕಲ್ಲವಾದರೂ ಯಾವುದೋ ಒಂದು ಮುಹೂರ್ತದಲ್ಲಿ ಅವರ ಕವಿತೆಯನ್ನು ಅರ್ಥಮಾಡಿಕೊಳ್ಳದವರೂ ಸೇರಿ, ಮಹತ್ತನ್ನು ಗುರುತಿಸಬಲ್ಲವರೆಲ್ಲರೂ ಪರಸ್ಪರ ಭೇದ ಮರೆತು ಪೂರ್ವಗ್ರಹ ಬಾಧೆ ತೊರೆದು ಸಮಾನ ವೇದಿಕೆಯಲ್ಲಿ ಮಿಲನವಾಗುವುದು ಸಾರ್ವಜನಿಕ ಜೀವನವೆಲ್ಲ ಗುಂಪುಗಾರಿಕೆಯಿಂದ ಕಲುಷಿತವಾಗಿರುವ ಈ ಸಂಧಿಕಾಲದಲ್ಲಿ ಆರೋಗ್ಯ ವರ್ಧಕವೆಂದು ಬಗೆದವನು ನಾನು. ಶ್ರೀ ಅಡಿಗರಿಗೆ ಆ ಎರಡು ಮೂರು ದಿನವೂ ಮೈ ಚೆನ್ನಾಗಿದ್ದಿಲ್ಲವಾದರೂ ಸ್ನೇಹಶೀಲರಾದ ಅವರು ಸಾಕಷ್ಟು ಕಾಲ ಚರ್ಚೆಯಲ್ಲಿ ಕೂತು ಉತ್ಸವವನ್ನು ನಡೆಸಿಕೊಟ್ಟು ಸಮರ್ಪಕವಾದ ಉತ್ತರವನ್ನಿತ್ತು ಉತ್ಸವಕ್ಕೆ ಅರ್ಥ ಹಚ್ಚಿದರು. ಊರವರೆಲ್ಲಾ ಆಮೇಲೆ ಪತ್ರಿಕೆಗಳಲ್ಲಿ ತಿಳಿದು ಸಂತೋಷ ಪಡಬೇಕಾಯಿತು.

ಅಡಿಗರ ಸನ್ಮಾನ ಪ್ರಸಂಗದಲ್ಲಿ ಒಂದು ಸ್ವಾರಸ್ಯಕರವಾದ ಘಟನೆ ನಡೆಯಿತು. ಸನ್ಮಾನಕ್ಕೆ ಮೊದಲು ನಡೆಯಬೇಕಾದ ಯಾವುದೋ ಮಠದ ಸಭೆಗೆ ಬೇಂದ್ರೆಯವರನ್ನು ಒಪ್ಪಿಸಬೇಕೆಂದು ಪೇಜಾವರ ಶ್ರೀಗಳು ನನ್ನ ಹತ್ತಿರ ಹೇಳಿದರು. ಧಾರವಾಡಕ್ಕೆ ಹೋಗಿ ಬೇಂದ್ರೆಯವರನ್ನು ಒಪ್ಪಿಸಿ, ಯುಕ್ತ ಏರ್ಪಾಟು ಮಾಡಿ, ನಾನು ಮೈಸೂರಿಗೆ ಹೋದೆ. ಈ ನಡುವೆ ಸನ್ಮಾನ ಸಮಿತಿಯ ಕಾರ್ಯದರ್ಶಿ 'ನೀವು ಬಂದವರು ಹೇಗೂ ಇರುತ್ತೀರಿ, ಅಡಿಗರ ಸನ್ಮಾನದ ಅಧ್ಯಕ್ಷತೆ ವಹಿಸಿಬಿಡಿ' ಎಂಬರ್ಥದ ತಂತಿ ಬೇಂದ್ರೆಯವರಿಗೆ ಕಳಿಸಿದ...... ಬೇಂದ್ರೆಯವರಿಗೆ ಮನಸ್ಸು ವ್ಯಗ್ರವಾಯಿತು, ಉಗ್ರವೂ ಆಯಿತು. ನೇರವಾಗಿ ಅಡಿಗರ ಸನ್ಮಾನಕ್ಕೆ ಕರೆದರೆ ಎಲ್ಲಿ ತಾನು ಬರಲಾರೆನೇನೋ ಎಂಬ ಶಂಕೆಯಿಂದ ಈ ಆಟ, ಆಟಮಟ ಹೂಡಿದ್ದಾರೆಂದು ಅವರಿಗೆ ನನ್ನ ಮೇಲೆ ಸಂದೇಹ, ಮುನಿಸು ಎರಡೂ ಉಕ್ಕಿತು. ನಾನು ಮೈಸೂರಿಂದ ಮನೆಗೆ ಮರಳಿದಾಗ ಒಂದು ತಣ್ಣಗಿನ ಕನ್ನಡ ತಂತಿ ಕಾದಿತ್ತು: 'ಶ್ರೀಕೃಷ್ಣನಿಗೆ ನಮಸ್ಕಾರ, ಸ್ವಾಮಿಗಳಿಗೆ ಪ್ರಣಾಮ, ಅಡಿಗರಿಗೆ ಆಶೀರ್ವಾದ – ಬೇಂದ್ರೆ.' ನಾನು ಬರುವ ತನಕ ಇದರರ್ಥ ಯಾರಿಗೂ ಆಗಲಿಲ್ಲ. ನನಗೆ ತಂತಿ ನೋಡಿದ ತಕ್ಷಣ ಇದು ಯಾರ ತುಂಟತನದ ಪರಿಣಾಮವೆಂದು ತಿಳಿದೇಹೋಯಿತು. ಇನ್ನಾದರೂ ಸ್ವಾಮಿಗಳು ಬಿಡಬೇಕೆ? ಅವರ ಧಾರವಾಡದ ಶಿಷ್ಯರನ್ನೆಲ್ಲ ಬೇಂದ್ರೆಯವರ ಹತ್ತಿರ ಅಟ್ಟಿದರು, ಆದರೆ ಬೇಂದ್ರೆ ಜಗ್ಗಲಿಲ್ಲಃ ಭಟ್ಟರು ಬಂದವರು ಒಂದು ಮಾತು ಯಾತಕ್ಕಾದರೂ ಅನ್ನಲಿಲ್ಲ? ಅಡಿಗರು ಯಾರು? ನನಗೇನು ಅರಿಯದವರೇ? ಅವರ ಸನ್ಮಾನಕ್ಕೆ ಹೋಗುವುದು ನನಗೆ ಇಷ್ಟವಿರಲಾರದು ಎಂದು ಈ ರೀತಿ ಒಳಸಂಚೇಕೆ ಮಾಡಬೇಕು? ನನ್ನ ಮೇಲೆ ಸಂಶಯ ಯಾಕೆ ಮಾಡಿದರು?

ನಾನು, ಸುತರಾಂ ಬರಲಾಗುವುದಿಲ್ಲ' ಎಂದು ಬಿಟ್ಟರು. ಹಳೆ ತಲೆಮಾರಿನ ಹಿರಿಯರ ಔದಾರ್ಯವನ್ನರಿಯಲಾರದ ಒಬ್ಬ ಮಹನೀಯನ ಉಪಟಳದಿಂದ ಇದೊಂದು ಪ್ರಮಾದವೇ ಆಯಿತು. 'ಅಧ್ಯಕ್ಷತೆಗೆ ಕೊನೆಗಳಿಗೆಗೆ ಕಾರಂತರೂ ಒಪ್ಪಲಾರರು, ಅಲ್ಲದೆ ಈಗ ಅವರು ತಮ್ಮ ಬ್ಯಾಲೆ ಪ್ರದರ್ಶನದ ತರಾತುರಿಯಲ್ಲಿರುತ್ತಾರೆ' ಎಂದು ವಾಸ್ತವ ಸಂಗತಿ ಹೇಳಿದರೂ ಕೇಳದೆ ನನ್ನ ಕಾರ್ಯದರ್ಶಿ ಕಾರಂತರಿಗೂ ಏನೇನೋ ಪತ್ರ ಬರೆದು ಅವರಿಂದ ನಾವೆಲ್ಲ ಬೈಸಿಕೊಳ್ಳುವಂತೆ ಮಾಡಿದ. ಉತ್ಸಾಹಕ್ಕೂ ಸ್ವಲ್ಪ ಮಿತಿ ಇರಬೇಕೆಂದು ನನಗೆ ಅರ್ಥವಾಗಹತ್ತಿತು.

(ಕನಕದಾಸ ಶತಮಾನೋತ್ಸವ ಸಂದರ್ಭದಲ್ಲೂ ಇಂಥದೇ ಇಕ್ಕಟ್ಟಿನ ಪ್ರಸಂಗ ಉದ್ಭವಿಸಿತ್ತು. ಬೇಂದ್ರೆಯವರಿಗೆಂದೇ ನಾನು ಕಳಿಸಿದ ವಾಹನದಲ್ಲಿ, ಸಹಕಾರ್ಯದರ್ಶಿ ಇತರ ಕೆಲವರನ್ನೂ ತುಂಬಿಸಿ ಸ್ವತಃ ಕಾದು ಕೂತಿದ್ದ ಬೇಂದ್ರೆ ಮಡದಿಗೇ ಸ್ಥಳವಿಲ್ಲದೆ ಬೇಂದ್ರೆ ಅವರನ್ನು ಬಿಟ್ಟೇ ಬರಬೇಕಾಯಿತು. ಉದ್ದಕ್ಕೂ ಉಸಿರು ಹಿಡಿದುಕೊಂಡು ಬಂದ ಬೇಂದ್ರೆಯವರು ನಮ್ಮ ಮನೆ ಮುಂದೆ ಇಳಿದಾಗ ಕಾದ ಕೆಂಡವಾಗಿದ್ದರು. ಆಮೇಲಿನ ಮೂರು ದಿನವೂ ಅವರನ್ನು ಉಪಶಮನಗೊಳಿಸುವುದರಲ್ಲಿಯೇ ಕಳೆಯಬೇಕಾಯಿತು. ಅಲ್ಲಿಂದ ಕೆಲವೇ ತಿಂಗಳಲ್ಲಿ ಶ್ರೀಮತಿ ಬೇಂದ್ರೆ ತೀರಿಕೊಂಡಾಗಲಂತೂ, ಬೇಂದ್ರೆಯರಿಗೆ ನಮ್ಮ ಅಪರಾಧ ಅಕ್ಷಮ್ಯವೆನಿಸಿತು. ಜಿ. ಬಿ. ಜೋಶಿ ಏರ್ಪಡಿಸಿದ ಗ್ರಂಥ ಉದ್ಘಾಟನೆ ಉತ್ಸವಕ್ಕೆ ಬಂದಾಗ ಅವರ ಮೊದಲ ವಾಕ್ಯ, ನೆನಪು – ತಮ್ಮ ಧರ್ಮಪತ್ನಿಯದೆ ಆಗಿತ್ತು. 'ಈ ಸಾರಿ ನಾನೊಬ್ಬನೇ ಬಂದೆ. ಅದೇ ದಿವಸ ಬಂದೆ' ಎನ್ನುವಾಗ ನನಗೆ ತಬ್ಬಿಬ್ಬಾಯಿತು. ನಮ್ಮ ಈ ಸಾಹಿತ್ಯದ ಪಾರುಪತ್ಯದಲ್ಲಿ ಅದೆಷ್ಟು ಜೀವಗಳಿಗೆ ನೋವು ಆಗಬೇಕು ?

ಆದರೆ ಮೋಜಿನ ಘಟನೆ ನಡೆದದ್ದು ನಮ್ಮ ಮಣಿಪಾಲ ಸಮ್ಮೇಳನದಲ್ಲಿ. ಸಮ್ಮೇಳನ ಮುಗಿದ ಮರುದಿನ ಆಗಮಿಸಿದ ಹತ್ತೈವತ್ತು ಸಾಹಿತಿಗಳನ್ನು ನನ್ನ ಮನೆಗೆ ಬೆಳಗಿನ ಉಪಾಹಾರಕ್ಕೆ ಕರೆದಿದ್ದೆ. ಬೇಂದ್ರೆಯವರನ್ನೂ ಅವರ ಪತ್ನಿಯನ್ನೂ ಅವಸರಿಸಿ ವ್ಯಾನಿನೊಳಗೆ ತುಂಬಿ, ತಂದುಬಿಟ್ಟೆ. ಈ ಮಧ್ಯೆ ಊರಿಗೆ ಹೊರಟು ನಿಂತ ಅವರ ಟ್ರಂಕು ಬೆಡ್ಡಿಂಗ್ ಕಾಣೆಯಾಯಿತು. ಅತಿಥಿಗೃಹ, ಉಡುಪಿ ಬಸ್ ಸ್ಟ್ಯಾಂಡ್, ಎಲ್ಲಿ ಹುಡುಕಿದರೂ ಯಾರನ್ನು ಕೇಳಿದರೂ ನೂರಾರು ಮಂದಿ ಹೊರಡುವ ಗದ್ದಲದಲ್ಲಿ ಏನೆಂದು ಕೇಳಿದರೂ ಗೊತ್ತಾಗದು. ಬೇಂದ್ರೆಯವರು ಪ್ರಸನ್ನರೂಪ ಕಳಚಿ ಸಿಡುಕಿನಿಂದ 'ಚಹಾ ಎಲ್ಲಾದರೂ ಸಿಗುತ್ತಿತ್ತು, ಟ್ರಂಕೆಲ್ಲಿ ಸಿಗಬೇಕು ?' ಎಂದರು. 'ಈ ಒಳಗಿನ ಬೇಂದ್ರೆ ಹೊರಗಿನ ಬೇಂದ್ರೆಗೆ ಅಂತಾನೆ – ಯಾಕೀ ಚಹಾ ಚಾಪಲ್ಯಕ್ಕೆ ಬಲಿಬಿದ್ದನೋ ?' ಒಂದೆರಡು ತಾಸಿನ ಅನ್ವೇಷಣೆ ಮುಗಿದು, ನಿರಾಶರಾಗಿ ನಾವು ಮಣಿಪಾಲದ ಬಸ್‌ಸ್ಟ್ಯಾಂಡಿಗೆ ಹೋದಾಗ ಟ್ರಂಕ್ ಸಿಕ್ಕಿತು – ಒಬ್ಬ ಮುದಿ ಕೂಲಿ ಬೇಂದ್ರೆಗೆ ಕಾದು 'ಇನ್ನೂ ಯಾಕೆ ಬರಲಿಲ್ಲಾಂವಾ ಹುಬ್ಬಳ್ಳಿಯಾಂವಾ' ಅಂತ ಅಂದುಕೊಂಡು ಕಸಬಿಯಾಂಕನಂತೆ ಟ್ರಂಕಿನ ಬಳಿ ಆಸೀನ – ಉದಾಸೀನ – ನಾಗಿದ್ದ! ಬದುಕಿ ಪಾರಾದೆ!

ಇಂಥ ಉಪದ್ವ್ಯಾಪಗಳಿಲ್ಲದೆ ಯಾವತ್ತಾದರೂ ಒಮ್ಮೆ ಬೇಂದ್ರೆಯವರನ್ನು ಸರಳ ಕರೆಸಬೇಕು ಎಂಬ ಆಸೆ ಇನ್ನೂ ಪೂರ್ತಿ ಆಗಿಲ್ಲ.)

೬

ಇಷ್ಟಾದರೂ ಕಾರಂತರಿಗೆ ಸರಿಯಾದ ಒಂದು ಅಭಿನಂದನ ಗ್ರಂಥವನ್ನು ತರಲಿಲ್ಲವಲ್ಲಾ ಎಂಬ ವ್ಯಥೆ ಉಳಿದೇ ಉಳಿಯಿತು. ಕಾರಂತ ಅರುವತ್ತರ ಉತ್ಸವದ ಪುಣ್ಯಫಲವೇನೋ ಎಂಬಹಾಗೆ ಆ ಉತ್ಸವ ಕಳೆದ ಒಂದು ತಿಂಗಳಲ್ಲಿ ನಾನು ಇಟಲಿಗೆ ಯಾತ್ರೆ ಹೊರಟೆ. ಎಂಟು ತಿಂಗಳು ಕಳೆದು ತಾಯ್ನಾಡಿಗೆ ಮರಳಿದಾಗ ಕಾಲೇಜಿನಲ್ಲಿ ನನ್ನ ಹೊಣೆ ಪ್ರಾಧ್ಯಾಪಕತನದಿಂದ ಆಡಳಿತಕ್ಕೆ ವರ್ಗವಾಯಿತು. ಮತ್ತೊಂದು ವರ್ಷದಲ್ಲಿ ಪ್ರಿನ್ಸಿಪಾಲಗಿರಿಯ ಕಿರಿಕಿರಿ ತೊಡಗಿತು. ಅಭಿನಂದನ ಗ್ರಂಥ ಯಾವಾಗ ಹೊರಡಿಸೋಣ ಎಂಬ ಯೋಚನೆ ಪ್ರತಿವರ್ಷವೂ ಹುಟ್ಟಿ ಹಿಂದೆ ಸರಿಯುತ್ತಿತ್ತು. ಅದೇಕೋ 1969ನೆ ಇಸವಿಯಲ್ಲಿ ಕಾರಂತರು ನಾನು ನಿಮ್ಮಲ್ಲಿ ಒಂದು ಯಕ್ಷಗಾನ ಸೆಮಿನಾರು ಮಾಡುತ್ತೇನೆ – ಅಕ್ಟೋಬರ ಕೊನೆಯ

ವಾರ ಎಂದಾಗ ಅಭಿನಂದನ ಗ್ರಂಥದ ಆಸೆ ಮತ್ತೆ ಚಿಗುರಿತು. ಈ ಸಲ ಗ್ರಂಥಕ್ಕೋಸ್ಕರ ಒಂದು–ಉತ್ಸವ ಮಾಡೋಣ ಎಂದು ಮೊದಲ ಪ್ರಕಟಣೆ ಹೊರಡಿಸಿದೆ. ನಮ್ಮ ಜಿಲ್ಲೆಯ ದೈನಿಕದಲ್ಲಿ ಇದಕ್ಕೆ ಒಂದು ಪ್ರತಿಕೂಲ ಪ್ರತಿಕ್ರಿಯೆಯೂ ಹೊರಟಿತು. ಅರುವತ್ತು ಅಲ್ಲ ಎಪ್ಪತ್ತು ಅಲ್ಲ ಅದರ ನಡುವಣ ವರ್ಷ ಮಾಡಬೇಕೆ? ಎಂಬ ವ್ಯಂಗ್ಯೋಕ್ತಿಯನ್ನು ಒಪ್ಪ ಕೈಲಾಗದ ಮಹಾನುಭಾವ ತೋಡಿಕೊಂಡ. ಆದರೆ ನನ್ನ ನಂಬಿಕೆ, ಧೈರ್ಯ, ಆಸರೆ ಮುಂಬಯಿಯ ಮಿತ್ರರು, ಕಾರಂತರ ಅಪಾರ ಕನ್ನಡಿಗ ಭಕ್ತವೃಂದ ಮತ್ತು ನನ್ನ ಆಪ್ತ ಸಹೋದ್ಯೋಗಿ – ವಿದ್ಯಾರ್ಥಿ ಮಿತ್ರರು. ಏಪ್ರಿಲ್ ಮೇ ಸುಮಾರಿಗೆ ಅಭಿನಂದನ ಗ್ರಂಥಕ್ಕೆ ಲೇಖನ ಬೇಡಿ ವಿಮರ್ಶಕರಿಗೆ ಪತ್ರ ಬರೆದೆ. ರಾಯಲ್ ಅಷ್ಟದಳ ಗಾತ್ರದ 600 ಪುಟಗಳ ಬೃಹದ್ ಗಾತ್ರದ ಗ್ರಂಥದ ರಂಗೋಲೆ ಹಾಕಿದ ನನಗೆ ಮೂರು ತಿಂಗಳಲ್ಲಿ ಕೇವಲ ಮೂರು ಮಹನೀಯರಿಂದ ಲೇಖನಗಳು ಕರಗತವಾದುವು. ಗೌರೀಶ ಕಾಯ್ಕಿಣಿ, ಬಿ. ಎಚ್ ಶ್ರೀಧರ ಮತ್ತು ಎಂ. ಜಿ. ಕೃಷ್ಣಮೂರ್ತಿ. ಎದೆ ನಡುಗಿತು. ಪುಟ ತುಂಬಿಸುವ ಸಮಸ್ಯೆ ಭೂತಾಕಾರವನ್ನು ತಳೆದು ನಿತ್ಯವೂ ಇರುಳಿನಲ್ಲಿ ಬಾಧಿಸತೊಡಗಿತು. ಲೇಖಕರು ಕೈಕೊಟ್ಟರೆ ನಾನು ಕೆಟ್ಟೆನಲ್ಲಾ ಎಂದು ಪತ್ರವ್ಯವಹಾರ ವನ್ನು ಇಮ್ಮಡಿ ವೇಗದಿಂದ ಮಾಡಲಾರಂಭಿಸಿದೆ. ಒಬ್ಬರು ಇಲ್ಲವೆಂದಾಗ ಇನ್ನೊಬ್ಬರು ಅವರೂ ಇಲ್ಲ ವೆಂದರೆ ಮೂರನೆಯವರು ಹೀಗೆ ಬೆನ್ನುಹತ್ತಿದೆ. ಕೊನೆಯ ದಿನವನ್ನು ನಾಟಕ ಕಂಪೆನಿಯವರಂತೆ ಮೇ 30ರಿಂದ ಜುಲೈ 30, ಸೆಪ್ಟೆಂಬರ್ 15 ಹೀಗೆ ಮುಂದೂಡಿಕೊಂಡು ಹಾಗೂ ಹೀಗೂ ಸೆಪ್ಟೆಂಬರ 15ರ ವೇಳೆಗೆ ಗ್ರಂಥದ ಸ್ಥೂಲ ರೂಪ ರೇಖೆಯ ಹೂರಣ ಅಷ್ಟಿಷ್ಟು ತುಂಬಿಸಿಕೊಂಡೆ.

'ಕಾರಂತ ಪ್ರಪಂಚ' ಎಂದು ಈ ಹೆಸರಿಟ್ಟ ಈ ಅಭಿನಂದನ ಗ್ರಂಥದ ನನ್ನ ಮಸ್ತಿಷ್ಕದೊಳಗಿನ ಭ್ರೂಣರೂಪ ಕೈಕಾಲುಗಳನ್ನು ತಳೆದು ಒಂದೊಂಭತ್ತು ತಿಂಗಳಲ್ಲಿ ಜನ್ಮ ತಾಳಲು ಸಿದ್ಧವಾಯಿತು. ವ್ಯಕ್ತಿಪ್ರಪಂಚ, ಕಲಾಪ್ರಪಂಚ, ಸಾಹಿತ್ಯ ಪ್ರಪಂಚ, ಕಾದಂಬರಿ ಪ್ರಪಂಚ ಮತ್ತು ಕೃತಿ-ಲೇಖನದರ್ಶಿಕೆ – ಹೀಗೆ ಐದು ವಿಭಾಗಗಳಲ್ಲಿ ಲೇಖನಗಳು ಬಂದುವು: ಹಿರಿಯರ ಹರಕೆ, ಓರಗೆಯವರ ಹಾರೈಕೆ, ಬಂಧು ಮಿತ್ರರ ನೆನಪುಗಳು, ರಸಪ್ರಸಂಗಗಳು ಮತ್ತು ಸಂದರ್ಶನ ಸೇರಿದ ವ್ಯಕ್ತಿಪ್ರಪಂಚ ಅನ್ಯಾದೃಶವಾಗಿ ಮೂಡಿಬಂದಿತು. ಇದರಲ್ಲಿನ 'ರಸಪ್ರಸಂಗ'ಗಳ ಸಂಪಾದನಾ ಕಾರ್ಯ ಗೆಳೆಯ ಜಿ. ಟಿ. ನಾರಾಯಣ ರಾಯರು ಸ್ವಸಂತೋಷದಿಂದ ಮಾಡಿದರು. ಸಂಪಾದಕ ಮಂಡಳಿಯ ವಿ. ಎಂ. ಇನಾಂದಾರರೂ ನಾನೂ ಒಂದು ದಿನ ಪುತ್ತೂರಿಗೆ ಹೋಗಿ ಮೂರೂವರೆ ತಾಸು ಕಾರಂತರ ಸಂದರ್ಶನವನ್ನು ಧ್ವನಿಮುದ್ರಿಸಿ ಕೊಂಡೆವು. ಈ ಧ್ವನಿಮುದ್ರಣವನ್ನು ಬರೆಹವಾಗಿ ಮಾರ್ಪಡಿಸುವಲ್ಲಿ ಇನಾಂದಾರರು ಪಟ್ಟ ಶ್ರಮ ವೆಷ್ಟೋ ತಿಳಿಯದು. ಇನಾಂದಾರರು ಕೇಳಿದ ಸಾಹಿತ್ಯಕ ಪ್ರಶ್ನೆಗಳಿಗೆ ನೇರವಾಗಿ, ಮುಕ್ತ ಮನಸ್ಸಿನಿಂದ ಕಾರಂತರು ಉತ್ತರಿಸುತ್ತಿದ್ದರು. ಇಷ್ಟು ವಿವರವಾದ ಸಾಹಿತ್ಯ ಸಂದರ್ಶನ ಬೇರೆ ಯಾವ ಸಂದರ್ಭ ದಲ್ಲಿಯೂ ನಡೆದಿರುವಂತೆ ತೋರಲಿಲ್ಲ. ಕಲಾಪ್ರಪಂಚದಲ್ಲಿ ಕಾರಂತರ ಯಕ್ಷಗಾನ ಪ್ರಯೋಗಗಳ ಸಿದ್ಧಿ ಸಾಧನೆಗಳ ಕುರಿತು ಸಂಬಂಧಪಟ್ಟ ಸ್ನೇಹಿತರು ಪರಿಚಯವನ್ನು, ಮೌಲ್ಯಮಾಪನವನ್ನು ಮಾಡಿ ದರು. ಸಾಹಿತ್ಯ ಪ್ರಪಂಚದಲ್ಲಿ ಕಾದಂಬರಿಯನ್ನು ಹೊರತ ಇತರ ಕಾರಂತ ಸಾಹಿತ್ಯದ ಕೂಲಂಕಷ ವಿಮರ್ಶೆಯನ್ನು ಆಯಾ ಸಾಹಿತ್ಯಭಾಗದ ತಜ್ಞರಿಂದಲೇ ಬರೆಸಿದೆ. ಸುಮಾರು ನೂರಕ್ಕಿಂತಲೂ ಹೆಚ್ಚು ಪುಟಗಳಲ್ಲಿ ಕಾರಂತರ ಕಾದಂಬರಿಯ ವಿಮರ್ಶೆ ನಾನಾ ವಿಚಾರವರ್ಗದ ಲೇಖಕರು – ಎಂ.ಜಿ.ಕೃ, ಶೇಷಗಿರಿರಾವ್, ಜವರೇಗೌಡ, ಅನಂತಮೂರ್ತಿ, ಮೊಕಾಶಿ, ಕುರ್ತಕೋಟಿ – ಮಾಡಿಸಿಕೊಟ್ಟರು. ಇದರೊಳಗಿನ ಒಂದು ಉಪ ವಿಭಾಗದಲ್ಲಿ ಕಾರಂತರ ಕೆಲವು ಕಾದಂಬರಿಗಳ ಮೊದಲ ವಿಮರ್ಶೆಯನ್ನು ಹೊಸದಾಗಿ ಬರೆಯಿಸಿದ ಅದೇ ಕಾದಂಬರಿಯ ವಿಮರ್ಶೆಯ ಜತೆ ತುಲನೆ ಮಾಡುವ ಅವಕಾಶ ಒದಗಿ ಸಿದೆ. ಉದಾ: ಮರಳಿ ಮಣ್ಣಿಗೆಯ ಕುರಿತು ಡಿ.ಎಲ್.ಎನ್. 25 ವರ್ಷ ಕೆಳಗೆ ಬರೆದ ವಿಮರ್ಶೆಯ ಚೆಂಗಡೆಯೆ ಗೋಪಾಲಕೃಷ್ಣ ಅಡಿಗರು ಇಂದಿನ ಕಾಲದೃಷ್ಟಿಯಿಂದ ಬರೆದ ಸೊಗಸಾದ ತುಲನೆಯನ್ನು ಸೇರಿಸಿದೆ. 'ಕಾರಂತ ಅರುವತ್ತ'ಕ್ಕೆ ಶ್ರೀನಿವಾಸ ಹಾವನೂರ ತಯಾರಿಸಿದ ಕೃತಿಸೂಚಿಯನ್ನೇ ನವೀಕರಿಸಿ, ವಿಸ್ತರಿಸಿ, ಶೇಖರ ಇಡ್ಯ ಅವರು ಒಂದು ಉತ್ತಮವಾದ ಕಾರಂತ ಕೃತಿದರ್ಶಿಕೆಯನ್ನು ಸಿದ್ಧಗೊಳಿಸಿದರು. ಚಿತ್ರಕ್ಕಾಗಿ ಹೆಬ್ಬಾರರಿಗೆ ಬರೆದೆ; 'ಕಾರಂತ ಅರುವತ್ತ'ರ ಸಮಯ ಹೆಬ್ಬಾರರು ಕಾರಂತರ ತೈಲಚಿತ್ರ

ವೊಂದನ್ನು ಬರೆದು ಅರ್ಪಿಸಿದ್ದರು. ಅದನ್ನು ತ್ರಿವರ್ಣದಲ್ಲಿಯೂ, ಈ ಸಂಪುಟಕ್ಕೆ ಬರೆದ ರೇಖಾಚಿತ್ರ ವನ್ನು ಕಪ್ಪುಬಿಳುಪಿನಲ್ಲಿಯೂ ಅಚ್ಚುಹಾಕಿಸಿದೆ. ದಿಲ್ಲಿಯಿಂದ ಟಿ. ಎಸ್. ಸತ್ಯನ್ ಅವರು ತೆಗೆದ ಕಾರಂತರ ಚಿತ್ರವನ್ನು ಶ್ರೀ ಶಾರದಾ ಪ್ರಸಾದ್ ಕಳಿಸಿಕೊಟ್ಟರು. ಯಕ್ಷಗಾನದ ಚಿತ್ರಗಳನ್ನು ಐತಾಳ ರಿಂದಲೂ, ಹಳೇ ಚಿತ್ರಗಳನ್ನು ಲೀಲಾ ಕಾರಂತರ ಆಲ್ಬಮಿನಿಂದಲೂ ಹೆಕ್ಕಿ ತೆಗೆದು ನನಗೆ ಬೇಕಾದ ರೀತಿಯಲ್ಲಿ ಬಳಸಿಕೊಂಡೆ. ಸೆಪ್ಟೆಂಬರ 30ಕ್ಕೆ ಆರಂಭವಾದ ಮುದ್ರಣ ಸರಿಯಾಗಿ ಒಂದು ತಿಂಗಳಲ್ಲಿ ಅಂದರೆ ಅಕ್ಟೋಬರ 30ಕ್ಕೆ ಮುಗಿದು ಪ್ರಥಮ ಪ್ರತಿ ಕೈಗೆ ಬಂದಾಗ ಸೌಂದರ್ಯ – ಗಾತ್ರ ಎರಡೂ ಅಪ್ರತಿಮವಾಗಿತ್ತು. ಪಡಿಯಚ್ಚಿನ ಪುಟಗಳೂ ಸೇರಿ ಸುಮಾರು 600 ಪುಟಗಳ 'ಕಾರಂತ ಪ್ರಪಂಚ' ಸನ್ಮಾನ ಗ್ರಂಥಗಳ ಸಾಲಿನಲ್ಲಿ ಒಂದು ದಾಖಲೆ ನಿರ್ಮಿಸಿದರೆ, ಮುದ್ರಣ ವೇಗದ ದೃಷ್ಟಿಯಿಂದ ಇನ್ನೊಂದೇ ದಾಖಲೆ ಮಾಡಿಕೊಂಡಿತು. ನನ್ನ ಸಹೋದ್ಯೋಗಿ ಗೆಳೆಯ ಶ್ರೀನಿವಾಸ ಭಟ್ಟರೂ, ತಿರುಮಲೇಶ್ವರ ಭಟ್ಟರೂ ನಟ್ಟಿರುಳ ತನಕವೂ ಕರಡು ತಿದ್ದುವ ಕೆಲಸವನ್ನು ಮುದ್ರಣಾಲಯದ ಕಚೇರಿ ಯಲ್ಲಿ, ಅಚ್ಚಿನ ಮೊಳೆಗಳ ಕೋಣೆಯಲ್ಲಿ, ಯಂತ್ರಗಳ ನಡುವೆ ನೆರವೇರಿಸಿ ದಣಿದರು. ಕಾಗದದ ವೆಚ್ಚವೇ ಐದು ಸಾವಿರದಷ್ಟು ಬಂದಿತ್ತು; ಉಳಿದ ವೆಚ್ಚಕ್ಕೆ ಗೀತಾ ಬುಕ್ ಹೌಸಿನ ಸತ್ಯನಾರಾಯಣ ಸಹೋದರರು ಸಹಕರಿಸಿದ್ದರಿಂದ ಮರ್ಯಾದೆ ಉಳಿಯಿತು. ಇಲ್ಲವಾದರೆ ಸನ್ಮಾನ ಸಮಿತಿಯ ಧನಸಂಗ್ರಹದಲ್ಲಿ ಅರ್ಧಾಂಶ ಗ್ರಂಥಕ್ಕೇ ಮುಡಿಪಾಗುತ್ತಿತ್ತು.

ಅಕ್ಟೋಬರ 31ರಿಂದ ನವಂಬರ 4ರ ವರೆಗೆ ರಾಜ್ಯದ ಸಂಗೀತ ನಾಟಕ ಏಕಾಡೆಮಿ ಆಶ್ರಯದಲ್ಲಿ ಕಾರಂತರೇ ಒಂದು ಸೆಮಿನಾರ್ ನಡೆಸುವ ನಿರ್ಧಾರ ಮಾಡಿದರೆಂದು ಮೊದಲೇ ಹೇಳಿದೆನಲ್ಲವೆ? ಕಾರಂತರು ಕ್ರಿಯಾಶೀಲರಾಗಿರುವ ಈ ಸುವರ್ಣ ಸಂದರ್ಭವನ್ನೇ ನಮ್ಮ ಅಭಿನಂದನ ಗ್ರಂಥ ಸಮರ್ಪಣ ಉತ್ಸವಕ್ಕೆ ಯಾಕೆ ಬಳಸಿಕೊಳ್ಳಬಾರದೆಂದು ಯೋಚಿಸಿ ನವಂಬರ 5–6 ದಿನಾಂಕಗಳನ್ನು ನಾವು ಆರಿಸಿ ದೆವು. ಉತ್ತರ ದಕ್ಷಿಣಕನ್ನಡ ಜಿಲ್ಲೆಗಳ ಭಾಗವತರು, ನೃತ್ಯವಾದಕ ಕುಶಲಿಗಳು – ಎಲ್ಲರೂ ಕಾರ್ಯನಿರತ ಯಕ್ಷಗಾನ ವ್ಯವಸಾಯಿಗಳು – ಸೇರುವ ಈ ಸೆಮಿನಾರಿಗೆ ಐವತ್ತು ಅರುವತ್ತು ಮಂದಿ ಬಂದಾರು, ಊಟಕ್ಕೆ ನೂರೆಲೆ ಆದೀತು ಎಂದು ಕಾರಂತರ ನಿರೀಕ್ಷೆ ಇತ್ತು; ಆದರೆ ಆ ವರ್ಷ ವ್ಯವಸಾಯಿಗಳಲ್ಲಿ ಉತ್ಸಾಹ ಅತಿಶಯವಾಗಿತ್ತು. ನೂರು ಮಂದಿ ಬಂದರು. ಊಟದ ಮನೆ ಎಲೆ ಸರಬರಾಜು ನೂರ ರಿಂದ ಇನ್ನೂರು, ಕೊನೆಯ ದಿನಕ್ಕೆ ಮುನ್ನೂರು ಆಗಿ ಬಿಟ್ಟಿತು. ಅಳಿಯನ ಹಿಂದೆ ಗೆಳೆಯನಂತೆ ಒಬ್ಬೊಬ್ಬ ವ್ಯವಸಾಯಿಗೆ ಅವನ ಅಭಿಮಾನಿ( fans )ಗಳ ಗುಂಪು ಬೇರೆ ಇತ್ತಲ್ಲವೆ? ಊಟದ ಹೊತ್ತಿಗೆ ಅವರನ್ನು ಬೇರ್ಪಡಿಸಲು ಸಾಧ್ಯವೆ? 'ಸಾಧ್ಯ'ದ ಪ್ರಶ್ನೆಯೇ ಬೇಕಿರಲಿಲ್ಲ. ನಾವು ಕಾರಂತರಿಗೆ ಹೇಳದೆಯೆ ಸೆಮಿನಾರಿನ ಭೋಜನ ಪರಿಷ್ಕಾರವೂ, ವ್ಯವಸಾಯಿಗಳ ಮನೋಧರ್ಮದಂತೆ ಪುಷ್ಕಲವೂ ಆಗತಕ್ಕದ್ದೆಂದು ನಮ್ಮೊಳಗೆಯೆ ನಿಶ್ಚಯ ಮಾಡಿ ಸಿದ್ಧರಾಗಿದ್ದೆವು. ಕಾಲೇಜಿಗೆ ಮಧ್ಯಾವಧಿ ಬಿಡುವಾದ್ದ ರಿಂದ ನಮ್ಮ ಹಾಸ್ಟೆಲುಗಳಲ್ಲಿ ಉಳಕೊಳ್ಳುವ ವ್ಯವಸ್ಥೆಯೂ ಚೆನ್ನಾಗಿ ಆಯಿತು.

ಎಲ್ಲಕ್ಕೂ ಹೆಚ್ಚಾಗಿ ಸೆಮಿನಾರಿಗೆ ಕಳೆಕಟ್ಟಿದ್ದು ಕಾರಂತರ ಯಥಾಪೂರ್ವ ನಿರ್ದೇಶನ. ಅದೆಷ್ಟು ವಿಚಾರದ ಸುರುಳಿಗಳನ್ನು ತಮ್ಮ ತಲೆಯಲ್ಲಿ ಬಚ್ಚಿಟ್ಟಿದ್ದಾರೋ ತಿಳಿಯದು. ಯಕ್ಷಗಾನದ ಸಂಗೀತ–ನೃತ್ಯ–ವಾದನ ಈ ಮೂರರಲ್ಲೂ ವ್ಯವಸಾಯಿಗಳು ನಿರ್ದಾಕ್ಷಿಣ್ಯವಾಗಿ (ತನ್ನಂತೆಯೆ) ತಮ್ಮ ವಾದ ವನ್ನು ಮುಂದಿಡತಕ್ಕದ್ದು, ಎಲ್ಲ ಪ್ರತಿನಿಧಿಗಳಿಗೂ ಸರಿಯಾಗಿ ಕಾಲಾವಕಾಶ ಕೊಡತಕ್ಕದ್ದು, ಪ್ರತಿ ಮಾತುಗಾರನಿಗೂ, ಪ್ರದರ್ಶಕನಿಗೂ ಸಮಯದ ಮಿತಿ ಇರತಕ್ಕದ್ದು, ಸೆಮಿನಾರಿನ ಆರಂಭ, ಕೊನೆ ಕ್ಲಪ್ತ ಕಾಲಕ್ಕೆ ಆಗತಕ್ಕದ್ದು – ಈ ಪರಿಯ ಶಿಸ್ತಾವ ದೇವರೊಳು ನಾ ಕಾಣೆ ಎಂಬಂತಾಯಿತು. ಮುಂಜಾವದ ಕಡುಬು – ದೋಸೆ – ಇಡ್ಲಿಗಳ ಹೊಡೆತಕ್ಕೆ ತಾಳಲಾರದೆ ಎರಡು ಫರ್ಲಾಂಗು ದೂರದ ವಸತಿ ಗೃಹದಿಂದ ಏದುತ್ತ ಏದುತ್ತ ಧಾವಿಸುವ ಕಲಾವಿದರ ಪಾಡು ನೋಡುವಂತಿತ್ತು – ಹುಲಿಯ ಬಾಯಿಗೆ ಬೀಳಲು ಯಾರು ಬಯಸುತ್ತಾರೆ? ಈ ಸೆಮಿನಾರಿನಲ್ಲೇ ಹೊಸತಾಗಿ ಕಾರಂತರು ಕೆಲವು ಪಂದ್ಯಗಳನ್ನು – ಸಬಹುಮಾನ ಪಂಥಗಳನ್ನು – ಇಟ್ಟಿದ್ದರು: ನೃತ್ಯ, ಸಂಗೀತ, ವಾದನ ಈ

ಮೂರರಲ್ಲೂ. ಪಂದ್ಯದ ಸಮಯ ಮಂಗಳೂರಿಂದ ಬೈಂದೂರ ವರೆಗಿನ ಯಕ್ಷಗಾನ ಕಲಾಭಿಮಾನಿಗಳು ಕಿಕ್ಕಿರಿದು ರವೀಂದ್ರ ಮಂಟಪದಲ್ಲಿ ನೆರೆದು ಸೆಮಿನಾರು ಸಾರ್ವಜನಿಕ ಸಭೆಯೇ ಆಗಿಬಿಡುತ್ತಿತ್ತು.

ದಿಲ್ಲಿಯಿಂದ ಸಂಗೀತ ನಾಟಕ ಏಕಾಡೆಮಿಯ ವರಿಷ್ಠರಾದ ಸುರೇಶ ಅವಸ್ಥಿಯವರೂ, ರಾಕ್ ಫೆಲರ್ ಪ್ರತಿಷ್ಠಾನದ ಜನಪದ ಯೋಜನೆಯ ಇಬ್ಬರು ಛಾಯಾ ಚಿತ್ರಗ್ರಾಹಕರೂ, ಮುಂಬಯಿ ಯಿಂದ ನಾಟಕ ಕಲಾತಜ್ಞರಾದ ಸತ್ಯದೇವ ದುಬೇ ದಂಪತಿಯವರೂ, ಇಬ್ಬರು ಅಮೇರಿಕನ್ ವಿದ್ಯಾರ್ಥಿ ನಿಯರೂ ಸೆಮಿನಾರ್ ನೋಡಲು ಬಂದಿದ್ದರು. ಸಂಗೀತ ನಾಟಕ ಅಕಾಡೆಮಿಯ ಗೋವಿಂದ ವಿದ್ಯಾರ್ಥಿಗೆ ಕಾರಂತರ ಸೆಮಿನಾರಿನ ವೈಶಿಷ್ಟ್ಯವನ್ನು ಈ ವಿದೇಶೀಯರಿಗೆ ತಿಳಿಸುವುದು, ಚಿತ್ರ ತೆಗೆಯುವುದು, ಧ್ವನಿಮುದ್ರಣ ಮಾಡಿಕೊಳ್ಳುವುದು ಅತಿಪ್ರಿಯವಾದ ದುಡಿಮೆ. 1958ರ ಸೆಮಿನಾರಿನ ರುಚಿಕಂಡ ವಿದ್ಯಾರ್ಥಿ - ಭಾರತೀಯ ಜನಪದಕಲೆಯ ಅಂತರಂಗ ಬಲ್ಲವನು – ಕಾರಂತ ಭಕ್ತನಾಗಿ ಬಿಟ್ಟಿದ್ದ. ಅವರ ಸೆಮಿನಾರೆಂದ ಕೂಡಲೇ ದಿಲ್ಲಿಯಿಂದ ಹಾರಿಬಂದು ಬಿಡುತ್ತಿದ್ದ. ಇಷ್ಟೊಂದು ಶಾಸ್ತ್ರೀಯವಾಗಿ, ನಿರಾಡಂಬರವಾಗಿ, ವ್ಯವಸಾಯಾತ್ಮಿಕವಾಗಿ ಎಲ್ಲೂ ಸೆಮಿನಾರು ನಡೆಯುತ್ತಿಲ್ಲ. ಬರೇ ಷೋಕಿ, ಪರಿಷೆ, ದೊಡ್ಡ ಮನುಷ್ಯರಿಗೆ ಕಾಕಾ ಹಿಡಿಯುವ ಹುಮ್ಮಸ್ಸಷ್ಟೆ ಬೇರೆ ಕಡೆ ಸಾಮಾನ್ಯವಾದದ್ದು ಎಂದು ವಿದ್ಯಾರ್ಥಿ ಅಭಿಪ್ರಾಯ.

ಕಾರಂತ ಅಭಿನಂದನದ ಎರಡು ದಿನಗಳ ಉತ್ಸವಕ್ಕೆ ಎಷ್ಟು ವೆಚ್ಚ ಬರಬಹುದು ಎಂದು ಸಮಿತಿಯ ಸದಸ್ಯರು ಕೇಳಿದಾಗ ಹತ್ತು, ಹದಿನೈದು – ಹೀಗೆ ಹಾರಿಕೆಯ ಉತ್ತರ ಕೊಟ್ಟು ಪಾರಾಗು ತ್ತಿದ್ದೆ; ಆದರೆ ನನ್ನ ಯೋಜನೆಯಂತೆ ಕನಿಷ್ಠ 25 ಸಾವಿರ ರೂಪಾಯಿಗಳಾದರೂ ಬೇಕು. ಈ ಸುದ್ದಿ ಕೆಲವೇ ಸ್ನೇಹಿತರಿಗೆ ಗುಟ್ಟಾಗಿ ತಿಳಿಸಿದ್ದೆ. ಮುಂಬಯಿಯಲ್ಲಿ, ಮಲೆನಾಡಿನಲ್ಲಿ, ದ. ಕ. ಜಿಲ್ಲೆಯ ಮಂಗ ಳೂರು, ಕುಂದಾಪುರ ಇತ್ಯಾದಿ ಕೇಂದ್ರಗಳಲ್ಲಿ ಕ್ಷೇತ್ರಾಧಿಕಾರಿಗಳನ್ನು ನೇಮಿಸಿ ಅವರ ಹತ್ತಿರ ರಸೀದಿ ಪುಸ್ತಕ ಕೊಟ್ಟಿದ್ದೆ. ಕಾಲ ಮೀರಿದರೂ – ಉತ್ಸವಕ್ಕೆ ಇನ್ನೆರಡು ವಾರಗಳಿವೆ ಎನ್ನುವಾಗಲೂ – ಬರಿಯ ಮೂರುನಾಲ್ಕು ಸಾವಿರಗಳಷ್ಟೇ ಕೂಡಿರುತ್ತ, ಬರಿಗೈಯಲ್ಲಿ ಮೊಳಹಾಕಿದೆನೇನೋ ಎನಿಸಿತು. ಆದರೆ ಹಿಂಜರಿಯುವ ದಾರಿ ಇಲ್ಲವಲ್ಲಾ, ಹೇಗೂ ಕಡಮೆ ಬಿದ್ದರೆ ಟಿ. ಎ. ಪೈ ಅವರಿದ್ದಾರೆ, ಡಾ. ಪೈ ಇದ್ದಾರೆ, ನಷ್ಟ ಭರ್ತಿಗೆ ಎಂಬ ಹುಚ್ಚು ವಿಶ್ವಾಸ ಒಂದು ಕಡೆ, ಇಂಥ ದೈನ್ಯಾವಸ್ಥೆ ಬರಕೂಡದೆಂಬ ಹಠ ಇನ್ನೊಂದು ಕಡೆ. ಅಂತೂ ಪತ್ರದಲ್ಲಿ ನನ್ನ ಸ್ಥಾನೀಯ ಗೆಳೆಯರನ್ನು ಹುರಿದುಂಬಿಸುವುದರ ವಿನಾ ಬೇರೆ ದಾರಿ ಗೋಚರಿಸಲಿಲ್ಲ. ಉಡುಪಿಯನ್ನೊಮ್ಮೆ ಗಾಳಿಸಿ ಆಗಿತ್ತು. ಆದ್ದರಿಂದ ಈ ಸಾರಿ ಸಂಗ್ರಹವೆಲ್ಲ ಅಖಿಲ ಕರ್ನಾಟಕ ಮತ್ತು ಮುಂಬಯಿಯಿಂದ ಬರತಕ್ಕದ್ದು ಎಂಬ ನನ್ನ ನಿರೀಕ್ಷೆ ಫಲಿಸೀತೆ? ಎಂದು ಅಂಜಿ ಕೊಂಡಿದ್ದೆ. ಅಷ್ಟರಲ್ಲಿ ಮುಂಬಯಿಯಿಂದ ಗಣೇಶ ಭಟ್ಟರು 6000/- ರೂಪಾಯಿ ಚೆಕ್ ಹಿಡಿದುಕೊಂಡು ಅಕ್ಟೋಬರ್ 30ಕ್ಕೇನೇ ಬಂದರು. ಅಲ್ಲಿಂದ ವಿದ್ಯಾರಣ್ಯರ ಕಾಲದಲ್ಲಾದಂತೆ ನಮ್ಮ ಸಗ್ರಿಯ ಪುಣ್ಯಭೂಮಿ ಯಲ್ಲಿ ಸುವರ್ಣವೃಷ್ಟಿಯೇ ಕರೆಯಿತು – ನಗದು ಬೇರೆ, ಸರಕು ಬೇರೆ! ಮುಂಬಯಿಯ ಆರು ಸಾವಿರ ಮುಂದಿನ ಆರೇ ದಿನಗಳಲ್ಲಿ – ಚೆಕ್ಕು, ಮನಿಆರ್ಡರು, ತಂತಿ, ಕೈ ಸಂದಾಯ ಮುಂತಾದ ನಾನಾ ವಿಧ ವಾಗಿ – ಇಪ್ಪತ್ತಾರು ಸಾವಿರಕ್ಕೇರಿತು. (ಇನ್ನೊಂದು ನಾಲ್ಕಾರು ಸಾವಿರ ಸ್ಮರಣ ಸಂಪುಟದ ಕೆಲವೇ ಜಾಹೀರಾತಿಂದ ಬರುವ ಹಂಚಿಕೆ ಹಾಕಿದ್ದೆ). ಎಲ್ಲರೂ ಪ್ರೀತಿ, ಅಭಿಮಾನ, ಗೌರವಗಳಿಂದ ಹಣ ಸಲ್ಲಿಸುವ ದೃಶ್ಯ ದೇವಸ್ಥಾನಕ್ಕೆ ಹರಕೆ ಸಲ್ಲಿಸುವಂತೆಯೇ ತೋರುತ್ತಿತ್ತು. ಮುಂಬಯಿ ಮಿತ್ರರ ಸಂಗ್ರಹ ವಿಧಾನ ಸರ್ವೋತ್ತಮವಾಗಿತ್ತು – ಪ್ರತಿ ಕನ್ನಡ ಸಂಘದಿಂದಲೂ ನೂರು ಇನ್ನೂರು ಸೇರಿಸಿದರು, ಯಕ್ಷಗಾನ ನವೋದಯ ಗುಂಪಿನಿಂದ ಕೆಲವು ಸಾವಿರ, ಮೂಡಬಿದ್ರೆಯವರು ಕೆಲವು – ಹೀಗೆ ಮುಂಬಯಿ ಯವರು ಉಡುಪಿಯಲ್ಲಿ ನಡೆಯುವ ಕಾರಂತ ಉತ್ಸವ ತಮ್ಮದೇ ಎಂದು ತಿಳಿದು ದುಡಿದರು. ಶ್ರೀ ಸಂಜೀವ ರಾಯರಿಗೂ ನಿ. ವ್ಯಾಸರಾಯ ಬಲ್ಲಾಳರಿಗೂ ಆರೋಗ್ಯವೂ ಸರಿಯಾಗಿಲ್ಲದ ಕಾಲದಲ್ಲಿ ಸುಮಾರು ಹತ್ತು ಸಾವಿರ ರೂಪಾಯಿ ಮುಂಬಯಿಯ ಬಳಗದವರೇ ಕೂಡಿಸಿ ಕೊಟ್ಟದ್ದು ನನ್ನ ಮಟ್ಟಿಗೆ ಅನಿರೀಕ್ಷಿತವೇನೂ ಅಲ್ಲವಾದರೂ, ಅವರ ಪ್ರೀತಿಯ ಆಳ ಅವರ್ಣನೀಯ ಎನಿಸಿತು. ಇದೇ ರೀತಿ ಉಡುಪಿಗೆಹತ್ತಿರದ ಹರಿಹರಪುರದ ಭಾಗದಲ್ಲಿ ಈ ಹತ್ತು ವರ್ಷಗಳಲ್ಲಿ ಕಾರಂತರಿಗೆ ಹೊಸದಾಗಿ ಕೂಡಿದ

ಅನರ್ಘ್ಯ ಮಿತ್ರಸಂಪತ್ತು ಇದ್ದಿತ್ತು. ಹಿಡುವಳಿದಾರರಾದ ಶ್ರೀ ಜೋಯಿಸರೂ, ವಿಷ್ಣುಮೂರ್ತಿ ಭಟ್ಟರೂ ಸದ್ದಿಲ್ಲದೆ ತಿಂಗಳೊಪ್ಪತ್ತು ಮಲೆನಾಡ ಸೆರಗಿನ ಸ್ನೇಹಿತರನ್ನೆಲ್ಲ ಕಾಡಿ, ಬೇಡಿ, ಹುರಿದುಂಬಿಸಿ ಅಡಿಕೆ ಉದುರಿಸಿದಷ್ಟು ಸುಲಭವಾಗಿ ದುಡ್ಡಿನ ಚೀಲವನ್ನುದುರಿಸಿದರು. ಮಲೆನಾಡಿನಿಂದ ಉತ್ಸವಕ್ಕೆ ಐವತ್ತು ಜನ ಅಭಿಮಾನಿಗಳ ಪಟಾಲಮನ್ನು ಎಬ್ಬಿಸಿಕೊಂಡು ಬಂದ ಜೋಯಿಸರ ಅವಿರತ ಮಾತುಗಾರಿಕೆಯ ನಡುವೆಯೇ ಮಿಂಚುತ್ತಿದ್ದ ಸ್ಫೂರ್ತಿ, ಉತ್ಸಾಹ ನಮಗೆ ಪ್ರಚೋದಕವಾಯಿತು. ಬರಿಯ ದುಡ್ಡೊಂದೇ ಅಲ್ಲ, ಎಲೆ – ಹಣ್ಣು, ಕಾಯಿಕಡಿ ಊರಿನ ದೇವಸ್ಥಾನದ ಉತ್ಸವಕ್ಕೆ ತಂದಹಾಗೆ ನಮ್ಮ ಊಟದ ಮನೆಗೆ ತಂದು ರಾಶಿಹಾಕಿದ ಮಲೆನಾಡಿನವರ ಉತ್ಸಾಹದ ಮುಂದೆ ನಮ್ಮ ದಣಿವೇತರದು ಎನಿಸಿತು.

ಅಭಿನಂದನ ಗ್ರಂಥ ಒಂದು ನೆಪವಾದರೆ, ಕಾರಂತರು ಇನ್ನೊಂದು ನೆಪ – ನನಗಾಗಬೇಕಾಗಿತ್ತು ಸಾಹಿತಿಗಳ ಒಂದು ಪ್ರಸನ್ನ ಸಮ್ಮೇಳನ. 1960ರ ಮಣಿಪಾಲ ಸಮ್ಮೇಳನದ ಕಹಿ ನೆನಪಿನ ಅಭಿಶಾಪ ವನ್ನು ಹುರಿಗೊಳಿಸಲು, ಹುಸಿಗೊಳಿಸಲು ಒಂದು ಸಂತೋಷ ಸಮಾರಂಭ. ಇದಕ್ಕೆ ಕಾರಂತರಂಥ ಬಂಡವಾಳ ಬೇರೆಲ್ಲಿದ್ದೀತು – ಎಂದು ಅವರ ಹೆಸರು ಬಳಸಿದೆ. ಅವರ ಮಿತ್ರಸಂಪತ್ತಿನ ಲಾಭ ದೋಚುವ ಹಂಚಿಕೆ ಹೂಡಿದ್ದೆ. ಅವರದೇ ಕಾರ್ಯಕಲಾಪಗಳ ನಡುವೆ – ಅವರ ಕ್ರಿಯಾತತ್ಪರತೆ ಉಚ್ಛ್ರಾಯದಲ್ಲಿರು ವಂಥ – ಸಂದರ್ಭ ಹುಡುಕಿದ್ದೆ. ಕನಿಷ್ಠ ನೂರು ಮಂದಿ ನಮ್ಮ ಜಿಲ್ಲೆ ಮತ್ತು ಅಖಿಲ ಕರ್ನಾಟಕದ ಸಾಹಿತಿ ಗಳಿಗೆ ಆಮಂತ್ರಣ ಇತ್ತಿದ್ದೆ. ಅವರುಗಳ ಉಪಚಾರಕ್ಕೆ ಹತ್ತು ಮಂದಿ ಉಪಾಧ್ಯಾಯರ ಮತ್ತು 30 ಮಂದಿ ವಿದ್ಯಾರ್ಥಿ ಸ್ವಯಂಸೇವಕರ ಶಿಸ್ತಿನ ಸೈನ್ಯವ್ಯೂಹ ರಚಿಸಿಕೊಂಡಿದ್ದೆ. ಎಂದಿನಂತೆ ಬಿ. ವಿ. ಆಚಾರ್ಯರ ನಾಯಕತ್ವದಲ್ಲಿ ನಮ್ಮ ಸೇವಾ ಪಥಕ, ಸ್ವಾಗತ ಸಮಿತಿ ಕಚೇರಿಯ ವ್ಯವಸ್ಥೆ, ವೀಳ್ಯದೆಲೆಯ ಅಕ್ಷಯ ತಟ್ಟೆ, ಅತಿಥಿಗಳಿಗೆ ಬೇಕಾದ ಸುಗಂಧ ತೈಲ, ಸಾಬೂನು, ಟವಲು, (ಇದು ಈ ಸಾರಿಯ ಅನುಬಂಧ). ಭೋಜನಶಾಲೆ ಎಂದಿನಂತೆ ಕಡಿಯಾಳಿಯ ರಾಮಚಂದ್ರ ಉಪಾಧ್ಯಾಯರು ಮತ್ತು ಪ್ರಭಾಕರ ಪೈ ಅವರ ಸಮರ್ಥ ದಿಗ್ದರ್ಶನದಲ್ಲಿ – ರಾತ್ರಿ ಹಗಲಾಗುವುದರೊಳಗೆ ಸ್ಥಳ ಬದಲಾವಣೆ ಮಾಡಿಕೊಂಡು ರವೀಂದ್ರ ಮಂಟಪದ ಮಗ್ಗುಲಿನ ಚಪ್ಪರದೊಳಗಡೆ ಸನ್ನದ್ಧವಾಯಿತು. ಇಡ್ಲಿ-ದೋಸೆ-ಮೆರವಣಿಗೆ-ಸಭೆ, ಚರ್ಚೆ, ಊಟ, ತಿಂಡಿ, ಮಾವಿನಮರದ ಕೆಳಗೋ ಮಲ್ಪೆಯ ಬೀಚಿನಲ್ಲೋ ಗೆಳೆಯರ ನಿರಂಕುಶ ವಿಚಾರಗೋಷ್ಠಿ, ರಾತ್ರಿ ಅಪರ ವೇಳೆಯಲ್ಲೂ ಅತಿಥಿಗೃಹದಲ್ಲಿ ನಗು – ಹಾಸ್ಯದ ಲಹರಿ. ರವೀಂದ್ರ ಮಂಟಪದ ಸುತ್ತುಮುತ್ತ, ಉಡುಪಿಯ ಆಸುಪಾಸು, ವಾತಾವರಣದ ತುಂಬೆಲ್ಲ ಸಾಹಿತ್ಯ ಮಥನ, ಸಾಹಿತಿಗಳ ಕಥನ. ಆ ನಲ್ವತ್ತೆಂಟು ತಾಸು ಸಂಘಟಕರಾದ ನಮ್ಮ ಬದುಕಿನ ರಸನಿಮಿಷಗಳು – ನಿಮಿಷ ನಿಮಿಷವೂ ನಾವು ಬದುಕಿದ್ದು ಉಳಿದವರು ನಮ್ಮನ್ನೆಚ್ಚರಿಸಿದ್ದು – ಮರೆಯಲಾದೀತೆ? ಕಾರಂತರ ಯಕ್ಷಗಾನ ಸೆಮಿನಾರು ತೊಡಗುವಷ್ಟರಲ್ಲಿ ಬೆಂಗಳೂರಿನಲ್ಲಿ ನಮ್ಮ ಅಭಿನಂದನ ಉತ್ಸವಕ್ಕಾಗಿ ಮನಃಪೂರ್ವಕ ದುಡಿದ ಗುಂಡ್ಮಿ ರಾಮಕೃಷ್ಣ ಐತಾಳರೂ, ಮಲ್ಲಿಕಾರ್ಜುನಯ್ಯನವರೂ ತಮ್ಮ ಕೊಡುಗೈತನವನ್ನು ಮೊದಲೇ ಮೆರೆದದ್ದಲ್ಲದೆ ತಮ್ಮ ಗೆಳೆಯರನ್ನೂ ಕಟ್ಟಿಕೊಂಡು ಬಂದು ನಮ್ಮ ಜತೆ ಶ್ರಮಿಸಲು ಸಿದ್ಧರಾದರು. ಪೊಲಿಟೆಕ್ನಿಕಿನ ಧ್ವನಿಶಿಲ್ಪ ಶಾಸ್ತ್ರದ ತಂತ್ರಜ್ಞರಾದ ಮೂರ್ತಿದ್ವಯರು ಒಂದು ಕಾಲಕ್ಕೆ ಕಾರಂತರ ಜತೆ ಕೆಲಸ ಮಾಡಿದವರು. ಅವರೂ ಐತಾಳರ ಗುಂಪಿನಲ್ಲಿ ಸೇರಿಕೊಂಡು ಗಟ್ಟದ ಮೇಲಿಂದ ಬಂದ ಸಾಹಿತಿಗಳ ಯೋಗಕ್ಷೇಮ ನೋಡಿಕೊಳ್ಳುವುದರಲ್ಲಿ ನೆರವಾದರು. ಕಾರ್ಕಳ ಕಾಲೇಜಿನ ಎಂ. ರಾಮಚಂದ್ರನನ್ನು ನನ್ನ ಜತೆ ಕಾರ್ಯಕ್ರಮ ನಿರ್ವಹಣೆಗಾಗಿ ಕರೆದಿದ್ದೆ. ಮೂಡಬಿದರೆಯ ಶೇಖರ ಇಡ್ಯ ಏಕಾಕಿಯಾಗಿ ಕಾರಂತ ಗ್ರಂಥಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತ್ಯದ ಪ್ರದರ್ಶನ ವೊಂದನ್ನು ಕೂಡಿಸಲು ಒಂದು ತಿಂಗಳ ಕಾಲ ಸದ್ದಿಲ್ಲದೆ ಊರೆಲ್ಲ ಅಲೆದು, ಸಂಗ್ರಹಕಾರ್ಯಕ್ಕಾಗಿ ದಣಿದರು. ಹೆಚ್ಚು ಖರ್ಚು ವೆಚ್ಚ ಇಲ್ಲದೆ ಬರಿಯ ಶ್ರದ್ಧೆಯ ಬಂಡವಾಳದಿಂದಲೇ ಅವರು ನಡೆಸಿದ ಪ್ರದರ್ಶನದ ಕಾರ್ಯವನ್ನು ಅಖಿಲ ಕರ್ನಾಟಕಸ್ಥರೆಲ್ಲ ಮನಸಾರೆ ಮೆಚ್ಚಿದರು. ನನ್ನ ಸಹೋಪಾಧ್ಯಾ ಯರು ಹತ್ತು ಮಂದಿ ಅಭ್ಯಾಗತರ ಚಿಲ್ಲರೆ ಕೆಲಸಗಳನ್ನು ತಮ್ಮ ಪರಿಚಯ ನೀಡದೆಯೆ ಮಾಡಿಕೊಟ್ಟು ತಮ್ಮ ಸೌಜನ್ಯವನ್ನೂ, ಆದರ್ಶವನ್ನೂ ಪರಿಪಾಲಿಸಿದರು. ವಿದ್ಯಾರ್ಥಿಗಳಂತೂ ನಮ್ಮ ತರುಣ ಪ್ರಾಧ್ಯಾಪ ಕರ ನೇತೃತ್ವದಲ್ಲಿ ಹಗಲಿರುಳು ಕಣ್ಣಿಗೆ ಎಣ್ಣೆ ಹಾಕಿಕೊಂಡು ಬೇಸರವೇ ಇಲ್ಲದೆ ಆಗಮಿಸಿದ ಅತಿಥಿಗಳ

ಸೇವೆ ಮಾಡಿದರು – ಯಾವ ತಾರತಮ್ಯವೂ ಇಲ್ಲದೆ ಆಟದವರಿರಲಿ, ಕೋಟದವರೇ ಇರಲಿ, ಯಾವ ನಾಗರಿಕ ಕೂಟದವರೇ ಆಗಲಿ ಎಲ್ಲರಿಗೂ ಅವರ ಹಸನ್ಮುಖದ ಸ್ವಾಗತ ಬೆಳಗಿನ ಹಾಸಿಗೆ ಕಾಫಿಯಿಂದ ತೊಡಗಿ ಒಂದು ವಾರದ ತನಕ ವಿಜೃಂಭಿಸಿ ಬಂದವರ ಬಾಯಲ್ಲಿ, ಮನಸ್ಸಿನಲ್ಲಿ ಪ್ರತಿಫಲಿಸಿತು.

ನವಂಬರ 5 – ಮುಂಜಾನೆ 9-30ಕ್ಕೆ ಕಾರಂತ ದಂಪತಿಗೆ ಪೂರ್ಣಕುಂಭ ಸ್ವಾಗತ. ಮಠದ ಬಿರುದಾವಳಿ, ಸಾಲಂಕೃತ ಆನೆಯನ್ನು ಮುಂದಿಟ್ಟುಕೊಂಡು ಮೆರವಣಿಗೆ, ಸಮಾರಂಭದ ಅಧ್ಯಕ್ಷ ಸುನೀತಿ ಕುಮಾರ ಚಟರ್ಜಿ ಅವರನ್ನೂ ಡಾ। ಪೈಯವರನ್ನೂ ಸೇರಿಸಿ ನಮ್ಮ ಕಾಲೇಜಿನ ಮಹಾದ್ವಾರದಿಂದ ರವೀಂದ್ರ ಮಂಟದವರೆಗೆ ಚಿಕ್ಕ ಮೆರವಣಿಗೆ. ಬಿ. ವಿ. ಆಚಾರ್ಯರು ಸ್ವಾಗತಕ್ಕಾಗಿ ತಳಿರುತೋರಣ ಗಳಿಂದ ಪರಿಸರವನ್ನೇ ಅಲಂಕರಿಸಿಬಿಟ್ಟಿದ್ದರು; ಹತ್ತು ಹನ್ನೆರಡು ಬಯಲಾಟದ ವೇಷ ನಿಯೋಜಿಸಿದ್ದರು; ಬಿರುದಾವಳಿ, ಬ್ಯಾಂಡು ಬಜಂತ್ರಿ ಗರ್ನಾಲಿನ ನಡುವೆ ಉತ್ಸವವು ಒಂದೇ ಸಲಕ್ಕೆ ಪುಟ ನೆಗೆಯಿತು. ಕಾರಂತ ದಂಪತಿ ಮತ್ತು ಚಟರ್ಜಿಯವರನ್ನು ಇದಿರ್ಗೊಳ್ಳಲು ಆಗಮಿಸಿದ ಸಕಲ ಸಾಹಿತಿಗಳನ್ನೂ ಮರುದಿಬ್ಬಣವಾಗಿ ಮಾವಿನಮರದಡಿಯ ಬಿಸಿಲಲ್ಲಿ ಅರ್ಧ ತಾಸು ಅಕ್ಷರಶಃ ಕಾಯಿಸಿ ಹದಗೊಳಿಸಿ ನಿಧಾನವಾಗಿ ಕರೆತಂದೆವು. ರವೀಂದ್ರ ಮಂಟಪದ ಬಳಿ ಹೊಕ್ಕು ಮುಖ್ಯ ಪಾತ್ರಧಾರಿಗಳನ್ನು ಕೂರಿಸು ವಷ್ಟಕ್ಕೆ ಎರಡು ಕುರ್ಚಿ ಬಿಕೋ ಅನ್ನುತ್ತಿತ್ತು. ಇದೇನು, ಇದು ಯಾರಿಗೆ? ಎಂದು ಯೋಚಿಸಿದಷ್ಟಕ್ಕೆ ಕಣ್ಣು ಕತ್ತಲಾಗುವಂಥ ಒಂದು ವಿದ್ಯಮಾನ ನಡೆದುಹೋಗಿತ್ತು. ಮೆರವಣಿಗೆಯಲ್ಲಿ ಬರಬೇಕಾಗಿದ್ದ ಕನ್ನಡ ವಿ.ಸೀ (ವಿ. ಸೀತಾರಾಮಯ್ಯ) ಮತ್ತು ನಮ್ಮ ವಿಶ್ವವಿದ್ಯಾನಿಲಯಕ್ಕೆ ಆಗತಾನೇ ನೇಮಿತರಾದ ಇಂಗ್ಲಿಷ್ ವಿ.ಸೀ (ಶ್ರೀ ಜವರೇಗೌಡ) ಅವರಿಬ್ಬರನ್ನೂ ಮಹಡಿ ಮೇಲಿನ ನನ್ನ ಕೊಠಡಿಯಲ್ಲೆ ಇರ ಗೊಟ್ಟು, ಮೆರವಣಿಗೆಯ ಅಬ್ಬರಕ್ಕೆ 'ತನ್ನ ಕಾವ್ಯಕೆ ತಾನೆ ಮಣಿಯುವ' ಕವಿಯಂತೆ ನಾನೇ ಬೆಕ್ಕಸಬೆರ ಗಾಗಿ, ಕರ್ತವ್ಯಭ್ರಷ್ಟನಾಗಿದ್ದೆ. ಬಿ. ವಿ. ಆಚಾರ್ಯರ ಪ್ರಸಂಗಾವಧಾನ, ಬುದ್ಧಿವಂತಿಕೆಯ ದೆಸೆಯಿಂದ ಈ ಪ್ರಥಮ ಅವಘಡದಿಂದ ಪಾರಾದೆ. ಮೇಲಿನಿಂದಲೇ ರತ್ನಾಕರವರ್ಣಿಯ ಉಪ್ಪರಿಗೆ ಸಂಧಿಯಲ್ಲಿದ್ದ ಇಬ್ಬರು ವಿ.ಸೀ ಅವರೂ ಇನ್ನೇನು ಹೋಗಿ ಸೇರಿಕೊಳ್ಳೋಣ ಎಂದು ನಿರಾಶೆಯಿಂದ ಬರುವಷ್ಟಕ್ಕೆ ಎರಡನೇ ದಿಬ್ಬಣ ಹೊರಡಿಸಿಬಿಟ್ಟಾಗಿತ್ತು. ಮಠದ ಆನೆ ಅವರನ್ನು ಇದಿರ್ಗೊಂಡು ಚಾಮರಸೇವೆ ನಡೆಸಿ ರವೀಂದ್ರ ಮಂಟಪ ಮುಟ್ಟಿಸಿತು. ಇದೇನು ವಿಶ್ವವಿದ್ಯಾನಿಲಯದ ಉಪಕುಲಪತಿಗಳಿಗಾಗಿ ಪ್ರತ್ಯೇಕ ಮೆರವಣಿಗೆ ಮಾಡಿಸಿದರಲ್ಲಾ? ಎಂದು ನನ್ನ ಕೆಲವು ಹಿತೈಷಿಗಳು ಗೊಣಗುತ್ತಿರುವುದರೊಳಗೆ ಕಾರ್ಯಕ್ರಮ ಆರಂಭವಾಗಿಬಿಟ್ಟಿತು. ದಾರಿಯಲ್ಲಿ ಇಂಥ ಕಾರ್ಯಕ್ರಮದ ಅಪ್ಪಿತ ತಪ್ಪಿತಗಳ ಸ್ವಾನುಭವ ವುಳ್ಳ ಜವರೇಗೌಡರು ಇದೇನು ಹೆಣ್ಣಿನ ಕಡೆಗೆ ಬೇರೆ ದಿಬ್ಬಣ ತೆಗೆದಿರಲ್ಲಾ ಎಂದು ನಮ್ಮ ಗುಟ್ಟು ತಿಳಿದಂತೆ ನಕ್ಕು ನುಡಿದರು. ವಿ.ಸೀ. ಅವರಿಗಂತೂ ನಮ್ಮ ಪೇಚು ಕೊನೆಯವರೆಗೂ ತಿಳಿಯಲಿಲ್ಲ. ಅಷ್ಟು ಕ್ಷಿಪ್ರವಾಗಿ ಎರಡನೇ ಮೆರವಣಿಗೆ ತೆಗೆದಿದ್ದರು – ನಮ್ಮ ಆಚಾರ್ಯರು.

ವಯೋಜ್ಞಾನವೃದ್ಧರೂ, ಭಾರತೀಯ ಭಾಷಾ ಸಾಹಿತ್ಯಸಾರ್ವಭೌಮರೂ ಆದ ಬಂಗಾಳದ ಸುನೀತಿ ಕುಮಾರ ಚಟರ್ಜಿಯವರು ನಮಗೆ ದೊರೆತದ್ದೊಂದು ಮಹಾಭಾಗ್ಯ. ಇಲ್ಲಿಂದ ನಾನು ದಿಲ್ಲಿಗೆ ಬರೆದ ಪತ್ರ ಕಲ್ಕತ್ತೆಗೆ ತೆರಳಿ ದಾರ್ಜಲಿಂಗಿನ ಪ್ರವಾಸದಲ್ಲಿದ್ದ ಚಟರ್ಜಿಯವರ ಸಮ್ಮತಿ ಬಂದಂದಿನಿಂದ ಅವರ ಬೆನ್ನುಹಿಡಿದು, ಅವರ ದಿಲ್ಲಿ ವಿಳಾಸಕ್ಕೆ ಮರಳಿ ಮಣ್ಣಿಗೆಯ ಇಂಗ್ಲಿಷ್ ಅನುವಾದ ಕಳಿಸಿ, ನಾಲ್ಕು ದಿನ ಮುಂಚಿತವಾಗಿ ಅವರ ಅಧ್ಯಕ್ಷೀಯ ಭಾಷಣದ ಹಸ್ತಪ್ರತಿ ತರಿಸಿ ಮುದ್ರಿಸುವ ವ್ಯವಸ್ಥೆ ಮಾಡಿದ್ದೆ. ಹಳೇ ತಲೆಮಾರಿನ ಜನದ ಶ್ರದ್ಧೆ, ಆಸಕ್ತಿಗಳಿಗೆ ಸಾಕ್ಷಿಯಾದಂತೆ ಚಟರ್ಜಿಯವರು "ಕರ್ನಾಟಕ, ಕೊಂಕಣ ಮತ್ತು ಶಿವರಾಮ ಕಾರಂತ" ಎಂಬ ಘನತರ ಪ್ರಬಂಧವನ್ನೇ ಬರೆದು ತಂದಿದ್ದರು. ಅಡಿಗಡಿಗೆ ಗೋವಿಂದ ಪೈ ಅವರನ್ನು ನೆನಪಿಸುತ್ತಿದ್ದ ಅವರ ಭಾಷಣದ ಶೈಲಿ, ಓಘ, 'ಮರಳಿ ಮಣ್ಣಿಗೆ'ಯನ್ನು ಭಾರತೀಯ ಕೃತಿರತ್ನವೆಂದು ಅವರು ಮರ್ಮಸ್ಪರ್ಶಿಯಾಗಿ ಅನುಭವಿಸಿ ಆಡಿದ ಮಾತು – ಭಾರತೀಯ ಸಾಹಿತ ದೇವತೆ ಕಾರಂತರ ಸಾಹಿತ್ಯ ವ್ಯವಸಾಯಕ್ಕೆ 'ಅಸ್ತು' ಎಂದಹಾಗಿತ್ತು. 80ರ ಹಿರಿತನದಲ್ಲೂ ಚಟರ್ಜಿ ಲವಲವಿಕೆ ಹೇಳತೀರದು – ಯಾವ ಕಾರ್ಯಕ್ರಮಕ್ಕೂ ಹಾಜರು. ಶೇಖರ ಇಡ್ಯ ಏರ್ಪಡಿಸಿದ ಕಾರಂತ ಮತ್ತು ದ. ಕ. ಜಿಲಾ ಸಾಹಿತ್ಯ ಪ್ರದರ್ಶನದಲ್ಲಿ ಎರಡು ತಾಸು ಕೂಲಂಕಷ ಪ್ರಶ್ನೆಗಳನ್ನು ಕೇಳಿ ದಣಿ

ಯದು ಅವರ ಕುತೂಹಲ ಬುದ್ಧಿ. ನಮ್ಮ ಊರಿನ ಹೋಳಿಗೆಯನ್ನು ಬಹಳ ಮೆಚ್ಚಿಕೊಂಡರು.ಅಲ್ಲದೆ ಸಾಹಿತ್ಯಜ್ಞರಿಗೆ ಈ ರೀತಿ ಗೌರವ ನೀಡುವ ಸಂಪ್ರದಾಯವನ್ನು ಮನಸಾ ಹೊಗಳಿದರು. ಅಭಿನಂದನ ಪರ ಉಪನ್ಯಾಸಗಳನ್ನು ಚೊಕ್ಕಾ-ಚುಟುಕಾಗಿ ಮಾಡಿದ ಕೆ. ಕೆ. ಹೆಬ್ಬಾರರು, ಸಿಂಪಿ, ಟಿ. ಎ. ಪೈ ಅವರು, ದೇಜಗೌ ಅವರು ಸಾಯಂಕಾಲದ ಕಾರ್ಯಕ್ರಮವನ್ನು ಒಂದು ಆತ್ಮೀಯ ಘಟನೆಯಾಗಿ ಪರಿವರ್ತಿಸಿದರು. ಕಾರಂತರ ಉತ್ತರ ಮಾತ್ರ – ಸಾಹಿತಿಗಳ ಬಗ್ಗೆ ಮಾಡಿದ ಕಟು ವಿಮರ್ಶೆ ಬಿಟ್ಟರೆ – ರಸಮಯವಾದ ಒಂದು ಅಪೂರ್ವ ಅನುಭವವೇ ಆಯಿತು. ನಿರಾತಂಕವಾದ, ಸ್ಪಷ್ಟವಾದ ಈ ಆತ್ಮ ನಿವೇದನೆಯಲ್ಲಿ ಯಾವ ಅಲಂಕಾರವೂ ಇಲ್ಲದೆ ತಾನು ಬದುಕಿದ ಬಾಳಿನ ನೆಲೆಸೆಲೆಗಳನ್ನು, ತಾನು ಮೆಚ್ಚಿದ ಬೆಲೆ–ಕಲೆಗಳನ್ನು ಸಂಕ್ಷಿಪ್ತವಾಗಿ ಪ್ರಾಮಾಣಿಕವಾಗಿ ಸಭಿಕರ ಮುಂದೆ ಇರಿಸಿದರು. 'ಬಂಧುವರ್ಗದ ನಡುವೆ ನಿಂತ ಅರ್ಜುನನ ಸ್ಥಿತಿ ನನ್ನದಾಗಿದೆ' ಎಂದು ಅವರನ್ನುವಾಗ ಅವರ ಹಲವು ಅಣ್ಣಂದಿರ, ಸ್ನೇಹಿತ ವರ್ಗದ ಹೃದಯ ಉಮ್ಮಳಿಸಿತು. ಅರ್ಥದಲ್ಲಿ, ಮಾತಿನ ಒತ್ತಿನಲ್ಲಿ – ಇದು ಕಾರಂತರ ಅತ್ಯಂತ ಮಹತ್ವಪೂರ್ಣ ಭಾಷಣವಾಯಿತು. ಅದರ ಪೂರ್ತ ಶಕ್ತಿ ಮುದ್ರಣದಲ್ಲಿ ಬಂದಿಲ್ಲವೆಂದು ಅಂದಿನ ಸಭೆಗೆ ಹಾಜರಿದ್ದವರೆಲ್ಲ ಬಲ್ಲರು. ಆ ಪರಿಸರ, ಆಗ ಏರ್ಪಟ್ಟ ಮಾನವೀಯ ಸಂಬಂಧ ಅಂಥದಾಗಿತ್ತು.

ಕನ್ನಡ ಕಾದಂಬರಿಗಳು, ಪಠ್ಯಪುಸ್ತಕಗಳು, ಪತ್ರಿಕೆಗಳು – ಈ ಕುರಿತು ಮೂರು ಸೆಮಿನಾರು ನಿಯೋಜಿಸಿದ್ದೆ. ಇದಕ್ಕೆ ಬರೆಸಿದ ಪ್ರಬಂಧಗಳನ್ನೆಲ್ಲ ಈ 'ಅಭಿವಂದನ'ದಲ್ಲಿ ಅಚ್ಚು ಹಾಕಿಸಿದೆ. ಇದು ಕೊನೆಗಳಿಗೆಯ ಕಸಿಯಾದ್ದರಿಂದ ಕೆಲವು ವಿಷಯಗಳಲ್ಲಿ ಬರೆಯುತ್ತೇನೆ, ಬರೆಯುತ್ತೇನೆ ಅಂದವರು ನಿರ್ಯೋಚನೆಯಿಂದ ಕೈಕೊಟ್ಟದ್ದರಿಂದ ಪ್ರಬಂಧಗಳ ಗುಣ ಸಮಾನವಾಗಿಲ್ಲದಿರಬಹುದು; ಆದರೂ ಪ್ರಾಮಾಣಿಕ ಪ್ರಯತ್ನವೆಂಬ ದೃಷ್ಟಿಯಿಂದ ಇದನ್ನು ಸ್ವಾಗತಿಸಬೇಕು. ಎಲ್ಲಾ ಗೋಷ್ಠಿಗಳಲ್ಲಿಯೂ ಸೇರಿದ ಸಾಹಿತಿಗಳೂ ವಿಮರ್ಶಕರೂ ಮುದ್ದಾಂ ಬಾಯಿಗೆ ಬೀಗ ಹಾಕಿ ಕೂತಹಾಗಿತ್ತು. ಅದೇನು ಮಾನಸಿಕ ದ್ವಂದ್ವವೋ, ವಿನಯವೋ, ಬಿಗುಮಾನವೋ, ಕಾರಂತರ ಅಂಜಿಕೆಯೋ, ಬಾಯಿಬಿಟ್ಟರೆ ಕೆಟ್ಟೆ ವೆಂಬ ಅಳುಕೋ ತಿಳಿಯದು. ಕನ್ನಡ ನಾಡಿನ ಸುಪ್ರಸಿದ್ಧ ವಿಮರ್ಶಕರೆಲ್ಲ ತಣ್ಣಗೆ ಕೂತಿರುತ್ತಿದ್ದರು. ಖಾಲಿಯಾದ ಸ್ಥಳ ತುಂಬಿಕೊಡುವಂತೆ ಕೊನೆಗೆ 'ಮದುಮಗ'ನಾದ ಕಾರಂತರೇ ಸ್ವಧರ್ಮ ಪರಿಪಾಲನೆಯ ದೃಷ್ಟಿಯಿಂದ ಮಾತಿಗಿಳಿಯುತ್ತಿದ್ದರು. ಪತ್ರಿಕಾಗೋಷ್ಠಿಯಲ್ಲಿ ಅವರೆಂದ ಹತ್ತು ಹಲವು ವಿಚಾರಗಳಲ್ಲಿ ಪತ್ರಿಕೋದ್ಯಮ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅಂಶಗಳೆಷ್ಟೋ ಅನಾಯಾಸ ಬಂದುವು. ಕಾದಂಬರಿಗಳ ಮೇಲೆ ಅಧಿಕೃತ ವಾಣಿಯಿಂದ ಬರೆಯಬಲ್ಲ, ಆಡಬಲ್ಲ ಎಂ. ಜಿ. ಕೃಷ್ಣಮೂರ್ತಿ ಐದು ಮಿನಿಟಿನೊಳಗೆ ತಮ್ಮ ಅಧ್ಯಕ್ಷೀಯವನ್ನು ಔಪಚಾರಿಕವಾದ ರೀತಿಯಲ್ಲಿ ಮುಗಿಸಿ ತೆಪ್ಪಗಾದರು. ಇಲ್ಲಿ ನನ್ನದೂ ಒಂದು ಅಪರಾಧವಾಯಿತು. ನಾನು ಹೀಗೇ ಗೋಷ್ಠಿ ನಡೆಯಬೇಕೆಂದು ಮುಕ್ತಾ ಹೇಳಲಿಲ್ಲ – ಬರೆದು ಕೊಟ್ಟಿದ್ದೆ. ಪ್ರಾಯಃ ನಮ್ಮಂಥ ಸೃಷ್ಟಿಶೀಲ ಕವಿ ವಿಮರ್ಶಕರಿಗೆ ಬುದ್ಧಿ ಹೇಳುವವ 'ಯೂರಿವನು ?' ಎಂದಿರಬಹುದು. ಅಥವಾ ನನ್ನ ಗೈರುಹಾಜರಿಯ ಸದುಪಯೋಗವನ್ನೂ ಅವರು ಮಾಡಿಕೊಂಡಿದ್ದಾರು. ಅಂತೂ ಅಷ್ಟೊಂದು ಸಾಹಿತಿಗಳನ್ನು ಒಂದೇ ಬುಟ್ಟಿಯಲ್ಲಿ ಸೇರಿಸಿಯೂ ಅವರು ಅರಚದೆ ಪರಚದೆ 'ಮೌನಂ ಪಂಡಿತ ಲಕ್ಷಣಂ' ಎನಿಸಿದ್ದು, ನೂರಾರು ಸಾಹಿತ್ಯ ಭಕ್ತರ ದೃಷ್ಟಿಯಿಂದ ಒಂದು ರೀತಿಯ ಅಪರಾಧವೆನಿಸಿತು. ಚರ್ಚೆ ಮಸಗಲಿ ಎಂದು ನಾನು ಸ್ವಾತಂತ್ರ್ಯ ಕೊಟ್ಟದ್ದೇ ತಪ್ಪಾಯಿತು; ಎಲ್ಲರಿಗೂ ಹತ್ತು ಮಿನಿಟು ಭಾಷಣ ಮಾಡಿ ಎಂದರೆ ಸಭಾಸದರೂ ಸಂತೃಪ್ತರಾಗುತ್ತಿದ್ದರು. ಅಂತೂ ಕಾರಂತರಲ್ಲದೆ ಹೋಗಿದ್ದರೆ ನಮ್ಮ ಗೋಷ್ಠಿ ಕೇವಲ ಪ್ರಬಂಧವಾಚನದ ಅಣಕು ಪ್ರಹಸನವಾಗುತ್ತಿತ್ತು.

ಆರನೇ ತಾರೀಕೆಲ್ಲ ಕಾರಂತರು ಸಾಹಿತಿಗಳು ವಾಸಮಾಡುತ್ತಿದ್ದ ಅತಿಥಿಗೃಹದಲ್ಲಿ ಬಂದ ಸಾಹಿತಿಗಳೊಡನೆ ಹರಟುತ್ತ ಕಾಲ ಕಳೆದರು. ಇದು ಕಿರಿಯ ಸಾಹಿತಿಗಳಿಗೆ ದೊಡ್ಡ ಪ್ರಸಾದದಂತೆ ಕಂಡಿತು. ನನ್ನನ್ನೇ ಬೇಕಾದರೆ ಬಂದು ನೋಡಲಿ ಎನ್ನುವ ದೊಡ್ಡಸ್ತಿಕೆ ಎಲ್ಲಿ, ತನ್ನ ಸಲುವಾಗಿ ಬಂದವರನ್ನು ತಾನೇ ನೋಡಬೇಕೆನ್ನುವ ಕರ್ತವ್ಯಪ್ರಜ್ಞೆ ಎಲ್ಲಿ?

ಮರುದಿನ ಮುಂಜಾನೆ ಬಂದವರೆಲ್ಲ ಹೊರಡುವ ನಿಷ್ಕ್ರಮಣ ದೃಶ್ಯ. ಯಾರಿಗೂ ಹೊರಡಲು

ಇಚ್ಛೆ ಇಲ್ಲ. ವಿ. ಸೀತಾರಾಮಯ್ಯನವರು ತಮ್ಮ ಮಕ್ಕಳಿಗೆ ದಕ್ಷಿಣ ಕನ್ನಡ ಜಿಲ್ಲೆ ತೋರಿಸಿ ಸಂತೃಪ್ತರಾಗಿ ಮಧ್ಯಾಹ್ನದ ಊಟ ತೀರಿಸಿ ಹೊರಟರು. ಅವರ ಜತೆ ಕಾರಂತ ಭಕ್ತರಾದ ಗುಂಡ್ಮಿ ರಾಮಕೃಷ್ಣ ಐತಾಳರೂ, ಮಲ್ಲಿಕಾರ್ಜುನಯ್ಯ, ಮರುಳಪ್ಪನವರೂ ವಿ.ಸೀ ಅಂಗರಕ್ಷಕರಂತೆ ತೆರಳಿದರು. ಚಟರ್ಜಿಯವರ ಕಾರ್ಯದರ್ಶಿಯನ್ನು ಮುಂಬೈಗೆ ಮುಟ್ಟಿಸಬೇಕಾಗಿದ್ದ ಬಲ್ಲಾಳ ಸರ್ವಿಸಿನವರ ವಂಚನೆಯಿಂದಾಗಿ ನಮಗೆ ಅವರನ್ನು ಕಾರಲ್ಲಿ ಮುಂಬಯಿ ಮುಟ್ಟಿಸುವ ಅಧಿಕ ಹೊಣೆ ಬಿತ್ತು. ಅದೊಂದು ಮೂರು ತಾಸು ಸಂಧಿಕಾಲದಂತೆ ಕಳೆದುಹೋಯಿತು. ಗಂಭೀರ ನಾಟಕವು ಕೊನೆಯಂಕದಲ್ಲಿ ಪ್ರಹಸನವಾಗಿ ರೂಪುಗೊಂಡು ನಮ್ಮ ಕಷ್ಟಪರಂಪರೆ ಹೇಗೋ ನೀಗುತ್ತಿತ್ತು. ಚಟರ್ಜಿ ಹೆಬ್ಬಾರರನ್ನು ಮರುದಿನ ವಿಮಾನಕ್ಕೆ ಮುಟ್ಟಿಸಿ ಬಂದಾಗ ನನ್ನ ತಲೆಯ ಮೇಲಿನ ದೊಡ್ಡ ಹೊರೆ ಇಳಿಯಿತು.

ಯಾವನೇ ಒಬ್ಬ ಸಾಹಿತಿಗೆ ನೋವಾಗದಂತೆ ಉಪಚಾರ, ಸೌಕರ್ಯ, ಸೇವೆ ಒದಗಿಸಿದ ಸ್ವಯಂಸೇವಕವರ್ಗ – ಮುಖ್ಯವಾಗಿ ವಿದ್ಯಾರ್ಥಿಗಳಿಗೆ – ಕಾರಂತರೇ ಸ್ವಪ್ರೇರಣೆಯಿಂದ ಬಹಿರಂಗವಾಗಿ ಶಾಭಾಸೆಂದರು. ಇಂಥ ಉಪಾಧ್ಯಾಯ – ಶಿಷ್ಯ ಸಂಬಂಧ ಇರುವಲ್ಲಿ ವಿದ್ಯಾರ್ಥಿ ಸಮಸ್ಯೆ ಹೇಗೆ ಬಂದೀತು? ಎಂದರು. ಅಂದು ಸಂಜೆ ನಮ್ಮ ಸ್ವಯಂಸೇವಕರಿಗೆ ವಿದಾಯ ಕೊಡುವುದು ನನಗೆ ಭಾರೀ ಕಷ್ಟವಾಯಿತು. ಒಂದು ವಾರದಿಂದ ರಾತ್ರಿ ಹಗಲು ನನ್ನ ಆಜ್ಞೆ, ಕೇಳಿಕೆ, ಹೇಳಿಕೆ, ಸಿಡುಕು, ರೇಗನ್ನೆಲ್ಲ ತಡೆದುಕೊಂಡ ಅವರ ಮಹೋನ್ನತ ಔದಾರ್ಯಕ್ಕೆ ನಾನು ಸುಖಾಶ್ರುಗಳಿಂದ ನನ್ನ ಕೃತಜ್ಞತೆಯ ಧಾರೆಯೆರೆದೆ. ಅಂಥ ಸಮಗ್ರವಾದ ಉತ್ಸವವನ್ನು ಮೇಲಿಂದ ಮೇಲೆ ನಮ್ಮ ಕೈಯಿಂದ ಮಾಡಿಸುವ ಧೈರ್ಯ, ಹಿನ್ನೆಲೆಯನ್ನೊದಗಿಸುತ್ತಿರುವ ಮಣಿಪಾಲದ ಹಿರಿಯ ಕ್ರತುಶಕ್ತಿಗೆ ಎಲ್ಲರಪರವಾಗಿ ವಂದನೆ ಸಲ್ಲಿಸಿದೆ. ಪ್ರಾಧ್ಯಾಪಕರನ್ನು ಗಾಡಿಎತ್ತುಗಳಂತೆ ದುಡಿಸಿ ದಣಿಯಿಸಿದ ಪಾಪಕ್ಕೆ ಪ್ರಾಯಶ್ಚಿತ್ತ ಕೋರಿದೆ. ನನ್ನ ಗುರುಗಳ ಕೈಯಿಂದ ಊಟದ ವ್ಯವಸ್ಥೆ ಮಾಡಿಸಿದ ತಪ್ಪಿಗೆ ಪ್ರಾಯಶ್ಚಿತ್ತರೂಪವಾಗಿ ಸುವರ್ಣದಾನ ಮಾಡಿದೆ. ನನ್ನ ಮೇಲೆ ಇಷ್ಟೊಂದು ಜನ ತೋರಿದ ಪ್ರೀತಿ ವಿಶ್ವಾಸಗಳ ಭಾರಕ್ಕೆ ನಾನು ಕುಗ್ಗಬೇಕಾಗಿತ್ತು, ಆದರೆ ಹಿಗ್ಗಿದೆ. ಮತ್ತೊಂದು ತಿಂಗಳ ಅವಧಿಯಲ್ಲಿ ಅಭ್ಯಾಗತ ಸಾಹಿತಿಗಳಿಂದ ಬಂದ ಓಲೆಗಳನ್ನು ಓದುವಾಗ ಯಾರಿಗೆ ತಾನೇ ಧನ್ಯತೆ ಮೂಡದು?

ಂ ಂ ಂ

ಕ್ರಿಯಾಶೀಲ, ಸೃಷ್ಟಿಶೀಲ ಸಾಹಿತ್ಯಕ್ಕೆ ಇಂಥ ಉತ್ಸವಗಳ, ನನ್ನಂಥ ಸಂಘಟಕರ ಅನಿವಾರ್ಯತೆ ಇಲ್ಲವೆಂದು ನಾನು ಬಲ್ಲೆ. ಆದರೆ ಸಾಹಿತ್ಯದ ಸಂದೇಶ ಜನಗಣಮನದಲ್ಲಿ ಒಂದಿಷ್ಟಾದರೂ ಪಸರಿಸುವಲ್ಲಿ, ನಮ್ಮ ನಾಡಿನ ಸಾಮಾಜಿಕ ಪರಿಸರದಲ್ಲಿ, ಸಾಹಿತಿ – ವಿಮರ್ಶಕ – ವಾಚಕರ ಅನ್ಯೋನ್ಯ ಸಂಬಂಧದ ಮಧುರ ಆವಿರ್ಭಾವದಲ್ಲಿ, ಅಷ್ಟೋ ಇಷ್ಟೋ ಅವಿನಾಭಾವೋದಯ ರಸಪ್ರಸಂಗದಲ್ಲಿ, ನನ್ನಂಥ ದಪ್ಪ ತೊಗಲಿನ ಕುರಿಗಳು ಅಗತ್ಯ ಎಂದುಕೊಂಡಿದ್ದೇನೆ. ಕಾರಂತ ಉತ್ಸವದ ವರದಿ ಸಲ್ಲಿಸುವ ಈ ಸಂದರ್ಭವನ್ನು ನನ್ನ ಸಂತೋಷ ತೋಡಿಕೊಳ್ಳಲು ಬಳಸಿಕೊಂಡೆನೇ ವಿನಾ ಯಾರನ್ನೂ ನೋಯಿಸುವುದು ನನ್ನ ಉದ್ದೇಶವಾಗಿಲ್ಲ. ಹಾಗೆ ನೋಯಿಸಿದರೆ ನನ್ನ ಮುಂದಿನ ಸಮ್ಮೇಳನಕ್ಕೆ ಅವರು ಬರದೆಹೋದರೆ?

ಅಭಿವಂದನ: ಕೋಟ ಶಿವರಾಮ ಕಾರಂತರಿಗೆ ಅರುವತ್ತೇಳು ತುಂಬಿದಾಗ ಅಖಿಲ ಕರ್ನಾಟಕ ಸಾಹಿತಿ ಮತ್ತು ಸಾಹಿತ್ಯಾಭಿಮಾನಿಗಳು ಸೇರಿ ಉಡುಪಿಯಲ್ಲಿ ನಡೆಸಿದ ಎರಡು ದಿನಗಳ ಅಭಿನಂದನ ಉತ್ಸವದ ಸಂಭ್ರಮ ಮತ್ತು ಕಾರ್ಯಕಲಾಪಗಳ ವಿಸ್ತೃತ ವರದಿ ಸಲ್ಲಿಸುವ ಈ ಸ್ಮೃತಿ ಸಂಪುಟದಲ್ಲಿ ಡಾ. ಸುನೀತಿ ಕುಮಾರ ಚಟರ್ಜಿ ಅವರ ಅಧ್ಯಕ್ಷ ಉಪನ್ಯಾಸ; ಸರ್ವಶ್ರೀ ಕೆ. ಕೆ. ಹೆಬ್ಬಾರ, ಟಿ. ಎ. ಪೈ, ಎ. ಸೀತಾರಾಮಯ್ಯ, ದೇ ಜವರೇ ಗೌಡ, ಸಿಂಪಿ ಲಿಂಗಣ್ಣ, ಎಂ. ಗೋಪಾಲಕೃಷ್ಣ ಅಡಿಗ ಅವರ ಅಭಿನಂದನಪರ ಉಪನ್ಯಾಸ; ಶಿವರಾಮ ಕಾರಂತರ ಅಂತಃಕರಣ ಪೂರ್ವಕ ಉತ್ತರ; ಕನ್ನಡ ಪತ್ಯಗಳ ಕುರಿತು ಜೆ. ಆರ್. ಲಕ್ಷ್ಮಣರಾವ್ ಮತ್ತು ಉದ್ಯಾವರ ಮಾಧವಾಚಾರ್ಯ ಇವರ ಪ್ರಬಂಧಗಳು; ಕನ್ನಡ ಕಾದಂಬರಿಗಳ ಕುರಿತು ರಾವ ಬಹಾದ್ದೂರ, ಜಿ. ಎಸ್. ಆಮೂರ, ಬನ್ನಂಜೆ ಗೋವಿಂದಾಚಾರ್ಯ ಅವರ ಪ್ರಬಂಧಗಳು; ಕನ್ನಡ ಪತ್ರಿಕೆಗಳ ಕುರಿತು ಸೇವ ನಮಿ ರಾಜಮಲ್ಲ ಮತ್ತು ಹ. ವೆಂ. ನಾಗರಾಜ ಅವರ ಪ್ರಬಂಧಗಳು; ಉತ್ಸವ ಮತ್ತು 'ಕಾರಂತ ಪ್ರಪಂಚ'ದ ಪತ್ರಿಕಾ ವಿಮರ್ಶೆ; ಅಭ್ಯಾಗತರಿಂದಲೂ ಅನಾಗತರಿಂದಲೂ ಬಂದ ಓಲೆಗಳು; ಹಾಗೂ ಸಮ್ಮೇಳನಕಾರನ ನಿವೇದನೆ – ಇಷ್ಟು ರುಚಿಕಟ್ಟಾದ ಸಾಮಗ್ರಿ ಒದಗಿಸಲಾಗಿದೆ. ಕನ್ನಡದ ಅತ್ಯಂತ ಪ್ರಭಾವಶಾಲಿ ವ್ಯಕ್ತಿಯೊಬ್ಬನ ಅಭಿನಂದನ ಉತ್ಸವದ ಸುತ್ತಲೂ ಹೆಣೆಯಲಾದ ವಿಚಾರಗೋಷ್ಠಿಯ ಔತಣ.

ಮಣಿಪಾಲ ಪವರ್ ಪ್ರೆಸ್, ಮಣಿಪಾಲ.